# ಹರಿಭಕ್ತಿ ಸುಧೆ

ಲೇಖಕರು:

ರಂಗನಾಥ ರಾಮಚಂದ್ರ ದಿವಾಕರ

ಎಮ್. ಎ., ಎಲ್ ಎಲ್. ಬಿ.

ಅಧ್ಯಾತ್ಮ ಕಾರ್ಯಾಲಯ

ಹುಬ್ಬಳ್ಳಿ.

೧೯೩೮

ಬೆಲೆ : ೨ರೂಪಾಯಿ

# ಅನುಕ್ರಮಣಿಕೆ

## ಪರಿಶಿಷ್ಟಗಳು

# ವೈ. ಪದ್ಮನಾಭಾಚಾರ್ಯ ಬೈಚವಾಳರು



( ವೈಕುಂಠವಾಸಿಯಾದುದು ೨-೬-೩೬ )

ಶಾ. ಶ. ೧೮೫೮. ಧಾತೃನಾಮ ಸಂ. ಜೇಷ್ಟ ಶುದ್ಧ ೧೨

ಆಚಾರ್ಯರು ಸದ್ಧರ್ಮಾಭಿಮಾನಿಗಳು; ಧರ್ಮದ ತಿರುಳನ್ನು ಬಲ್ಲವರು, ದೇಶಾಭಿಮಾನಿಗಳು ಹಾಗು ರಾಷ್ಟ್ರೀಯಮನೋವೃತ್ತಿಯವರು. ಮುಮುಕ್ಷು ಧರ್ಮ ಮಾರ್ಗದಲ್ಲಿ ಅವರು ಮಧ್ವಮತದ ದ್ವೈತಸಾಂಪ್ರದಾಯಿಗಳಾದರೆ ರಾಷ್ಟ್ರಧರ್ಮ ಮಾರ್ಗದಲ್ಲಿ ಲೋ. ಟಿಳಕ ಪಂಥದ ರಾಷ್ಟ್ರೀಯ ಸಾಂಪ್ರದಾಯಿಗಳು. ತಮ್ಮ ಸರ ಕಾರಿ ಸೇವಾವೃತ್ತಿಯನ್ನು ಇವರು ಈ ಉಭಯ ಧರ್ಮಮಾರ್ಗಗಳಲ್ಲಿ ಎಂದೂ ಅಡ್ಡ ಬರಗೊಡಲಿಲ್ಲ. ೧೯೩೬ನೇ ಇಸ್ವಿಯ ಜೂನ ತಿಂಗಳ ೨ನೇ ತಾರೀಖಿಗೆ ಇವರು ವೈಕುಂಠವಾಸಿಗಳಾದರು. ಇವರಿಗೆ ಸಂತಾನವಿರಲಿಲ್ಲ. ದತ್ತಕದ ಮೋಹವು ಆಚಾರ್ಯರನ್ನಾಗಲಿ, ಅವರ ಧರ್ಮಪತ್ನಿಯನ್ನಾಗಲಿ ಎಂದೂ ಸೋಂಕಲಿಲ್ಲ. ಆಚಾರ್ಯರು ಪ್ರಾಯಃ ತಮ್ಮ ಯಾವತ್ತೂ ಆಸ್ತಿಯನ್ನು ಬ್ರಾಹ್ಮಣ ವಿದ್ಯಾರ್ಥಿಗಳ ಔದ್ಯೋಗಿಕ ವಿದ್ಯಾಭ್ಯಾಸಕ್ಕಾಗಿ ಮೃತ್ಯುಪತ್ರದಿಂದ ಕೊಟ್ಟುಬಿಟ್ಟಿರುವರು.

# ಸತಿ ಸಾಧ್ವಿ ಇಂದಿರಾಬಾಯಿ ಬೈಚವಾಳ



**( ವೈಕುಂಠವಾಸಿಯಾದುದು ೧೧ - ೬ - ೩೬ )**

**ಶಾ. ಶ. ೧೮೫೮. ಧಾತೃನಾಮ ಸಂ. ಜೇಷ್ಟ ಶುದ್ಧ ವದ್ಯ ೬**

ಇವರು ಪದ್ಮನಾಭಾಚಾರ್ಯ ಬೈಚವಾಳರ ಧರ್ಮಪತ್ನಿ. ಸಾಯುವ ವರೆಗೆ ಪತಿಸೇವೆಯನ್ನು ಮಾಡಿ ಪತಿಯು ಕಾಲವಶವಾದ ಕೂಡಲೇ ತಾನು ಎಂದೂ ವೈಧವ್ಯ ವನ್ನು ಅನುಭವಿಸಲಿಕ್ಕಿಲ್ಲವೆಂಬ ಭೀಷ್ಮಪ್ರತಿಜ್ಞೆಯನ್ನು ಮಾಡಿದರು. ಪತಿಯ ಮರಣದ ನಂತರ ಒಂದು ಹನಿ ಕಣ್ಣೀರನ್ನು ಹಾಕದೆ ೧೦ನೆಯ ದಿವಸ ಜಲಸಮಾಧಿ ಯನ್ನು ಹೊಂದಿದರು.

ಅವರ ಭಾವನ ಮಗನಾದ ರಾಮಾಚಾರ್ಯ ಬೈಚವಾಳರು ದತ್ತಕವನ್ನು ಮಾಡಿಕೊಳ್ಳಬೇಕಾಗಿತ್ತು ಎಂದು ಅನ್ನಲು ಇಂದಿರಾಬಾಯಿಯುವರು " ದತ್ತಕದಿಂದ ಯಾವಗತಿಯಾಗುವದೆಂಬುದು ಮನಗಂಡದ್ದಿದೆ. ನನ್ನ ಪತಿಯು ಮಾಡಿಟ್ಟ ವ್ಯವಸ್ಥೆ ಯಿಂದ ವಿದ್ಯಾರ್ಜನೆ ಮಾಡುವ ಪ್ರತಿಯೊಬ್ಬ ವಿದ್ಯಾರ್ಥಿಯು ನಮ್ಮ ಮಗನು - ನಮ್ಮ ಸಂತಾನವು - ನಮಗೆ ಮಕ್ಕಳಿಲ್ಲವೆಂದು ಅನ್ನುವವರಾರು ?" ಎಂದು ಉತ್ತರಕೊಟ್ಟರು.

# ಮೊದಲು ಮಾತು

**ಶ್ರೀಕೃಷ್ಣ ಭಕುತಿಸುಧೆ ಸವಿಗೆ ಮುಕ್ತಿಯು ಸರಿಯಲ್ಲ**

—ವ್ಯಾಸರಾಯ

ಹರಿಶರಣರ ವಾಙ್ಮಯವು ನನಗೆ ಬಹು ಕಾಲದಿಂದ ಪರಿಚಿತವು. ಅದನ್ನು ಅನುಭಾವ ಮಾರ್ಗದ (Mysticism) ದೃಷ್ಟಿಯಿಂದ ಚನ್ನಾಗಿ ಪರಿಶೀಲಿಸಿ, ವರ್ಗೀಕರಿಸಿ ಆ ಬಗ್ಗೆ ನನಗೆ ತಿಳಿದ ಎರಡು ಮಾತುಗಳನ್ನು ಬರೆಯಬೇಕೆಂಬ ಕಲ್ಪನೆಯು ೧೯೩೦ ರಲ್ಲಿ ಹಿಂಡಲಗಿ ಸೆರೆಮನೆಯಲ್ಲಿರುವಾಗ ನನಗೆ ಮೊದಲು ಹೊಳೆಯಿತು. ಆ ರೀತಿಯಿಂದ ಅಭ್ಯಾಸವನ್ನು ಪ್ರಾರಂಭಿಸಿ ಉತ್ತಮವಾದ ಹಲವು ಕೀರ್ತನೆಗಳನ್ನು ಶೇಖರಿಸಿ ವರ್ಗೀಕರಿಸಿಟ್ಟೆನು. ಆದರೆ ಆ ಸಾರೆ ಬೇಗನೆ ಅಂದರೆ ಆರೇತಿಂಗಳಲ್ಲಿ ಬಂಧಮುಕ್ತನಾದುದರಿಂದ ಕೆಲಸವು ಪೂರ್ಣವಾಗಲಿಲ್ಲ. ಮುಂದೆ ೧೯೩೨ ರಲ್ಲಿ ಪುನಃ ಸೆರೆಮನೆಗೆ ಹೋದಾಗ ಅದೇ ಕೆಲಸವನ್ನು ಮುಂದರಿಸಬೇಕೆಂದು ಯತ್ನಿಸಿದೆನು. ಆದರೆ ಮೊದಲು ನಾನೇ ಬರೆದುದನ್ನು ನನಗೆ ಕೊಡಲು ಕಾರಾಗೃಹದ ಅಧಿಕಾರಿಗಳು ಒಪ್ಪಲಿಲ್ಲ! ಕೈಬರಹದ ಯಾವದೇ ಪುಸ್ತಕವನ್ನು ಕೊಡಲಾಗದು, ಎಂಬ ನಿಯಮವಿದೆಯಂತೆ! ಹೀಗಾಗಿ ಆ ಕೆಲಸವನ್ನು ಆಗ ಮುಂದರಿಸುವದು ಸಾಧ್ಯವಾಗದೆ ಹೋಯಿತು. ಮುಂದೆ ನಾನು ಅದೇ ದೃಷ್ಟಿಯಿಂದ ಶಿವಶರಣರ ವಚನಾಂಬುಧಿಯನ್ನು ಮಥಿಸಿ ವಚನ ರಹಸ್ಯವನ್ನೊಡಗೂಡಿದ ವಚನಾಮೃತವನ್ನು ಬರೆದು ಪ್ರಕಟಿಸಿದೆನು. ಹರಿಶರಣರ ಸೇವೆ ಹಾಗೇ ಉಳಿಯಿತು. ಅದನ್ನು ಈಗ ಪೂರೈಸಲು ಕೈಯಿಕ್ಕಿದ್ದೇನೆ.

ಈಗ ನಾನು ಪ್ರಕಟಿಸುತ್ತಿರುವದು ಹರಿಕೀರ್ತನಾಮೃತವು ಮಾತ್ರ ಎಂದು ಹೇಳಬಹುದು. ಈ ಪುಸ್ತಕಕ್ಕೆ ಜೊತೆಯೆಂದು ಮುಂದೆ ಹರಿಕೀರ್ತನ ರಹಸ್ಯವನ್ನು ಅಥವಾ ಹರಿಶರಣರ ಭಕ್ತಿಯೋಗವನ್ನು ಬರೆಯುವ ಕೆಲಸವು ನಡೆದಿದೆ. ಅದೊಂದು ದಾಸವಾಙ್ಮಯವನ್ನು ಕುರಿತು ಬರೆಯಲ್ಪಟ್ಟ ವಿಮರ್ಶನಾತ್ಮಕ ಹಾಗೂ ಗುಣಗ್ರಾಹಕ ಪ್ರಬಂಧವಾಗುವದು. ಆ ವಿಷಯವು ಪ್ರತ್ಯೇಕವಿರುವುದರಿಂದ ಅದಕ್ಕಾಗಿ ಇದರ ಪ್ರಕಟನೆಯನ್ನು ತಡೆದು ಹಿಡಿಯುವದು ಯೋಗ್ಯವಾಗದೆಂದು ತಿಳಿದು ಈ ಪುಸ್ತಕವನ್ನು ಈಗ ಪ್ರಕಟಿಸುತ್ತಿರುವೆನು.

## ಹರಿಭಕ್ತಿ ಸುಧೆ

ಈ ಪುಸ್ತಕದ ಪ್ರಕಟನೆಯ ವಿಚಾರವು ನನ್ನಲ್ಲಿ ಒಡಮೂಡಿದಾಗ ಅಧ್ಯಾತ್ಮಕಾರ್ಯಾಲಯಕ್ಕೆ ಒಂದು ವಿಶೇಷ ಸಹಾಯವು ದೊರೆತಿದ್ದನ್ನು ಇಲ್ಲಿ ಉಲ್ಲೇಖಿಸದೆ ಇರಲಾರೆ. ತಮಗೆ ಆಸ್ತಿ ಇರಲಿ ಬಿಡಲಿ, ನಮ್ಮಲ್ಲಿಯ ನಿವೃತ್ತರು ಯಾವುದೋ ಒಂದು ಮೂಢಭಾವನೆಯಿಂದ ದತ್ತಕವನ್ನು ಮಾಡಿಕೊಳ್ಳುವದುಂಟು. ಆದರೆ ದಿವಂಗತ ಬೈಚವಾಲ ಪದ್ಮನಾಭಾಚಾರ್ಯರು ಹಳೇತರಹದ ಭಾವಿಕ ಗೃಹಸ್ಥರಿದ್ದರೂ ಆ ಗೋಜಿಗೆ ಹೋಗಲಿಲ್ಲ. ಆಚೆ ವರುಷ ತಮ್ಮ ಮರಣಸಮಯದಲ್ಲಿ ಅವರು ತಮ್ಮ ಇದ್ದಬಿದ್ದ ಆಸ್ತಿಯನ್ನು ವಿದ್ಯಾಪ್ರಸಾರಕ್ಕೆಂದು ಮೀಸಲಿಟ್ಟರು ! ಇಷ್ಟೇ ಅಲ್ಲ. ಅತ್ಯಂತ ಪತಿಭಕ್ತಿಪರಾಯಣೆಯರಾದ ಅವರ ಧರ್ಮಪತ್ನಿಯವರು ಇಂಥ ಪುಸ್ತಕಗಳ ಪ್ರಕಟನೆಗೆಂದು ಐನೂರು ರೂಪಾಯಿಗಳನ್ನು ದಾನಕೊಟ್ಟರು. ಬೇಸರಿಲ್ಲದೆ ಬರೆದು ಅಚ್ಚಿಗೆ ಕಾಸಿಲ್ಲದೆ ಹಂಬಲಿಸುವ ನನ್ನಂಥವನಿಗೆ ಅಕಸ್ಮಾತ್ತಾಗಿ ಈ ಸಹಾಯವು ದೊರೆತುದು ಕೇವಲ ' ಹರಿಚಿತ್ತ ' ! ಮತ್ತಿನ್ನೇನೂ ಅಲ್ಲ.

ಇನ್ನು ಆದಷ್ಟು ಪ್ರಯತ್ನಶೀಲರಾಗಿ ಈ ಪುಸ್ತಕವನ್ನು ಬೇಗ ಅಚ್ಚು ಹಾಕಿಸಲು ನನಗೆ ಪ್ರತ್ಯಕ್ಷ ಸಹಾಯಮಾಡಿದ ಕಲ್ಲೆ ನಾರಾಯಣರಾಯರನ್ನು ಹಾಗೂ ಅಚ್ಚುಗಾರಿಕೆಯಲ್ಲಿ ಎಚ್ಚರದಿಂದ ಕೆಲಸಮಾಡಿದ ಧಾರವಾಡದ ಕರ್ನಾಟಕ ಪ್ರಿಂಟಿಂಗ ವರ್ಕ್ಸದ ಒಡೆಯರಾದ ಶ್ರೀ. ಅಣ್ಣಾರಾವ ಜಠಾರ ಇವರನ್ನು ನಾನು ಮನ್ನಿಸದೆ ಇರಲಾರೆನು.

**ಹುಬ್ಬಳ್ಳಿ,**
ಶಾ. ಶ. ೧೨-೮-೧೮೬೦

**ರಂಗನಾಥ ರಾಮಚಂದ್ರ ದಿವಾಕರ**

# ಮುನ್ನುಡಿ

—✦—

**ಸೇರಿದೆನು ಸೇರಿದೆನು ಜಗದೀಶನ**

**. . . . . . . . . . . . . . . . . . . . . . . .**

**“ಹರಿಭಕುತಿ ಸುಧೆ”ಯ ಪಾನಗಳಿಂದಲಿ**
**ಹರಿ ಪ್ರೀತಿಯಾಗಿದೆ ನೋಡಿದರೆನ್ನ ದೇಹ,**
**ಸಿರಿ ಕೃಷ್ಣರಾಯನ್ನ ಮನಮಂದಿರದಿ ಕಂಡೆ**

—ವ್ಯಾಸರಾಯರು.

ಕೀರ್ತನೆ ಸುಳಾದಿ ಉಗಾಭೋಗಾದಿಗಳನ್ನು ಹಾಡಿ ಬರೆದು ದಾಸ-ಕೂಟದ ಭಕ್ತಶ್ರೇಷ್ಠರು ಕನ್ನಡಿಗರಿಗೆ ಬೇಕಾದಷ್ಟು ಭಕ್ತಿರಸವನ್ನು ನೀಡಿರುವರು. ಕರ್ನಾಟಕದಲ್ಲಿ ದಾಸರು ನಿರ್ಮಿಸಿದ ಭಕ್ತಿವಾಙ್ಮಯವು ಈಗ ಸ್ವಲ್ಪ ಮಟ್ಟಿಗೆ ಪ್ರಸಿದ್ಧವಾಗಿದೆ. ಆದರೆ ಪ್ರಸಿದ್ಧವಾದುದರ ಎಷ್ಟೋ ಪಾಲು ವಾಙ್ಮಯವು, ಇನ್ನೂ ಅಪ್ರಕಾಶಿತವೇ ಇರುವದು ಎಂದು ಹೇಳಿದರೆ ಅತಿಶ-ಯೋಕ್ತಿಯಾಗದು. ಈ ಪ್ರಕಾಶಿತ-ಅಪ್ರಕಾಶಿತ ಭಕ್ತಿವಾಙ್ಮಯವನ್ನು ಸ್ವಲ್ಪ ಮಥಿಸಿ, ಅದರಲ್ಲಿಯ ಉತ್ತಮ ಭಾಗವನ್ನು ಭಕ್ತಿಯೋಗದ ಅಭ್ಯಾಸಕ್ಕೆ ಅನುಕೂಲವಾಗುವಂತೆ ವ್ಯವಸ್ಥೆಯಿಂದ ಮಂಡಿಸಬೇಕು, ಅದರ ರುಚಿಯನ್ನು ಬಣ್ಣಿಸಿ ಭಕ್ತರ ಸೇವೆಮಾಡಬೇಕು ಎಂಬ ನಮ್ರಭಾವನೆಯಿಂದ ಈ ಕೆಲಸವನ್ನು ನಾನು ಕೈಕೊಂಡಿರುವೆನು. ಅದನ್ನು ಪ್ರಾರಂಭಿಸುವದಕ್ಕೆ ಮೊದಲು ಭಕ್ತಿಮಾರ್ಗವನ್ನು ಕುರಿತು ಕೆಲವು ಮುಖ್ಯ ಸಂಗತಿಗಳನ್ನು ಬರೆಯುವದು ಅವಶ್ಯವೆಂದು ನನಗೆ ತೋರಿರುವದು.

## ಭಕ್ತಿಯ ಉದಯ

ಆದಿಮಾನವನು ಈ ವಿಚಿತ್ರ, ವಿವಿಧ ಸೃಷ್ಟಿಯ ಕಡೆಗೆ ಕಣ್ದೆರೆದು ನೋಡಿ ಮೊಟ್ಟಮೊದಲು ಅತ್ಯಂತ ವಿಸ್ಮಿತನಾಗಿರಲಿಕ್ಕೆ ಸಾಕು. ಗದ್ದರಿಸುವ ಗುಡುಗು, ಮೊಳಗುವ ಮೋಡ, ಮಿನುಗುವ ಮಿಂಚು, ಕಣ್ಣು ಕುಕ್ಕುವ ಸೂರ್ಯ, ಹೊಳೆವ ಚಂದ್ರ, ಸೂರ್ಯರ ಉದಯಾಸ್ತ, ಇತ್ಯಾದಿ ತುಂಬಿ ಹರಿಯುವ ಹೊಳೆ, ನೊರೆತೆರೆಗಳಿಂದಂದವಾದ ಸಾಗರ, ಸೆಳೆವಮಳೆ, ಸುಳಿವ ಗಾಳಿ– ಈ ಮೊದಲಾದ ನಿಸರ್ಗವ್ಯಾಪಾರಗಳು ಮಾನವನಿಗೆ ಅವಿಶಕ್ತಿಯ

ಪರಿಚಯುವನ್ನು ಮಾಡಿಕೊಟ್ಟವು. ಅವುಗಳನ್ನೆಲ್ಲ ನೋಡಿ ಆಶ್ಚರ್ಯಗೊಂಡು ಇದೇನಾಶ್ಚರ್ಯ, ಇದೇನದ್ಭುತ, ಎಂದು ಅವನು ಚಕಿತನಾದನು. ಈ ಅಪೂರ್ವ ಶಕ್ತಿದರ್ಶನದಿಂದ ಒಮ್ಮೆ ವಿಸ್ಮಿತ, ಒಮ್ಮೆ ಭಯಭೀತ, ಇನ್ನೊಮ್ಮೆ ಆದರಯುಕ್ತನಾಗತೊಡಗಿದನು. ಈ ಅವನ ಪ್ರಥಮ ವಿಸ್ಮಯಭಾವನೆಗಳಲ್ಲಿಯೇ ಭಕ್ತಿಯ ಬೀಜವು ಇದ್ದಿತು. ಅತಿಮಾನವಶಕ್ತಿಯುಳ್ಳ ಅದೃಶ್ಯ ದೇವತೆಗಳು ಈ ಅಗಾಧ ಪ್ರಯೋಗಗಳನ್ನು ಮಾಡುವರೆಂದು ಅವನು ಭಾವಿಸಿದನು. ಹೀಗೆ ಮಾಡಿತೋರಿಸುವ ದೇವದೇವತೆಗಳ ಬಗ್ಗೆ ಅವನ ಅಂತಃಕರಣದಲ್ಲಿ ಹುಟ್ಟಿದ ಭಯ, ಆದರ ಇವೇ ಭಕ್ತಿಭಾವನೆಯ ಪ್ರಥಮಸ್ವರೂಪವೆಂದು ಹೇಳಬಹುದು. ದೇವರ ಪ್ರಚಂಡಶಕ್ತಿ, ಅದರಿಂದಾಗುವ ವಿಧ್ವಂಸಕಾರ್ಯ ಇವುಗಳನ್ನು ನೋಡಿ ಮೊದಲು ಮಾನವನು ಭಯಗೊಂಡಿರಬೇಕು. ಅದೇ ರೀತಿ ದೇವರ ಶಕ್ತಿಯ ಅನುಕೂಲ ಕಾರ್ಯಗಳನ್ನು ಅರಿತು ಅವನು ಆದರವನ್ನು ತಾಳಿರಬೇಕು. ದೇವರ ವಿಧ್ವಂಸಕಶಕ್ತಿಯಿಂದ ತನಗೆ ಹಾನಿಯಾಗಬಾರದು; ಅವನ ಸಂರಕ್ಷಕಶಕ್ತಿಯಿಂದ ತನಗೆ ಸುಖದೊರೆಯಬೇಕೆಂದು ಅವನು ದೇವರಿಗೆ ತಲೆಬಾಗಿ, ಶರಣಾಗತನಾಗಿ ಪ್ರಾರ್ಥಿಸತೊಡಗಿದನು. ಈ ಬಗೆಯಾಗಿ ಅಲ್ಪಶಕ್ತಿಮಾನವನು ಅನಂತಶಕ್ತಿ ಪರಮಾತ್ಮನನ್ನು ಪ್ರಾರ್ಥಿಸಿದ್ದೆ ಭಕ್ತಿಯ ಪ್ರಥಮ ಉದಯವೆನ್ನುವದು ತಪ್ಪಾಗಲಿಕ್ಕಿಲ್ಲ. ಮಾನವಾಂತಃಕರಣದೊಳಗಿನ ವಿಸ್ಮಯಾಕಾಶದಲ್ಲಿ ಭಕ್ತಿಯೇ ಮೊದಲು ಒಡಮೂಡಿದ ಧರ್ಮಭಾವವು. ಅದು ಮೊದಲು ಬರಿಯ ಪ್ರಾರ್ಥನಾರೂಪದಿಂದ ಪ್ರಕಟವಾದರೂ ಮುಂದೆ ವಿವಿಧರೂಪಗಳನ್ನು ತಾಳಿ ನಾನಾರೀತಿಯಿಂದ ವ್ಯಕ್ತವಾಗಿ ಜನಸಾಮಾನ್ಯರಿಗೆಲ್ಲ ಮುಕ್ತಿಮಾರ್ಗವನ್ನು ತೋರಲು ಸಮರ್ಥವಾಯಿತು. ಜಗತ್ತಿನಲ್ಲಿಯ ಯಾವದೇ ಧರ್ಮದ ಆದಿಗ್ರಂಥಗಳನ್ನು ತೆರೆದುನೋಡಿದರೂ, ಯಾವದೇ ರಾಷ್ಟ್ರದ ಆದಿಕವಿಗಳ ಕೃತಿಗಳನ್ನು ಓದಿನೋಡಿದರೂ ಅವುಗಳಲ್ಲಿ ಈ ಭಕ್ತಿಭಾವನೆಯ ಬೀಜವು ಸ್ಪಷ್ಟವಾಗಿ ಕಾಣುವದು.

## ಅನುಭಾವದಿಂದಲೆ ಶಾಂತಿ

ಆದರೆ ಮನುಷ್ಯನು ಇಷ್ಟರಿಂದಲೇ ಸಂತುಷ್ಟನಾಗಲಿಲ್ಲ : ದೇವರ ಶಕ್ತಿಸಾಮರ್ಥ್ಯಗಳನ್ನು ಬಣ್ಣಿಸಿ, ಈಶಮಹಾತ್ಮ್ಯವನ್ನು ಹೊಗಳಿ, ಇಷ್ಟವಾದುದನ್ನು ಕೇಳಿ, ಅನಿಷ್ಟವಾದುದನ್ನು ತೆಗಳಿ ಮನುಷ್ಯನು ವಿರಮಿಸಲಿಲ್ಲ. ಈ ಅಗಾಧ ಶಕ್ತಿಯ ಯಥಾರ್ಥಸ್ವರೂಪವನ್ನರಿತುಕೊಳ್ಳುವ ಅವನ ಹಂಬಲವು ಇಷ್ಟರಿಂದಡಗಲಿಲ್ಲ. ನಮ್ಮ ಪೂರ್ವಜರಾದ ಪುರಾತನ ಆರ್ಯರು ವಿವಿಧ ದೇವತೆಗಳನ್ನು ಕೊಂಡಾಡಿ ದಣಿದರು. ವಿವಿಧ ದೇವತೆಗಳಲ್ಲ ಒಂದೇಒಂದು

ಮಹಾದೇವನ ರೂಪವೆಂಬುದನ್ನು ಗುರುತಿಸಿ, ಆ ಮಹಾದೇವನ ಪ್ರಶಂಸೆಯನ್ನು ಹೊಟ್ಟೆತುಂಬಾ ಮಾಡಿದರು. ಹೋಮಾದಿಗಳನ್ನು ಮಾಡಿ, ಅಗ್ನಿಯ ಮುಖಾಂತರ ದೇವತೆಗಳಿಗೆ ಆಹುತಿಗಳನ್ನು ಕೊಟ್ಟು ನೋಡಿದರು. ಯಾತರಿಂದಲೂ ಅವರಿಗೆ ಅತ್ಯಂತ ಸುಖ, ನಿತ್ಯಾನಂದ, ಪರಮಶಾಂತಿ ಇವು ದೊರೆಯಲಿಲ್ಲ. ಕೊನೆಗೆ ಉಪನಿಷತ್ತುಗಳಲ್ಲಿ ವರ್ಣಿಸಿದ ಆತ್ಮಸ್ವರೂಪವನ್ನು ಕಂಡಮೇಲೆಯೇ ಆ ಋಷಿಗಳಿಗೆ ಸಂಪೂರ್ಣ ಸಮಾಧಾನವಾಯಿತು. ಆಗ ಅವರು 'ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಂ'। ಅನುಭಾವಿಗಳ ಶಾಂತಿಯೇ ಶಾಶ್ವತವು, ಇನ್ನೊಬ್ಬರದಲ್ಲವೆಂದು ಸ್ವಾನುಭವದಿಂದ ಸಾರಿದರು. ಅಂದಿನಿಂದ ಇದುವರೆಗೆ ಆತ್ಮದರ್ಶನವನ್ನು ಪಡೆಯುವದೆ, ಆತ್ಮಾನಂದವನ್ನು ಹೊಂದುವದೇ ಅನುಭವಾಮೃತವನ್ನು ಸವಿಯುವದೆ ನಮ್ಮ ಸಮಾಜದಲ್ಲಿ ಎಲ್ಲಕ್ಕೂ ಹೆಚ್ಚಿನ ಧ್ಯೇಯವಾಗಿ ಕುಳಿತಿದೆ.

## ಭಕ್ತಿಯೆಂಬ ಸಾಧನ

ನಮ್ಮ ಪುರಾತನರು ಬರಿಯ ತಮ್ಮ ಧ್ಯೇಯವನ್ನುಸುರಿ ಸುಮ್ಮನಾಗಲಿಲ್ಲ. ಆ ಧ್ಯೇಯಸಾಧನಕ್ಕೆ ಶಕ್ಯವಿರುವ ಅವಶ್ಯವುಳ್ಳ ಮಾರ್ಗಗಳನ್ನೆಲ್ಲ ಹುಡುಕಿ, ಪ್ರತ್ಯಕ್ಷ ಪ್ರಯೋಗಮಾಡಿ ಅನುಭವಪಡೆದು ಆಯಾಮಾರ್ಗಗಳನ್ನೆಲ್ಲ ಪೂರ್ಣತೆಗೆ ಒಯ್ದು, ಪ್ರತ್ಯೇಕಮಾರ್ಗದ ಒಂದೊಂದು ಶಾಸ್ತ್ರವನ್ನು ಬರೆದಿಟ್ಟಿದ್ದಾರೆ. ಭಕ್ತಿಮಾರ್ಗವು ಅಥವಾ ಭಕ್ತಿಯೋಗವು ಆ ಮಾರ್ಗಗಳಲ್ಲಿ ಒಂದು. ಇಲ್ಲಿ ಭಕ್ತಿಮಾರ್ಗದ ಸಾಮಾನ್ಯ ಸ್ವರೂಪ, ದಾಸಕೂಟದವರು ಬರೆದ ಕೀರ್ತನಾದಿಗಳಲ್ಲಿ ಕಂಡುಬರುವ ಭಕ್ತಿಭಾವಗಳ ವಿವೇಚನೆ ಇವುಗಳನ್ನಷ್ಟೇ ಕೊಡುವ ವಿಚಾರವಿದೆ. ಭಕ್ತಿಮಾರ್ಗದ ಹಾಗು ದಾಸರ ಭಕ್ತಿಯೋಗದ ಪೂರ್ಣ ಪರಾಮರ್ಶೆಗಾಗಿ ಒಂದು ಪ್ರತ್ಯೇಕ ಪುಸ್ತಕವನ್ನೇ ಬರೆಯುವ ಅವಶ್ಯಕತೆಯಿರುವದು.

ಯಾವ ಶಕ್ತಿಯು ನಮ್ಮಲ್ಲಿ ರಾಗ-ದ್ವೇಷ, ಪ್ರೀತಿ- ಅಪ್ರೀತಿ, ಕ್ರೋಧ ಭಯ, ಮುಂತಾದ ಆವೇಗಗಳನ್ನುಂಟುಮಾಡುವದೋ ಅದಕ್ಕೆ ನಾವು ಭಾವನಾಶಕ್ತಿ ( Emotion ) ಎಂದೆನ್ನುವೆವು. ಭಕ್ತಿಮಾರ್ಗದಲ್ಲಿ ಈ ಭಾವನಾಶಕ್ತಿಯೇ ಮುಖ್ಯ ಅವಲಂಬನವು. ಬುದ್ಧಿಶಕ್ತಿ, ಕ್ರಿಯಾಶಕ್ತಿ, ಮುಂತಾದ ಶಕ್ತಿಗಳೂ ನಮಗೆ ಈ ಮಾರ್ಗದಲ್ಲಿ ಸಹಾಯಕವಾಗುವವು. ಆದರೆ ಅವು ಪ್ರಧಾನಶಕ್ತಿಯಲ್ಲ. ಈಶ್ವರನ ವಿಷಯಕ್ಕಿದ್ದ ನಮ್ಮ ಪ್ರೇಮಭಾವನೆಯ ಮುಖಾಂತರವೇ ನಾವು ಭಕ್ತಿಮಾರ್ಗದಲ್ಲಿ ಮುಂದಡಿಯಿಡುತ್ತೇವೆ. " ಸಾ ಪ

ರಾನುರಕ್ತಿರೀಶ್ವರೇ ಭಕ್ತಿಃ, " ಈಶ್ವರನಲ್ಲಿ ಪರಮ ಅನುರಕ್ತಿಯನ್ನಿಡುವದೇ ಪ್ರೇಮಾತಿಶಯವನ್ನಿಡುವದೇ ಭಕ್ತಿಯು, ಎಂದು ಶಾಂಡಿಲ್ಯ ಸೂತ್ರವು ಹೇಳುವದು. " ಸಾ ಭಕ್ತಿಃ ಕಸ್ಮೈಚಿತ್ಪರಮಾ ಪ್ರೇಮರೂಪಾ- ಯಾರೊಬ್ಬರ ಬಗ್ಗೆಯಾದರೂ ಇದ್ದ ನಮ್ಮ ಪರಮ ಪ್ರೀತಿಯೇ ಭಕ್ತಿಯು, ಎಂದು ನಾರದ ಭಕ್ತಿ ಸೂತ್ರವು ಹೇಳುವದು. ಅನ್ಯವಿಷಯಗಳಲ್ಲಿದ್ದ ನಮ್ಮ ಪ್ರೀತಿಯನ್ನು ತೆಗೆದು ಅದನ್ನೆಲ್ಲ ಈಶ್ವರನಲ್ಲಿಯೇ ಕೇಂದ್ರೀಕರಿಸಬೇಕು; ಈಶ್ವರನ ಹೊರತು ತನಗೆ ಏನೂ ಬೇಡ- ಮೋಕ್ಷವು ಕೂಡ ಬೇಡ, ಎಂದು ಭಕ್ತನು ನಿರ್ಹೇತುಕನಾಗಿ ತನ್ನ ಪ್ರೇಮಭಾವವನ್ನು ಶುದ್ಧೀಕರಿಸಬೇಕು. ಕೀರ್ತನ ಶ್ರವಣ, ಸೇವೆ ಮುಂತಾದವುಗಳಿಂದ ಈ ಭಾವವನ್ನು ಸಂಗ್ರಹಿಸಬೇಕು, ಅಥವಾ ಹೆಚ್ಚಿಸಬೇಕು; ಆ ಭಾವವು ಅತ್ತಿತ್ತ ಹರಿಯದಂತೆ ಅಗನ್ನು ಸಂಯಮಿಸಬೇಕು. ಈಶ್ವರಚರಣದಲ್ಲಿಯೇ ಅದನ್ನು ಏಕಾಗ್ರಮಾಡಬೇಕು. ಮತ್ತು ಅದನ್ನು ಕೊನೆಗೆ ಸಂಪೂರ್ಣವಾಗಿ ಈಶ್ವರಾರ್ಪಣಮಾಡಿ ಬಿಡಬೇಕು. ಇದು ಭಕ್ತಿಭಾವದ ಪರಮಾವಧಿಯು, ಭಕ್ತಿಯೋಗದ ಶಿಖರವು. ಈ ಬಗೆಯ ಭಕ್ತಿಗೆ ಅಹೇತುಕೀ, ಮುಖ್ಯಾ, ಅಥವಾ ರಾಗಾತ್ಮಿಕಾ ಭಕ್ತಿ ಎಂಬ ಹೆಸರುಗಳಿರುವವು. ಇದು ಸಾತ್ವಿಕ ಭಕ್ತಿಯು. ಇಂಥ ಭಕ್ತಿಯಿಂದ ಯುಕ್ತನಾದವನು ಎಲ್ಲಕ್ಕೂ ಶ್ರೇಷ್ಠವಾದ ಜ್ಞಾನವನ್ನು ಪಡೆಯುವನು. ಪರಮಪದವಿಯು ಅನಾಯಾಸವಾಗಿ ಅವನ ಕೈಸೇರುವದು. ಯಾವದೇ ಬಗೆಯ ಸಕಾಮವಾದ ಸಹೇತುಕ ಭಕ್ತಿಯು ಅಥವಾ ಆರ್ತನ ಇಲ್ಲವೆ ಜಿಜ್ಞಾಸುವಿನ ಇಲ್ಲವೆ ಅರ್ಥಾರ್ಥಿಯ ಭಕ್ತಿಯು ಗೌಣೀಭಕ್ತಿಯೆನಿಸುವದು. ವಿಸ್ಮಯದಲ್ಲಿ ಅಥವಾ ಈಶ್ವರನು ಶ್ರೇಷ್ಠನು ತಾನು ಕನಿಷ್ಠನು, ಈಶ್ವರನು ಸರ್ವಶಕ್ತಿವಂತನು ತಾನು ಅಲ್ಪ ಶಕ್ತಿಯು, ಎಂಬ ಕಲ್ಪನೆಯಲ್ಲಿ ಭಕ್ತಿಬೀಜವು ಮೊದಲು ಮೊಳೆತರೂ ಮುಂದೆ ಅದು ಭಾವೋಪಭಾವ ಹಾಗು ಅನೇಕ ಭಾವಚ್ಛಾಯೆಗಳ ರೂಪದಿಂದ ಚಿಗುರಿ ಎಲೆಯೊಡೆದು ಶಾಖೋಪಶಾಖೆಗಳಾಗಿ ಈಗ ಒಂದು ದೊಡ್ಡ ಮರದಂತೆ ಕಂಗೊಳಿಸುತ್ತಿರುವದು. ಈಶ್ವರನ ಅನಂತ ಜ್ಞಾನ ಬಲಕ್ರಿಯೆಗಳು ಭಕ್ತನಿಗೆ ಹೊಳೆಹೊಳೆದಂತೆ ಅವನ ಅಂತಃಕರಣದಲ್ಲಿಯ ಪ್ರೇಮಭಾವವು ಅನಂತ ರೂಪಗಳನ್ನು ಧರಿಸುವದು ಮತ್ತು ಎಷ್ಟೋಸಾರಿ ಕವಿಪ್ರತಿಭೆಯುಳ್ಳ ಭಕ್ತರ ಬಾಯಿಯಿಂದ ದಿವ್ಯಕಾವ್ಯದ ಉಡುಪನ್ನು ತೊಟ್ಟು ಹೊರಹೊಮ್ಮುವದು. ಈಶ್ವರನು ಸರ್ವಶಕ್ತಿವಂತನು ಎಂಬ ಕಲ್ಪನೆಯು ವಿಕಾಸಗೊಂಡು ಅವನು ವಿಶ್ವಗಳ ಸೃಷ್ಟಿ ಸ್ಥಿತಿಲಯಗಳಿಗೆ ಕಾರಣನು, ವಿಶ್ವಾಧಾರನು, ವಿಭುವು, ಸರ್ವಾಂತರ್ಯಾಮಿಯು ಎಂಬ ವಿವಿಧ ಕಲ್ಪನೆಗಳಿಗೆ ಎಡೆಗೊಟ್ಟಿತು. ಹೀಗಾ

ದರೂ ಈಶ್ವರನು ಭಕ್ತನಿಂದ ಬಹಳ ದೂರವೇ ಉಳಿದಂತಾಗುವದು. ಆದರೆ ಅವತಾರಕಲ್ಪನೆಯು– ಈಶ್ವರನು ಮನುಷ್ಯ ದೇಹಧಾರಿಯಾಗಿ ಭೂಲೋಕಕ್ಕೆ ಇಳಿಯುವನು– ಎಂಬ ಕಲ್ಪನೆಯು ಹುಟ್ಟಿದಂದಿನಿಂದ ಭಕ್ತಿಮಾರ್ಗಕ್ಕೆ ವಿಶೇಷ ಕಳೆಯೇರಿತೆಂದು ಹೇಳಬಹುದು. ತನ್ನ ತಂದೆ ತಾಯಿ, ಮಕ್ಕಳು ಮಿತ್ರರು, ಗುರು ಹಿರಿಯರು, ಸಖಸಖಿಯರು, ಸ್ವಾಮಿಸೇವಕರು ಮುಂತಾದವರಲ್ಲಿ ಹಂಚಿಹೋಗುವ ತನ್ನ ಪ್ರೇಮಭಾವವನ್ನು, ಭಕ್ತನು ಈಶ್ವರನಲ್ಲಿ ಆಯಾ ಭೂಮಿಕೆಗಳ ಆರೋಪಮಾಡಿ ಈಶ್ವರನಲ್ಲಿಡುವದು ಅವತಾರ ಕಲ್ಪನೆಯ ಮೂಲಕವೇ ಸಾಧ್ಯವಾಯಿತು. ಈ ಕಲ್ಪನೆಯ ಪ್ರಾಬಲ್ಯವಾಗುವ ಪೂರ್ವದಲ್ಲಿ ಭಕ್ತಿಮಾರ್ಗದಲ್ಲಿ ಶಾಂತಭಾವವೇ ಹೆಚ್ಚು ಪ್ರಚಲಿತವಿತ್ತು. ಈಶಮಹಿಮೆಯ ವರ್ಣನೆ, ಈಶ್ವರನ ಯಶೋಗಾನ, ಪರಮಾತ್ಮಗುಣಸಂಕೀರ್ತನೆ ಇವೇ ರೂಢವಾಗಿದ್ದುವು. ಆದರೆ ಮುಂದೆ ಈಶ್ವರನು ಸ್ವಾಮಿಯೆಂದು ಭಜಿಸುವ ಭಾವ, ಅವನು ಸಖನೆಂದು ಅವನೊಡನೆ ವರ್ತಿಸುವ ಭಾವ, ಅವನು ತಂದೆ ಯೆಂದು ಅಕ್ಕರದಿಂದ ನಡೆಕೊಳ್ಳುವ ಭಾವ, ಅವನು ಪ್ರಿಯನೆಂದು ಆರಾಧಿಸುವ ಭಾವ, ಇವು ರೂಢವಾದವು. ಅವುಗಳಲ್ಲಿ ಕೊನೆಯದಕ್ಕೆ ಅಂದರೆ ಮಧುರ ಭಾವಕ್ಕೆ ಅತ್ಯುಚ್ಚಸ್ಥಾನವು ದೊರೆಯಿತು ಮತ್ತು ಆ ಭಾವವು ಸರ್ವಭಕ್ತಿ ಭಾವಗಳ ಸಮನ್ವಯವೆನಿಸಿಕೊಂಡಿತು. ಅನೇಕ ಋಷಿಮುನಿಗಳು ಈ ಭಕ್ತಿಯೋಗವನ್ನವಲಂಬಿಸಿ ಪರಮಸಾಧ್ಯವನ್ನು ಕೈವಶಮಾಡಿಕೊಂಡರು. ತಮ್ಮ ಮತ್ತು ಇತರ ಸಾಧಕರ ಸಮಗ್ರ ಅನುಭವಗಳನ್ನು ಸಂಕಲಿಸಿ ಭಕ್ತಿಶಾಸ್ತ್ರವೆಂಬ ದನ್ನು ಅವರು ರಚಿಸಿದರು. ಶಾಂಡಿಲ್ಯಸೂತ್ರ ಮತ್ತು ನಾರದ ಭಕ್ತಿಸೂತ್ರ ಇವೇ ಭಕ್ತಿಶಾಸ್ತ್ರದ ಸೂತ್ರ ಗ್ರಂಥಗಳು ಎಂದು ಹೇಳಬಹುದು. ಈ ಎರಡು ಗ್ರಂಥಗಳೇ ಭಕ್ತಿ ವಾಙ್ಮಯದ ಮಧ್ಯಬಿಂದುಗಳು. ಇವುಗಳನ್ನು ಎದುರಿಟ್ಟು ಗೊಂಡು ಮುಂದೆ ತಮ್ಮ ಇಷ್ಟದೇವತೆ, ತಮ್ಮ ಪೂಜಾಪದ್ಧತಿ, ತಮ್ಮ ಭಾವನೆ, ಇವುಗಳಿಗನುಸರಿಸಿ ಭಕ್ತಶ್ರೇಷ್ಠರು ವಿವಿಧ ಭಕ್ತಿಗ್ರಂಥಗಳನ್ನು ಬರೆದರು. ಕೆಲವು ಭಕ್ತಿಸಾಂಪ್ರದಾಯದ ಗ್ರಂಥಗಳಲ್ಲಿ ಹಲಕೆಲ ವಿಚಿತ್ರ ಕಲ್ಪನೆಗಳೂ ಸಲ್ಲದ ಸಾಧನೆಗಳೂ ಉಲ್ಲೇಖಿಸಲ್ಪಟ್ಟಿವೆ. ಅವುಗಳಲ್ಲಿ ಕೆಲವು ಮೂಲ ಭಕ್ತಿಮಾರ್ಗದ ವಿಪರ್ಯಾಸ, ವಿಕೃತ, ಅಥವಾ ಅಪಭ್ರಷ್ಟ ರೂಪಗಳೆಂದರೆ ತಪ್ಪಾಗಲಿಕ್ಕಿಲ್ಲ. ಮಾನವೀ ಹೃದಯದಲ್ಲಿ ಪರಮಾತ್ಮನ ನಿರ್ಹೇತುಕ ಪ್ರೇಮ ದಿಂದುಂಟಾದ ಭಕ್ತಿಭಾವನೆಯು ನಿಸರ್ಗನಿರ್ಝರದಂತೆ ಶುದ್ಧ, ನಿರ್ಮಲಿನ, ಮತ್ತು ಮನೋಹರವಿರುವದು. ಪರಮಾತ್ಮನ ಹಂಬಲವಿದ್ದ ಜೀವಾತ್ಮನ ಅಂತಃಕರಣದಲ್ಲಿ ಹುಟ್ಟಿದ ಪ್ರೇಮದ ಹೊನಲು ಹಿಮಗಿರಿಯ ಮಗಳಾದ

ಬಾಲಗಂಗೆಯಂತೆ ಸ್ವಚ್ಛವೂ ಸುಶೀಲವೂ ಸುರಮ್ಯವೂ ಇರುವದು. ಆ ಭಕ್ತಿಕುಮಾರಿಗೆ, ಆ ಭಕ್ತಿಯೆಂಬ ವಸದೇವಿಗೆ ಎಳೆತುಲಸಿಯ ವನಮಾಲೆಯಂತಿರುವ ಸರಳ, ಸುಲಭ ಭಾವಗಳು, ಸಾದಾ ಕಾವ್ಯಾಲಂಕಾರಗಳು, ಚನ್ನಾಗಿ ಶೋಭಿಸುವವು. ಇಲ್ಲದ ಸಲ್ಲದ ಕಠಿಣ ಕಲ್ಪನೆ, ಪಾಂಡಿತ್ಯದ ಭಾಷೆ ಇವು ಕೃತಕಾಲಂಕಾರಗಳಂತೆ ಕಾಲ್ತೊಡಕಾಗಿ ಈ ಕನಕಾಂಗಿಯ ಸ್ವರೂಪಕ್ಕೆ ಕುಂದನ್ನೇ ತರುವವು.

## ವಿವಿಧತೆ

ಇಷ್ಟದೇವತೆ ಮತ್ತು ಸಾಂಪ್ರದಾಯವಿವಿಧತೆ ಇವುಗಳ ಮೂಲಕ ಬೇರೆ ಬೇರೆ ಭಕ್ತಿಗ್ರಂಥಗಳು ನಿರ್ಮಾಣವಾದವೆಂದು ಮೇಲೆ ಹೇಳಿದ್ದೇನೆ. ಅವುಗಳ ವಿವರಣೆ, ವಿವೇಚನಾದಿಗಳನ್ನು ಒಂದು ಪ್ರತ್ಯೇಕ ಗ್ರಂಥದಲ್ಲಿ ಕೊಡುವದೇ ಉಚಿತವಾಗುವದು. ಅವುಗಳಲ್ಲಿ ಮುಖ್ಯವಾದವನ್ನು ಇಲ್ಲಿ ಹೇಳಿ ಮುಂದೆ ಸಾಗುತ್ತೇನೆ. ವಿಷ್ಣು, ಶಿವ, ಮತ್ತು ಶಕ್ತಿ ಈ ಮೂರು ದೇವತೆಗಳ ಭಕ್ತಿಯೇ ಇಲ್ಲಿ ವಿಶೇಷ ಲೋಕಪ್ರಿಯವಾಯಿತು. ವಿಷ್ಣುವಿನ ಅವತಾರವೆನಿಸುವ ರಾಮ-ಕೃಷ್ಣರ ಭಕ್ತಿಯು ವಿಷ್ಣುಭಕ್ತಿಯೇ ಸೈ. ಪಾಂಚರಾತ್ರಾಗಮ, ಭಾಗವತ, ಮತ್ತು ವಿಷ್ಣುಪುರಾಣ ಇವೇ ಈ ವೈಷ್ಣವ ಪಂಥದ ಮುಖ್ಯ ಗ್ರಂಥಗಳು. ಶೈವಾಗಮಗಳು, ಶಿವಪುರಾಣ, ಇವು ಶಿವಭಕ್ತರ ಮುಖ್ಯ ಗ್ರಂಥಗಳು. ಅರವತ್ತುನಾಲ್ಕು ತಂತ್ರಗಂಥಗಳು, ಶಾಕ್ತಾಗಮಗಳು, ದೇವಿಭಾಗವತ-ಇವು ಶಕ್ತಿಭಕ್ತರ ಗ್ರಂಥಗಳು. ಇವುಗಳಲ್ಲದೆ ಸೂರ್ಯ ಭಕ್ತರು, ಗಣಪತಿಭಕ್ತರು, ದತ್ತಾತ್ರೇಯಭಕ್ತರು – ಹೀಗೆ ಅನೇಕ ಭಕ್ತಿ ಸಾಂಪ್ರದಾಯಗಳು ಈಗ್ಯೂ ಹಿಂದೂಸ್ತಾನದಲ್ಲಿ ಪ್ರಚಲಿತವಿರುವವು.

ಭಕ್ತಿ ಶಾಸ್ತ್ರದಲ್ಲಿ, ಶಾಂತ, ದಾಸ್ಯ, ಸಖ್ಯ, ವಾತ್ಸಲ್ಯ, ಮಧುರ, ಎಂಬ ಐದು ಭಾವಗಳು, ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಮತ್ತು ಅರ್ಪಣ ಎಂಬ ಒಂಭತ್ತು ವಿಧಗಳು ಹೇಳಲ್ಪಟ್ಟಿರುವವು. ಇಲ್ಲಿ ಕರ್ನಾಟಕದ ವೈಷ್ಣವ ದಾಸಕೂಟದವರು ಬರೆದ ಕೀರ್ತನಾದಿಗಳಷ್ಟೇ ಪ್ರಸ್ತುತವಿರುವದರಿಂದ ನಾನು ಅವರ ಕೀರ್ತನೆಗಳನ್ನು ೨೫ ಭಾಗಗಳಲ್ಲಿ ವಿಂಗಡಿಸಿದ್ದೇನೆ. ಆ ೨೫ ಭಾಗಗಳಲ್ಲಿ ವ್ಯಕ್ತವಾದ ಭಾವೋಪಭಾವಗಳನ್ನು, ಭಾವಚ್ಛಾಯೆಗಳನ್ನು ಸ್ಪಷ್ಟವಾಗಿ ವಿವರಿಸುವದೇ ನನ್ನ ಇಚ್ಛೆಯು. ಭಕ್ತಿಯೋಗದಲ್ಲಿ ಕೀರ್ತನ, ಸ್ಮರಣ ಇತ್ಯಾದಿ ವಿಧಿಗಳು ಹೇಳಲ್ಪಟ್ಟಿದ್ದರಿಂದ ಈಶಸಂಕೀರ್ತನೆ, ಈಶಮಹಿಮೆ ಇವುಗಳನ್ನೊಳಗೊಂಡ

ಕಾವ್ಯಗಳನ್ನು ಬರೆಯುವದು ಈ ಮಾರ್ಗದಲ್ಲಿ ಒಂದು ಉತ್ತಮ ಸಾಧನವೇ ಆಗಿರುವದು. ಪುರಂದರಾದಿ ದಾಸಸಾಂಪ್ರದಾಯದವರು ತಮ್ಮ ಈಶ್ವರ ಪ್ರೇಮವನ್ನು ತಾವು ಬರೆದ ಕೀರ್ತನಾದಿಗಳಲ್ಲಿ ಉತ್ತಮರೀತಿಯಿಂದ ಹಾಗು ಮನೋಹರವಾಗಿ ವ್ಯಕ್ತಪಡಿಸಿದ್ದಾರೆ. ಅವರು ತಮ್ಮ ಕವನಗಳಲ್ಲಿ ಚಿತ್ರಿಸಿರುವ ಭಾವಗಳನ್ನು ಬಣ್ಣಿಸುವದಕ್ಕೂ ಮೊದಲು ನಾನು ಭಕ್ತಿಪಂಥದ ಮಹಾತ್ಮ್ಯ ಮತ್ತು ಕರ್ನಾಟಕದಲ್ಲಿ ಭಕ್ತಿಪಂಥದ ಪ್ರಚಾರ ಇವುಗಳನ್ನು ಕುರಿತು ಎರಡು ಮಾತುಗಳನ್ನು ಹೇಳುವೆನು.

## ಭಕ್ತಿಮಾರ್ಗ

ಭರತಖಂಡದಲ್ಲಿ ರೂಢವಾದ ವಿವಿಧಯೋಗಮಾರ್ಗಗಳಲ್ಲಿ ಭಕ್ತಿಮಾರ್ಗವು ಹೆಚ್ಚು ಲೋಕಪ್ರಿಯವಾದುದಕ್ಕೆ ಅನೇಕಕಾರಣಗಳಿರುವವು. ಸಾಧನಗಳ ಸುಲಭತೆ, ಬಿಗಿಯಾದ ನಿರ್ಬಂಧಗಳ ಅಭಾವ, ಬೇಕಾದವರಿಗೆ ಬೇಕಾದಂತೆ ಆಚರಿಸಲಿಕ್ಕೆ ಬರುವಿಕೆ, ಈಶ್ವರಪ್ರೇಮವೆಂಬ ಒಂದೇಮಾತಿನಿಂದ ಅದರ ಸಿದ್ಧಿಯಾಗುವಿಕೆ, ಇವೇ ಮುಖ್ಯಕಾರಣಗಳಿರುವವು. ಈ ಮಾರ್ಗದಲ್ಲಿ ಕಠಿಣ ಕಾರ್ಯಗಳ ಅಥವಾ ದೀರ್ಘ ತಪಾನುಷ್ಠಾನಗಳ ಅವಶ್ಯಕತೆಯಿಲ್ಲ. ಜಾತಿ, ಧರ್ಮ, ವಯಸ್ಸು, ಲಿಂಗ ಮುಂತಾದ ನಿರ್ಬಂಧವೂ ಈ ಮಾರ್ಗದಲ್ಲಿಲ್ಲ. ಚಿಕ್ಕವರು, ದೊಡ್ಡವರು, ಗಂಡಸರು ಹೆಂಗಸರು, ಪುಣ್ಯವಂತರು, ಪಾಪಿಷ್ಟರು, ಶೂದ್ರಾತಿಶೂದ್ರರು, ಹಗಲಿರುಳೆನ್ನದೆ, ಶುಭಾಶುಭ ನಕ್ಷತ್ರಗಳೆನ್ನದೆ ಸರ್ವ ಕಾಲದಲ್ಲಿ ಸಕಲಕೆಲಸವನ್ನು ಮಾಡುತ್ತಿರುವಾಗ ಸಹ ಆಚರಿಸಲಿಕ್ಕೆ ಬರುವಂಥ ಸುಲಭ ಯೋಗವಿದು. ಈ ಸಾಧನಕ್ಕೆ ಬೇಕಾಗುವ ಭಾಂಡವಲು ಪ್ರೇಮ ವೆಂಬುದೊಂದೇ! ಅದು ಕೂಡ ಎಲ್ಲರಿಗೂ ಪರಿಚಿತವಿದ್ದ ವಸ್ತು. ಪ್ರತಿಯೊಬ್ಬ ಸ್ತ್ರೀಪುರುಷನಿಗೂ, ಪ್ರೇಮ-ಭಾವನೆಯೆಂಬುದು ಗೊತ್ತಿದ್ದೇ ಇರುವದು. ತಮ್ಮ ಕುಟುಂಬದ ಜನರ ಬಗ್ಗೆ ಪ್ರೇಮವಿಲ್ಲದ ಮನುಷ್ಯನು ಭೂಮಂಡಲದಲ್ಲಿಯೇ ಇಲ್ಲವೆಂದು ಹೇಳಬಹುದು. ಪ್ರತಿಯೊಬ್ಬನ ಅಂತಃ ಕರಣದಲ್ಲಿ ಸ್ವಾಭಾವಿಕವಾಗಿ ಹರಿಯುತ್ತಿರುವ ಈ ಭಾವನಾಪ್ರವಾಹವನ್ನೇ ನಾವು ದೇವರಕಡೆಗೆ ಹೊರಳಿಸಿದರೆ ಅದು ಭಕ್ತಿಯೆನಿಸುವದು. ನಾವು ಭಾವದಿಂದ ಭಜಿಸಿದರೆ ದೇವರು ನಮ್ಮವನಾಗುವನು. "ಭಾವದಂತೆ ದೇವ" ನೆಂಬುವದು ಅಬಾಧಿತ ಸತ್ಯವು.

ಹೀಗೆ ಸುಲಭ, ಸರಲ ಎಲ್ಲರಿಗೆ ಮುಕ್ತದ್ವಾರವಿದ್ದ ಭಕ್ತಿಯೋಗದ ಮಹಿಮೆಯು ಅನೇಕ ಗ್ರಂಥಗಳಲ್ಲಿ ವರ್ಣಿಸಲ್ಪಟ್ಟಿದೆ. ಭಾಗವತ ಮತ್ತು ಗೀತೆ

ಇವುಗಳಲ್ಲಿ ಭಕ್ತಿ ಮತ್ತು ಭಕ್ತರ ಮಹಿಮೆ ಮುಂತಾದವು ಅತಿಶಯವಾಗಿ ಹೊಗಳಲ್ಪಟ್ಟಿವೆ. " ಮುಕ್ತಿಯು ಭಕ್ತಿಯದಾಸಿ " ಎಂದು ಹೇಳಿದೆ.

" ಯದಿ ಭವತಿ ಮುಕುಂದೇ ಭಕ್ತಿರಾನಂದಸಾಂದ್ರಾ ॥
ವಿಲುಠತಿ ಚರಣಾಬ್ಜೇ ಮೋಕ್ಷಸಾಮ್ರಾಜ್ಯ ಲಕ್ಷ್ಮೀಃ " ॥

ಉತ್ಕಟ ಭಕ್ತನ ಚರಣದಡಿಯಲ್ಲಿ ಮುಕ್ತಿ ವನಿತೆಯು ಉರುಳಾಡು ವಳು ಎಂದು ಭಕ್ತಿಯ ಮಹಿಮೆಯು ಹೇಳಲ್ಪಟ್ಟಿದೆ. ಭಕ್ತನು ಎಷ್ಟು ಕೀಳ ನಿದ್ದರೂ ಧರ್ಮಾತ್ಮನಾಗಬಲ್ಲನು ಎಂದು ಕೃಷ್ಣನು ಭಕ್ತರಿಗೆ ಆಶ್ವಾಸನವನ್ನು ಇತ್ತಿರುವನು. ' ನ ಮೇ ಭಕ್ತಃ ಪ್ರಣಶ್ಯತಿ '-- ನನ್ನ ಭಕ್ತನಿಗೆ ಕೇಡಿಲ್ಲ; ಯೋ ಮೇ ಭಕ್ತಃ ಸ ಮೇ ಪ್ರಿಯಃ-ಭಕ್ತನು ನನಗೆ ಪ್ರಿಯನು, " ಭವಮದ್ಭಕ್ತಃ " ನನ್ನ ಭಕ್ತನಾಗು ' ಜ್ಞಾನೀ ತು ಆತ್ಮೈವ ಮೇ ಮತಂ ' ಜ್ಞಾನಿಯಾದ ಭಕ್ತನು ನಾನೇ ಎಂದು ತಿಳಿ, ಎಂಬ ಮುಂತಾದ ಅರ್ಥಗರ್ಭಿತ ಚಿಕ್ಕ ಚಿಕ್ಕ ಸೂತ್ರಮಯವಾಕ್ಯಗಳಿಂದ ಶ್ರೀಕೃಷ್ಣನು ಭಕ್ತಿಮಹಿಮೆಯನ್ನು ಕೊಂಡಾಡಿರುವನು.

## ಕರ್ನಾಟಕದಲ್ಲಿ ಭಕ್ತಿ

ಮೋಕ್ಷ ಸಾಮ್ರಾಜ್ಯದ ಸಿಂಹಾಸನದೆಡೆಗೆ ಸಾಗುವ ರಾಯಬೀದಿಯಾದ ಈ ಭಕ್ತಿಮಾರ್ಗವು ಕರ್ನಾಟಕದಲ್ಲಿ ಪೂರ್ವದಿಂದಲೂ ಪ್ರಚಲಿತವಿರುವದು. ನಡುನಡುವೆ, ಒಮ್ಮೊಮ್ಮೆ ಅದು ಹೆಚ್ಚು ಪ್ರಿಯವಾಗಿರುವದು. ಭಕ್ತಿಯು ದಕ್ಷಿಣದಲ್ಲಿ ಹುಟ್ಟಿದ್ದರೂ-ವೃದ್ಧಿಂ ಕರ್ನಾಟಕೇ ಗತಾ - ಕರ್ನಾಟಕದಲ್ಲ ಭಕ್ತಿ ದೇವಿಯು ಬೆಳೆದು ದೊಡ್ಡವಳಾದಳು ಎಂದು ಒಂದೆಡೆಗೆ ಉಲ್ಲೇಖವಿರುವದು. ಕರ್ನಾಟಕದಲ್ಲಿಯ ಮೊದಲನೇ ಶ್ರೇಷ್ಠ ಭಕ್ತನೆಂದರೆ ಪುರಾಣ ಕಾಲದಲ್ಲಿ ಆಗಿ ಹೋದ ಹನುಮಂತನು. ಅವನಲ್ಲಿ ದಾಸ್ಯಭಕ್ತಿಯ ಪರಮಾವಧಿಯು ಕಂಡು ಬರುವದು. ಒಸವಾದಿ ಪ್ರಮಥರು ಸಹ ಭಕ್ತಿಗೆ ಮುಖ್ಯಸ್ಥಾನವನ್ನು ಕೊಟ್ಟಿ ರುವರು. ಇತಿಹಾಸ ಕಾಲದಲ್ಲಿ ವಾಯುದೇವರ ಮೂರನೆಯ ಅವತಾರವೆನಿಸಿ ಕೊಂಡ ಮಧ್ವಾಚಾರ್ಯರು ಪರಮ ಭಕ್ತರಾಗಿ ಹೋದರು. ಅವರ ದಿವ್ಯ ಸ್ಫೂರ್ತಿಯಿಂದಲೇ, ಅವರನ್ನೇ ಗುರುಗಳನ್ನಾಗಿಟ್ಟುಕೊಂಡು, ವೈಷ್ಣವ ದಾಸ ಕೂಟವು ಕರ್ನಾಟಕದಲ್ಲೆಲ್ಲ ಭಕ್ತಿ ಪ್ರಚಾರವನ್ನು ಮಾಡಿತು. ಬಂಗಾಲ ಪ್ರಾಂತದಲ್ಲಿ ಅತಿಶಯ ಪ್ರಸಿದ್ಧವೆತ್ತ ಗೌರಾಂಗ ಚೈತನ್ಯ ಸಂಥದವರಾದರೂ ಮಧ್ವಾಚಾರ್ಯರಿಗೆ ಋಣಿಯಾಗಿರುವರೆಂದು ಇತಿಹಾಸಜ್ಞರು ಹೇಳುವರು. ದಾಸಶಿರೋಮಣಿಗಳಾದ ಪುರಂದರದಾಸರು ಕರ್ನಾಟಕದಲ್ಲಿ, ಕನ್ನಡದಲ್ಲಿ

ಭಕ್ತಿವಾಙ್ಮಯಕ್ಕೆ ಅತ್ಯಂತ ಶ್ರೇಷ್ಠ ಸ್ಥಾನವನ್ನು ಕಲ್ಪಿಸಿಕೊಟ್ಟರು. ಇಷ್ಟೇ ಅಲ್ಲ-ಅವರ ಕೀರ್ತನೆಗಳಿಂದ ಸ್ಫೂರ್ತಿಗೊಂಡು ತೆಲುಗು ಕೃತಿ ಲೇಖನಗಳಲ್ಲಿ ಅಗ್ರ ಗಣ್ಯರಾದ ತ್ಯಾಗರಾಜರು ಅಸಂಖ್ಯ ಉತ್ತಮೋತ್ತಮ ಕೃತಿಗಳನ್ನು ರಚಿಸಿದರು. ವೈಷ್ಣವ ಭಕ್ತರಂತೆಯೇ ಶೈವ ಹಾಗು ವೀರಶೈವಭಕ್ತರೂ ಕನ್ನಡದಲ್ಲಿ ಅನೇಕಾನೇಕ ಕೀರ್ತನೆ, ಪದ್ಯ ಮುಂತಾದವುಗಳನ್ನು ರಚಿಸಿ ಕನ್ನಡ ವಾಙ್ಮ-ಯಕ್ಕೆ ಶೋಭೆಯನ್ನುಂಟುಮಾಡಿದ್ದಾರೆ. ಹೀಗೆ ನೂರಾರು ಹರಿದಾಸರು, ನೂರಾರು ಶಿವಶರಣರು ಭಕ್ತಿ ಗೀತೆಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಎಷ್ಟೋ ಕಾಲವಶವಾಗಿವೆ, ಎಷ್ಟೋ ಅಪ್ರಸಿದ್ಧ ಸ್ಥಿತಿಯಲ್ಲಿವೆ. ಜನಮನದಲ್ಲಿ ಈಶ್ವರ ಪ್ರೇಮತರಂಗಗಳನ್ನೆಬ್ಬಿಸುವ ಸಾಮರ್ಥ್ಯವುಳ್ಳ ಈ ಭಕ್ತಿವಾಙ್ಮಯದ ಎಷ್ಟೋ ಭಾಗವು ಅಚ್ಚುಕಾಣದೆ, ಹುಳುಹುಪ್ಪಡಿಗಳಿಗೆ ತುತ್ತಾಗುತ್ತಿವೆ. ಅವನ್ನು ಉದ್ಧರಿಸುವದು ಎಲ್ಲರ ಕರ್ತವ್ಯವಾಗಿದೆ.

## ದಾಸರ ಸದ್ಗುಣಗಳು

ದಾಸ ಸಾಂಪ್ರದಾಯಕ್ಕೆ ಸೇರಿದ ಎಲ್ಲ ದಾಸರಲ್ಲಿ ಮತ್ತು ಅವರು ಬರೆದ ಎಲ್ಲ ಪದ್ಯಗಳಲ್ಲಿ ಕೆಲವು ಸಾಮಾನ್ಯ ಲಕ್ಷಣಗಳು ಕಂಡುಬರುವವು. ಪರಮಾತ್ಮನು ಕೇವಲ ಬುದ್ಧಿಗಮ್ಯ ವಿಷಯವೆಂದು ಅವರು ನಂಬಿರಲಿಲ್ಲ. ಆದ್ದರಿಂದ ಅವರು ಬರಿಯ ತತ್ವಜ್ಞಾನಕ್ಕೆ ಅಷ್ಟೊಂದು ಮಹತ್ವವನ್ನು ಕೊಟ್ಟಿಲ್ಲ. ತತ್ವಜ್ಞಾನದ ದೃಷ್ಟಿಯಿಂದ ಅವರಲ್ಲಿ ಬಹುಶಃ ಎಲ್ಲರೂ ಮಾಧ್ವಸಾಂಪ್ರದಾಯದ ದ್ವೈತರು. ಆದರೆ ಅವರು ರಚಿಸಿದ ಭಕ್ತಿಪದಗಳಲ್ಲಿ ಕೆಲವೊಂದು ಮಾತ್ರ ಸಾಂಪ್ರದಾಯಿಕವಿರುವವು. ಮಿಕ್ಕವೆಲ್ಲ ಸಾಂಪ್ರದಾಯಾತೀತವಿದ್ದು ಪರಮಾತ್ಮನ ಪ್ರೇಮದಿಂದ ಪ್ರೇರಿತವಾಗಿರುವವು. ಯಾವದೇ ದೇಶವಿರಲಿ, ಕೋಶವಿರಲಿ,ಎಲ್ಲೆಲ್ಲಿ ಮಾನವೀ ಅಂತರಂಗದಲ್ಲಿ ಪರಮಾತ್ಮನ ಪ್ರೇಮಲಹರಿಗಳು ಏಳುವವೋ ಅಲ್ಲಲ್ಲಿ ಈ ಪದ್ಯಗಳ ಗುಣಗ್ರಹಣವಾಗದೆ ಇರದು. ಅವರು ಬುದ್ಧಿವಾದದ ಮಾರ್ಗವನ್ನು ಬಿಟ್ಟು ಅನುಭವದ ಮಾರ್ಗವನ್ನು ಹಿಡಿದವರು; ಆತ್ಮಾನುಭವವೆಂಬುದು ಎಲ್ಲಿಹೋದರೂ ತತ್ವತಃ ಒಂದೇ ಇರುವದು. ಎಲ್ಲ ದಾಸರು ಒಂದೇ ಮುಖ್ಯ ಉದ್ದೇಶದಿಂದ ಹಾಡುಗಳನ್ನು ಕಟ್ಟಿರುವರು. ಪರಮಾತ್ಮನನ್ನು ಕುರಿತು ತಮ್ಮ ಹೃದಯದಲ್ಲಿ ಉಕ್ಕುವ ಭಾವಲಹರಿಗಳನ್ನೆಲ್ಲ ಮುಚ್ಚುಮರೆಯಿಲ್ಲದೆ ಹರಿಬಿಡುವದೆ ಅವರ ಉದ್ದೇಶವು. ಅವರಲ್ಲಿ ಯಾವದೇ ಕೃತಕತನ, ದಂಭ ಮುಂತಾದವುಗಳಿಗೆ ಆಸ್ಪದವಿರಲಿಲ್ಲ. ಬಹುಶಃ ಎಲ್ಲ ಕೀರ್ತನೆ, ಸುಳಾದಿ, ಉಗಾಭೋಗಾದಿಗಳು ರಾಗಪೂರ್ಣವಾಗಿ ಹಾಡಲು

ಬರುವಂತಿವೆ. ಈಶಸಂಕಲ್ಪದಿಂದ ರಚಿತವಾದ ಈ ವಿಶ್ವವು ತಾಳಬದ್ಧವಾಗಿರುವಂತೆ ಆ ಈಶನ ಪ್ರೇಮದಿಂದ ಹೊರಸೂಸಿದ ಕವನಗಳಾದರೂ ತಾಳಮೇಳ ಯುಕ್ತವಾಗಿ ಕಂಗೊಳಿಸುವದು ಆಶ್ಚರ್ಯವಲ್ಲ. ಈ ಪದ್ಯಗಳನ್ನೆಲ್ಲ ಅವರು ತಿಳಿಗನ್ನಡದಲ್ಲಿಯೇ ಬರೆದಿದ್ದಾರೆ. ಶತಕಾನುಶತಕಗಳ ವರೆಗೆ ಸಂಸ್ಕೃತದ ಜೀಗ ಮುದ್ರೆ ಹಾಕಿಟ್ಟ ಭಾವಭಾಂಡಾರವನ್ನು ಸೂರೆಗೊಂಡು ಅದನ್ನು ದಾಸರು ಸವಿಸೊಲ್ಲುಗಳ ಸಹಿತವಾಗಿ ಸರ್ವರಿಗೆ ಕೈಗೆಸಿಕ್ಕುಂತೆ ಹಂಚಿದ್ದಾರೆ. ಸಂಸ್ಕೃತ ಭಕ್ತಿವಾಙ್ಮಯವೆಂಬ ಪಂಚಪಕ್ವಾನ್ನವನ್ನು ಉಣ್ಣುವ ಪಂಡಿತರನ್ನು ನೋಡಿ ಹಾಯೆಂದು ಬಾಯಿತೆರೆದು ಹಂಬಲಿಸುವ ಪಾಮರರನ್ನು ಕಂಡು ದಾಸರು ಆಬಾಲವೃದ್ಧರಿಗೆ ಆರೋಗ್ಯಕರವಾದ ಕ್ಷೀರಾನ್ನವನ್ನು ಬಡಿಸಿರುವರೆಂದರೆ ಅತಿಯೋಕ್ತಿಯಾಗಲಿಕ್ಕಿಲ್ಲ. ಆರಡಿಯು ಅತ್ತಿತ್ತ ಸುತ್ತಿ ಹಲವು ಪುಷ್ಪಗಳ ಪರಿಮಳವ ಸೆಳೆದು ಮಧುವ ಮೆದ್ದು, ಹೆಚ್ಚಾದುದನ್ನು ಹೊತ್ತುತಂದು ಹಾಡುತ್ತ ಹುಟ್ಟಿಗೆ ಹಾಕುವಂತೆ, ಭಕ್ತಿಪರವಶರಾದ ದಾಸರು ಭಾವರಾಜ್ಯದಲ್ಲಿ ವಿಹರಿಸಿ ನಲಿನಲಿದಾಡಿ ಮಧುರಪ್ರೇಮದ ತನಿರಸವನ್ನುಂಡು ಉಳಿದುದನ್ನು ನಮಗಾಗಿ ಈ ಇಂಚರದ ನುಡಿಗಳಲ್ಲಿ ತುಂಬಿ ಇಟ್ಟಿದ್ದಾರೆ. ಅನಾಯಾಸವಾಗಿ ಕೈಸೇರಿದ, ಈ ಅಮೃತಕುಂಭವನ್ನು ಸೂರೆಗೊಂಡು ಸವಿಯದಿದ್ದವರೇ ದುರ್ಭಾಗಿಗಳು.

ಎಲ್ಲ ದಾಸರ ಪದ್ಯಗಳಲ್ಲಿಯೂ ಮೇಲೆ ಹೇಳಿದಂತೆ ಹಲವು ಸಾಮಾನ್ಯ ಗುಣಗಳಿದ್ದರೂ ಪ್ರತಿಯೊಂದು ದಾಸರಲ್ಲಿ ಕೆಲವೊಂದು ವಿಶಿಷ್ಟ ಗುಣಗಳಿರುವವು. ಎಲ್ಲರೂ ಈ ನಶ್ವರದೇಹ-ಈ ಮೋಹಕಸಂಸಾರ--ಇವುಗಳ ಬಗ್ಗೆ ಪೂರ್ಣ ವಿರಾಗವನ್ನು, ಪರಮಾತ್ಮಭಕ್ತಿ, ಮುಕ್ತಿಯಹಂಬಲ ಇವುಗಳ ಬಗ್ಗೆ ಅನುರಾಗವನ್ನು, ತಮ್ಮ ವಿಷಯಗಳಾಗಿ ಇಟ್ಟುಕೊಂಡಿದ್ದರು. ಅವರು ಉಪಯೋಗಿಸಿದ ಭಾವಭಾಷೆಗಳಲ್ಲಿ ಅನೇಕ ಬಗೆಗಳೂ ಚಮತ್ಕಾರವೂ ಹೊಸರಸವೂ ಕಂಡುಬರುವದು. ಪುರಂದರದಾಸರ ಪದಗಳಲ್ಲಿಯ ತಿರುಳ್ಗನ್ನಡವೂ, ಸುಲಭತೆಯೂ ಪ್ರಸಾದವೂ ಅನ್ಯರ ಪದಗಳಲ್ಲಿ ಕಾಣಲರಿಯವು. ಅವರು ಬಹಳೇ ವಿವಿಧ ಭಾವಗಳನ್ನು ವ್ಯಕ್ತಪಡಿಸಿದ್ದಾರೆ. ಅವರು ಕೊಡುವ ಉಪಮೆಗಳು ಹೃದಯಂಗಮವಾಗಿರುವವು. ಕನಕದಾಸನ ವಾಣಿಯು ಶುದ್ಧವೂ, ವೀರವತ್ತರವೂ ಇರುವದು. ಅವನು ತನ್ನ ವಿಚಾರಗಳನ್ನು ಬಳ್ಳೇ ಸ್ಪಷ್ಟವಾಗಿಯೂ, ಅಚ್ಚಾಗಿಯೂ ನಮ್ಮ ಮುಂದಿಡುವನು. ಅವನ ಸುಭಾಷಿತಗಳು, ಅವನ ಅನುಭವದ ವೈವಿಧ್ಯವನ್ನು ನಮಗೆ ತೋರುವವು. ಅವನ ಮುಂಡಿಗೆಗಳೂ ಪ್ರಸಿದ್ಧವಿರುವವು. ವಿಜಯದಾಸರ ಕೃತಿಗಳು ಬಹುಮಟ್ಟಿಗೆ ಪುರಂದರದಾಸರ

ಶೈಲಿಯನ್ನು ಹೋಲುವವು. ಸರಲತೆ, ಸುಲಭತೆ, ಪದಲಾಲಿತ್ಯ ಪ್ರಸಾದಗುಣ-ಇವು ವಿಜಯದಾಸರಲ್ಲಿ ಚನ್ನಾಗಿ ಕಂಡುಬರುವವು. ಜಗನ್ನಾಥದಾಸರ ಪದ್ಧತಿಯು ಬೇರೆತರದ್ದಿರುವದೆಂದು ಹೇಳಬಹುದು. ಅವರು ಪಂಡಿತರು ಹಾಗೂ ತಾರ್ಕಿಕರು. ಆದ್ದರಿಂದ ಅವರ ಪದ್ಯಗಳಲ್ಲಿ ಸಂಸ್ಕೃತವು ವಿಶೇಷ. ಅವರ ಪದ್ಯಗಳಲ್ಲಿ ತತ್ವವಿವೇಚನೆಗೆ ಹೆಚ್ಚು ಮಹತ್ವ ಕೊಡಲ್ಪಟ್ಟಿದೆ. ಹೀಗೆ ಬೇರೆ ಬೇರೆ ದಾಸರಲ್ಲಿ ಬೇರೆ ಬೇರೆ ಗುಣಗಳು ಕಂಡುಬರುವವು. ಇದೇ ರೀತಿಯಾಗಿ ಪ್ರತಿಯೊಂದು ದಾಸರ ಶೈಲಿಯನ್ನು ಪರಾಮರ್ಶಿಸಬಹುದು.

ದಾಸರು ಒರೆದ ಕೀರ್ತನಾದಿಗಳಕಡೆಗೆ ನಾವು ಅನೇಕ ದೃಷ್ಟಿಯಿಂದ ನೋಡಬಹುದು. ಕೇವಲ ಸಾಹಿತ್ಯ ದೃಷ್ಟಿಯಿಂದ ನೋಡಿದರೂ ಈ ದಾಸ ವಾಙ್ಮಯದಲ್ಲಿ ಕೆಲವು ಅತ್ಯುಚ್ಚ ಗುಣಗಳು ಕಂಡುಬರುವವು. ಮನುಷ್ಯ ಸ್ವಭಾವದ ಉತ್ತಮ ವರ್ಣನೆ, ಅತ್ಯಂತ ಸುಲಭ ಮತ್ತು ಸರಳಭಾಷೆಯಲ್ಲಿ ಅಂತಃಕರಣದಲ್ಲಿಯ ಗೂಢವಾದ ಮತ್ತು ಸಹಜವಾದ ಭಾವಗಳನ್ನು ಸಹಜ ಮತ್ತು ಮನೋಹರ ರೀತಿಯಿಂದ ವ್ಯಕ್ತಮಾಡುವ ದಾಸರ ಸಾಮರ್ಥ್ಯ, ಪ್ರಸಾದಗುಣ, ದೇವರ ಅವತಾರಗಳನ್ನು ಬಣ್ಣಿಸುವದರಲ್ಲಿ ಕವಿಗಳು ತೋರಿದ ಚಮತ್ಕೃತಿ, ರೂಪಕ ಉತ್ಪ್ರೇಕ್ಷಾದಿ ಅಲಂಕಾರಗಳನ್ನು ಪಯೋಗಿಸುವಾಗ ದಾಸರು ವ್ಯಕ್ತಪಡಿಸಿದ ಕಲ್ಪಕತೆ, ಕಿವಿಗಿಂಪಾಗುವಂತೆ ಅವರು ಮಾಡಿದ ಶಬ್ದರಚನೆ, ಈ ಮುಂತಾದ ಉತ್ತಮ ಕಾವ್ಯಲಕ್ಷಣಗಳು, ಕವಿಪ್ರತಿಭೆಯ ಕುರುಹುಗಳು, ದಾಸರ ಕೃತಿಗಳಲ್ಲಿ ಒಡೆದುಕಾಣಿಸುತ್ತವೆ. ದಾಸರ ಕಾವ್ಯವು ಆಳವಾದುದಿದ್ದು ಸುಲಭವಿರುವದು, ಸುಲಭವಿದ್ದರೂ ಗಂಭೀರವಿರುವದು, ಗಂಭೀರವಿದ್ದರೂ ಆಕರ್ಷಕವಿರುವದು. ಆಕರ್ಷಕವಿದ್ದು ಉದ್ಬೋಧಕ ವಿರುವದು, ಮೋಕ್ಷದಾಯಕವಿರುವದು. ಇಲ್ಲಿ ಉಚ್ಚ ಅಧ್ಯಾತ್ಮಿಕ ಅನುಭವಗಳು ಬುದ್ಧಿಗೆ ಸಹಜವಾಗಿ ತಿಳಿಯುವಂತೆ ಬರೆಯಲ್ಪಟ್ಟಿರುವವು.

## ಕೀರ್ತನೆಗಳ ಕಾರ್ಯ

ಕರ್ನಾಟಕದಲ್ಲಿ ದಾಸರ ಕೀರ್ತನೆಗಳಿಂದ ಆದ ಲೋಕಶಿಕ್ಷಣದ ಕಾರ್ಯ ವೇನೂ ಅಲ್ಪವಲ್ಲ. ಭಕ್ತಿತತ್ವ, ಭಕ್ತಿಭಾವ, ಅದರ ವಿವರಣೆ, ಇವುಗಳನ್ನು ಇಲ್ಲಿ ನೋಡಬಹುದು. ದಾಸರು ಸ್ವತಃ ಶ್ರೇಷ್ಠಸಾಧಕರಿದ್ದರು. ಅಹೇತುಕ ನಿರ್ಮಲಭಕ್ತಿಯಿಂದ ಪ್ರೇರಿತರಿದ್ದರು. ಉಚ್ಚ ಅಧ್ಯಾತ್ಮಿಕ ಅನುಭವಗಳನ್ನು ಪಡೆದವರಿದ್ದರು. ಆದುದರಿಂದ ತಾವು ಅನುಭವಿಸಿದ ಭಕ್ತಿಯ ವಿವಿಧಭಾವಗಳನ್ನು

ಸುಂದರ, ಸೊಬಗಿನ, ಕನ್ನಡನುಡಿಯು ಎರಕದಲ್ಲಿ ಹೊಯ್ದು ಪಂಡಿತ ಪಾಮರರೆದುರಿಗೆ ಅವರು ಇಟ್ಟಿದ್ದಾರೆ. ವಿಷ್ಣು ಪುರದಲ್ಲಿ ಹುಟ್ಟಿದ ದಿವ್ಯಗಂಗೆಯ ಜಲವನ್ನು ಸಣ್ಣಸಣ್ಣ ಚಿನ್ನದ ಗಿಂಡಿಗಳಲ್ಲಿ ತುಂಬಿ, ದಾಸರು ಅದನ್ನು ಬಾಲಬಾಲಿಕೆಯರಿಗೆ ಕೂಡಾ ನೀಡಿ ಹೀನದೀನರಿಗೆ ಕೂಡಾ ಕೊಟ್ಟು ಅವರನ್ನು ಪಾವನ ಮಾಡಿದ್ದಾರೆ. ನಿಘಂಟು, ನಿರುಕ್ತ ವ್ಯಾಕರಣ ಮುಂತಾದವುಗಳ ಸಹಾಯದಿಂದ ಸಹ ಚನ್ನಾಗಿ ತಿಳಿಯದ ಸಂಸ್ಕೃತ ಗ್ರಂಥಗಳಲ್ಲಿಯ ತತ್ವ ಹಾಗು ಭಕ್ತಿಭಾವಗಳನ್ನು ತಮ್ಮ ಅನುಭವಬಲದಿಂದಲೂ ಕನ್ನಡ ಭಾಷಾಪ್ರಭುತ್ವದಿಂದಲೂ ತಮ್ಮ ಗೀತೆಗಳಲ್ಲಿ ವ್ಯಕ್ತಪಡಿಸಿದ್ದಾರೆ, ಸಾಮಾನ್ಯರು ಹಾಡಿ ತಿಳಿದುಕೊಳ್ಳುವಂತೆ ಬರೆದಿದ್ದಾರೆ. ಮಠ-ಮಂದಿರಗಳಲ್ಲಿ ಮಾತ್ರ ಹುದುಗಿದ್ದ ಧರ್ಮತತ್ವಗಳನ್ನು ಮನೆಮನೆಗೆ ಬೀರಿದ್ದಾರೆ. ಕೆಲವರಿಗೆ ಮಾತ್ರ ತೆರೆದಿಟ್ಟಿದ್ದ ಮುಕ್ತಿಮಂದಿರವನ್ನು ಸರ್ವರಿಗೂ ಮುಕ್ತದ್ವಾರ ಮಾಡಿದ್ದಾರೆ. ಒಟ್ಟಿಗೆ ನೋಡಲಾಗಿ ಅತಿಶಯ ಕಠಿಣ ತತ್ವಗಳನ್ನು ಕೂಡಾ ತಮ್ಮ ಪ್ರಾಸಾದಿಕ ವಾಣಿಯಿಂದ ಲೋಕಪ್ರಿಯ ಮತ್ತು ಲೋಕ ಪ್ರಚಲಿತ ಮಾಡಿದ ಶ್ರೇಯಸ್ಸು ದಾಸರಿಗೆ ಇದೆಯೆನ್ನುವದರಲ್ಲಿ ಯಾವ ಸಂಶಯವೂ ಇಲ್ಲ.

ಈ ಕಾರ್ಯವನ್ನು ಅವರು ಸಂಗೀತಕೀರ್ತನೆಗಳ ಮುಖಾಂತರ ಮಾಡಿದ್ದರಿಂದ ಕರ್ನಾಟಕದಲ್ಲಿ ಸಂಗೀತಶಾಸ್ತ್ರಕ್ಕೆ ಕೂಡಾ ಒಂದುಬಗೆಯ ಪಾವಿತ್ರ್ಯ ಮತ್ತು ಪ್ರೋತ್ಸಾಹ ದೊರೆಯಿತೆಂದು ಹೇಳಬಹುದು. ಭಾವವಿಲ್ಲದ ಸಂಗೀತವು ರಸವಿಲ್ಲದ ಹಣ್ಣಿನಂತೆ, ವಾಸನೆಯಿಲ್ಲದ ಹೂವಿನಂತೆ. ಭಾವವು ಎಷ್ಟು ಪವಿತ್ರವೋ ಉಚ್ಚವೋ ಅಷ್ಟು ಆ ಗೀತವು ಹೆಚ್ಚು ಸರಿ ಹಾಗು ಮಧುರವು. ಅಂತರ್ಬಾಹ್ಯ ಶುದ್ಧನಿದ್ದವನೇ ಶುದ್ಧನು, ತ್ರಿಕಾಲದಲ್ಲಿ ಶುದ್ಧನಿದ್ದವನೇ ಶುದ್ಧನೆಂದು ನಾವು ಹೇಳುವೆವು. ಅದೇರೀತಿ ಭಾವ, ಶಬ್ದ, ಅರ್ಥಮತ್ತು ಸ್ವರ ಇವು ನಾಲ್ಕೂ ಶುದ್ಧ ಮತ್ತು ಶಾಸ್ತ್ರೀಯವಿದ್ದರೇ ಉತ್ತಮಸಂಗೀತವು. ಅಂಥ ಉತ್ತಮ ಸಂಗೀತವನ್ನು ದಾಸರು ನಮಗೆ ದಯಪಾಲಿಸಿದ್ದಾರೆ.

## ಭಕ್ತಿಭಾವಮಂಡನ

ಭಕ್ತಿಭಾವಮಂಡನದ ದೃಷ್ಟಿಯಿಂದಂತೂ ಈ ಕೀರ್ತನಗಳು ಅನುಪಮವಿರುವವು. ಪ್ರೇಮಾತುರರಾದ, ಪರಮಾತ್ಮ ಪ್ರೀತಿಯಿಂದ ಪ್ರೇರಿತರಾದ, ಉತ್ಕಟ ಈಶ್ವರಪ್ರೇಮದಿಂದ ವ್ಯಾಕುಲರಾದ ಈ ದಾಸರು ಪ್ರತಿಯೊಂದು ಭಾವ, ಉಪಭಾವ, ಭಾವಚ್ಛಾಯೆಗಳನ್ನು ಸ್ವತಃ ಅನುಭವಿಸಿ ಆ ಅನುಭವವನ್ನು

ತಮ್ಮ ಕೀರ್ತನೆಗಳಲ್ಲಿ ಪ್ರತಿಬಿಂಬಿಸಿದ್ದಾರೆ. ಈಶ್ವರನ ವಿರಹದಿಂದ ವಿಹ್ವಲರಾದ ಈ ಪ್ರೇಮಿಗಳ ಅಂತಃಕರಣಸಾಗರದಲ್ಲಿದ್ದ ಪ್ರತಿಯೊಂದು ತರಂಗವು, ವಿವಿಧ ಆಲಾಪಗಳು ದಾಸರಿಂದ ಹೊರಹೊಮ್ಮಿ ಸುಲಲಿತಶಬ್ದಗಳಲ್ಲಿ ಹೆಪ್ಪುಗಟ್ಟಿನಿಂತಿವೆ. ಪರಮಾತ್ಮನನ್ನು ಮೆಚ್ಚಿ ಮೈಮರೆತು ಅತಿ ಹುಚ್ಚರಂತೆ ಇರುವ ಈ ಭಕ್ತರು ಒಮ್ಮೆ ದುಃಖಸಂತಪ್ತರಾಗಿ, ತ್ರಿವಿಧತಾಪಗಳಿಂದ ಪೀಡಿತರಾಗಿ ಆರ್ತಭಾವ ದಿಂದ ದೇವರನ್ನು ಮೊರೆಹೋಗುವರು. ಇನ್ನೊಮ್ಮೆ ತಮ್ಮ ತಾಪಗಳ ಭೀಷಣ ಚಿತ್ರವನ್ನು ರೇಖಿಸಿ ಗದ್ಗದಕಂಠದಿಂದ ಕ್ಷಮೆಯನ್ನು ಬೇಡುವರು. ಒಮ್ಮೆ ಶಾಂತಭಾವದಿಂದ ಈಶಮಹಿಮೆಯನ್ನು ಹಾಡಿದರೆ, ಇನ್ನೊಮ್ಮೆ ಸಖನಂತೆ ಅವನನ್ನು ಸಂಬೋಧಿಸುವರು. ತಮ್ಮಂಥ ಪತಿತರ ಕಡೆಗೆ ಪರಮಾತ್ಮನು ನೋಡನು ಎಂದು ಒಮ್ಮೆ ನಿರಾಶರಾದರೆ ಇನ್ನೊಮ್ಮೆ ಆವರು ಭಕ್ತರನ್ನು ಕಾಯುವದೇ ನಿನ್ನ ಕರ್ತವ್ಯವೆಂದು ಅಧಿಕಾರದಿಂದ ದೇವರಿಗೆ ಉಪದೇಶ ಮಾಡುವರು. ಒಮ್ಮೆ ತಾಯಿತಂದೆ ಸೇವಕ ಮುಂತಾದ ಭಾವನೆಗಳಿಂದ ದೇವರೊಡನೆ ನಡೆಯುವರು. ಇನ್ನೊಮ್ಮೆ ಅವನು ಸರ್ವಾತೀತನೆಂದು ಭಾವಿಸಿ ಅಗೋಚರನೆಂದು ಹಾಡುವರು; ಬಿರುದುಗಳನ್ನು ಹೊತ್ತಮೇಲೆ ಭಕ್ತರನ್ನು ಕಾಯಲಿಕ್ಕೆ ಬೇಕೆಂದು ಅವನನ್ನು ರೇಗಿಸುವರು; ತಾನೇ ಹಾವಿನಮೇಲೆ ಮಲಗಿದವನು-ನಮಗಿನ್ನೇನು ಕೊಟ್ಟಾನು ಎಂದು ಸರಸ ಮಾಡುವರು; ವಿಯೋಗದಿಂದ ಸಾವಿರ ಚೇಳು ಕಡಿದಷ್ಟು ದುಃಖವಾದುದನ್ನು ಒಮ್ಮೆ ಬಣ್ಣಿಸಿದರೆ, ಈಶಸಂಯೋಗದಿಂದ ಆದ ಸುಖವನ್ನು ಅತ್ಯಂತ ಧನ್ಯ ಭಾವದಿಂದ ಇನ್ನೊಮ್ಮೆ ಬಣ್ಣಿಸುವರು. ಪ್ರಕೃತಿಯು ಪುರುಷನನ್ನು ಪ್ರಿಯೆಯು ಪ್ರಿಯನನ್ನು ಆರಾಧಿಸುವಂತೆ, ಈ ಭಕ್ತರು ಮಧುರಭಾವನೆಯಿಂದ ಆರಾಧಿಸಿ ಭಕ್ತಿಭಾವನೆಯ ಚರಮಸೀಮೆಯನ್ನು ಮುಟ್ಟುವರು. ಏಕಾಂತಿಕ ಅನನ್ಯ ಭಕ್ತಿಯ ಮುಂದೆ ಮಿಕ್ಕ ಎಲ್ಲ ಸಾಧನಗಳು ತುಚ್ಛವೆಂದು ಸ್ವಾಭಿಮಾನ ದಿಂದಲೂ ಸ್ವಾನುಭವದಿಂದಲೂ ಈ ಸದ್ಭಕ್ತರು ಹೇಳುವರು. ವಿವಿಧ ಹಾಗು ಅತ್ಯಂತ ಸೂಕ್ಷ್ಮವಾದ ಭಾವಸ್ವರಗಳನ್ನು ತಮ್ಮ ಹೃದಯವೀಣೆಯಿಂದ ನುಡಿಸಿ ಆ ಇಂಚರವನ್ನು ಕೇಳುವವರ ಅಂತಃಕರಣದಲ್ಲಿ ಆಯಾಭಾವನೆಯ ತೆರೆಗಳನ್ನೆಬ್ಬಿಸುವ ಈ ಮಾಟಗಾರರ ಮೋಹಿನಿಯನ್ನು ಇನ್ನೇನು ವರ್ಣಿಸಲಿ?

## ನನ್ನ ಪ್ರಯತ್ನ

ಇನ್ನು ಈಗ ಪ್ರಸಿದ್ಧವಾದ ದಾಸವಾಙ್ಮಯ, ನಾನು ಇಲ್ಲಿ ಕೈಕೊಂಡ ಕಾರ್ಯಪದ್ಧತಿ ಇವುಗಳ ಬಗ್ಗೆ ಎರಡು ಮಾತುಗಳನ್ನು ಹೇಳುವೆನು. ಇದುವರೆಗೆ ಬೆಳಗಾಂವಿಯ ರಾಮತತ್ವ ಪ್ರಕಾಶ ಮುದ್ರಣಾಲಯದವರು

ಉಡುಪಿಯ ಪಾವಂಜೆ ಗುರುರಾಯರು, ಬೆಂಗಳೂರ "ಸುಬೋಧ" ರಾಮರಾಯರು, ಶ್ರೀ. ಕಲಮುದಾನಿಯವರು ಮುಂತಾದ ಮಹನೀಯರು ಕೈಲಾದಮಟ್ಟಿಗೆ ದಾಸವಾಙ್ಮಯವನ್ನು ಪ್ರಕಟಿಸಿ ಕನ್ನಡಿಗರ ಮೇಲೆ ಚಿರಉಪಕಾರವನ್ನು ಮಾಡಿದ್ದಾರೆ. ಆದರೂ ಇನ್ನೂ ಅಪ್ರಕಟವಾದ ಭಾಗಗಳು ಬಹಳವಿರುವವೆಂದು ಧಾರಾಳವಾಗಿ ಹೇಳಬಹುದು. ಇಲ್ಲಿ ದಾಸವಾಙ್ಮಯವನ್ನು ಕೇವಲ ಪ್ರಸಿದ್ಧಿಸುವದು ನನ್ನ ಮುಖ್ಯ ಉದ್ದೇಶವಲ್ಲ. ದಾಸರು ಯಾನಬಗೆಯ ಭಕ್ತಭಾವನೆಗಳನ್ನು ವ್ಯಕ್ತಪಡಿಸಿದ್ದರೋ ಅವುಗಳನ್ನು ವಿವೇಚಿಸಿ, ಆಯಾ ಭಾವದ ಅವರ ಉತ್ತಮ ಕವನಗಳನ್ನು ಆರಿಸಿ, ಚನ್ನಾಗಿ ಅವುಗಳ ಗುಣಗ್ರಹಣವಾಗುವಂತೆ ಜನರ ಮುಂದಿರಿಸುವದೇ ನನ್ನ ಉದ್ದೇಶ. ಆದುದರಿಂದ ನನ್ನ ಕೈಗೆ ಬಂದ ಪ್ರಕಾಶಿತ ಅಪ್ರಕಾಶಿತ ದಾಸವಾಙ್ಮಯವನ್ನು ನನ್ನ ಮುಂದಿಟ್ಟುಕೊಂಡಿರುವೆನು. ನಿಜವಾಗಿ ನೋಡಿದರೆ ಪ್ರತಿಯೊಬ್ಬ ದಾಸರ ಪದ್ಯಗಳು ಶೇಖರಿಸಲ್ಪಟ್ಟು ಪರಿಶೋಧಿಸಲ್ಪಟ್ಟು ಆಯಾ ಪದ್ಯಗಳಲ್ಲಿದ್ದ ಯಾವತ್ತು ಭಾವಗಳಿಗನುಗುಣವಾಗಿ ವರ್ಗೀಕರಿಸಲ್ಪಟ್ಟು ಅವೆಲ್ಲ ಚನ್ನಾಗಿ ಅಚ್ಚಾಗುವದು ಅವಶ್ಯಕವು. ಹಾಗೆ ಆದರೆ ದಾಸವಾಙ್ಮಯದ ಹಾಗೂ ಭಕ್ತಿಮಾರ್ಗದ ಅಭ್ಯಾಸಕ್ಕೆ ಒಳ್ಳೇ ಸಹಾಯವಾಗುವದು. ಪ್ರಸ್ತುತ ನಾನು ನನ್ನ ಕೈಗೆ ಸಿಕ್ಕ ಪದ್ಯಗಳನ್ನಷ್ಟೆ ಇಟ್ಟುಕೊಂಡು ಅವುಗಳಲ್ಲಿಯ ಉತ್ತಮವಾದವುಗಳನ್ನು ಆರಿಸಿ ಆಯಾ ಪದ್ಯಗಳ ವಿಷಯ ಮತ್ತು ಭಾವ ಇವುಗಳಿಗನುಸರಿಸಿ ೩೫ವರ್ಗಗಳಲ್ಲಿ ವಿಂಗಡಿಸಿದ್ದೇನೆ. ಪ್ರತಿಭಾಗದ ಆದಿಯಲ್ಲಿ ಅದರಲ್ಲಿಯ ವಿಷಯ ಮತ್ತು ಭಾವದ ಸಂಕ್ಷಿಪ್ತವಿವೇಚನೆಯನ್ನು ಕೊಡಲು ಯತ್ನಿಸಿದ್ದೇನೆ. ಆಯಾ ಭಾಗದಲ್ಲಿ ಆದಷ್ಟು ಉತ್ತಮವಾದ ಚಿಕ್ಕ ಸುಲಭ ಕವನಗಳನ್ನು ಹಾಕಿದ್ದೇನೆ. ಒಮ್ಮೊಮ್ಮೆ ಒಂದು ಪದ್ಯದಲ್ಲಿ ಎರಡೆರಡು ವಿಷಯಗಳ ಭಾವವು ಇದ್ದುದು ಕಂಡುಬರುವದು. ಅಂಥ ಪ್ರಸಂಗದಲ್ಲಿ ಮುಖ್ಯವಾದ ಭಾವವಾವುದೆಂಬುದನ್ನು ಅರಸಿ ನೋಡಿ ಆಯಾಭಾಗದಲ್ಲಿ ಸೇರಿಸಿದ್ದೇನೆ. ನಿಜವಾಗಿ ನೋಡಿದರೆ ಎಲ್ಲ ದಾಸರ ಎಲ್ಲ ಪದ್ಯಗಳು ಅವರವರ ಕಾಲಾನುಕ್ರಮ, ವಿಷಯಾನುಕ್ರಮ, ಭಾವಾನುಕ್ರಮ ಮತ್ತು ಆತ್ಮಾನುಭವಕ್ರಮ ಹೀಗೆ ವಿಂಗಡಿಸಲ್ಪಟ್ಟರೆ ಅವುಗಳನ್ನು ಅಭ್ಯಸಿಸಲು ಹಾಗು ಅವರವರ ಆಧ್ಯಾತ್ಮಿಕ ಪ್ರಗತಿಯನ್ನು ತಿಳಕೊಳ್ಳಲು ಸಾಧನವಾಗುವದು. ಆದರೆ ಇಲ್ಲಿ ಅದನ್ನೆಲ್ಲ ಮಾಡುವದು ಸಾಧ್ಯವಲ್ಲದ್ದರಿಂದ ನಾನು ಭಾವನಾನುಕ್ರಮವನ್ನಷ್ಟೇ ಅನುಸರಿಸಿರುವೆನು.

ಈ ಪುಸ್ತಕವನ್ನು ಓದಿದಾಕ್ಷಣಕ್ಕೆ ದಾಸರು ಬರೆದ ಎಲ್ಲ ಉತ್ತಮ ಕೀರ್ತನೆಗಳು ಮುಗಿದವೆಂದು ತಿಳಿಯಕೂಡದು. ದಾಸರ ಕೃತಿಗಳ ಅಭ್ಯಾಸಕ್ಕೆ ಒಂದು

ಪದ್ಧತಿ ಹಚ್ಚುವ ಪ್ರಯತ್ನಕ್ಕಿಂತ ನಾನು ಇಲ್ಲಿ ಹೆಚ್ಚಿನದೇನೂ ಮಾಡಿಲ್ಲವೆಂಬುದನ್ನು ಪೂರಾ ಒಲ್ಲೆನು. ದಾಸವಾಙ್ಮಯದಲ್ಲಿರುವ ಸೌಂದರ್ಯರಾಶಿಯ ಒಂದೇ ಒಂದು ಅಲ್ಪಭಾಗವನ್ನು ಮಾತ್ರ ನಾನು ಇಲ್ಲಿ ಭಾವಿಕರೆದುರಿಗೆ ಮಂಡಿಸಿರುವೆನು. ದಾಸವಾಙ್ಮಯವು ಸಮುದ್ರದಂತೆ ಅಸೀಮವಿರುವದು. ಆದರಲ್ಲಿ ಮುಳುಗಿ ನನ್ನ ಕೈಗೆ ಸಿಕ್ಕ ಹಲವು ಮುತ್ತುರತ್ನಗಳನ್ನು ಪರಿವಿಡಿಯಲ್ಲಿ ಪೋಣಿಸಿ ಆ ಹಾರವನ್ನು ಭಕ್ತಿದೇವಿಗೆ ಇಲ್ಲಿ ಅರ್ಪಿಸಿರುವೆನು. ಅಥವಾ ಈ ನನ್ನ ಚಿಕ್ಕ ಪುಸ್ತಕಕ್ಕೆ ರತ್ನಾವಳಿಯ ಸಾಟಿ ಏಕೆ? ಇದೊಂದು ಸಣ್ಣವನ ಮಾಲೆ. ಪ್ರೇಮ ರಸವನ್ನು ಎರೆದು ಬೆಳೆಸಿದ ಭಕ್ತಿವೃಕ್ಷದ ಎಳೆಮೊಗ್ಗು. ಹೂಗಳನ್ನು ತೆಗೆದು ಇದನ್ನು ಗುಂಫಿಸಿರುವೆನು. "ಪತ್ರಂ ಪುಷ್ಪಂ ಫಲಂ ತೋಯಂ" ಎಂಬ ನ್ಯಾಯದಿಂದ ನಮ್ರಭಾವದಿಂದ ನಾನು ಇದನ್ನು ಭಕ್ತರ ಹೃದಯದಲ್ಲಿ ನೆಲೆಸಿರುವ ನಾರಾಯಣನಿಗೆ ಅರ್ಪಿಸಿರುವೆನು. ಅವನ್ನು ಸ್ವೀಕರಿಸಿ ಅವನು ನನ್ನನ್ನು ಅನುಗ್ರಹಿಸಲಿ ಅಂದರೆ ನಾನು ಕೃತಾರ್ಥನು.

---

ॐ

# ಹರಿಭಕ್ತಿ ಸುಧೆ

## ೧. ಪೀಠಿಕಾಪ್ರಕರಣ

ಇದು 'ಹರಿಭಕ್ತಿಸುಧೆ'ಯ ಪೀಠಿಕಾಪ್ರಕರಣವು. ಇದರಲ್ಲಿ ಸ್ವಲ್ಪ ಮಟ್ಟಿಗೆ ಪೂರ್ವಪರಂಪರೆಗನುಸರಿಸಿ ಗಣಪತಿಯ ಸ್ತುತಿ, ಸರಸ್ವತಿಯ ಸ್ತುತಿ, ಯಾವ ಮಧ್ವಮತವನ್ನನುಸರಿಸಿ ಎಲ್ಲ ದಾಸರು ತಮ್ಮ ಸಾಧನವನ್ನು ಸಾಗಿಸಿದರೋ ಆ ಮಧ್ವರಾಯರ ಸ್ತುತಿ, ಬಳಿಕ ಈ ದಾಸಕೂಟದ ಗುರುಸ್ಥಾನದಲ್ಲಿದ್ದ ಶ್ರೀ ಪುರಂದರ ದಾಸರ ಮಹಾತ್ಮ್ಯ ಇವುಗಳನ್ನು ಕೊಟ್ಟು ತದನಂತರ ಹರಿಕಥೆ, ಹರಿಭಜನೆ, ಹರಿನಾಮ ಇವುಗಳ ಮಹತ್ವ ಈ ವಿಷಯಗಳನ್ನು ಕುರಿತು ಇರುವ ಶ್ಲೋಕಗಳನ್ನೂ ಪದ್ಯಗಳನ್ನೂ ಕೊಟ್ಟಿದ್ದೇನೆ.

ಗಣಪತಿ ಎಂದರೆ ಗಣಗಳ ಪತಿಯು ಅಥವಾ ಮುಖ್ಯಸ್ಥನು. ಗಣನಾಥ, ಗಣಾಧ್ಯಕ್ಷ, ಗಣನಾಯಕ ಈ ಹೆಸರುಗಳೂ ಈ ಅರ್ಥವನ್ನೆ ಸೂಚಿಸುತ್ತಿವೆ. ಗಣ ಅಂದರೆ ಗುಂಪು. ದೇವತೆಗಳ ಗುಂಪಿನ ಮುಖ್ಯಸ್ಥ ಎಂದು ಗಣಪತಿಗೆ ಹೆಸರು ಇರುವದು. ಕ್ರಿಸ್ತಪೂರ್ವ ೬ ನೇ ಶತಮಾನದಲ್ಲಿ ಹಾಗೂ ಅದಕ್ಕೂ ಮೊದಲು ಹಿಂದುಸ್ಥಾನದಲ್ಲಿ ಅನೇಕ ಗಣರಾಜ್ಯಗಳು ಅಂದರೆ ಪೂರ್ಣ ಪ್ರಜಾಸತ್ತಾತ್ಮಕ ರಾಜ್ಯಗಳು, ಯಾವ ಅರಸನೂ ಇಲ್ಲದ ಪ್ರಜಾಪ್ರಭುತ್ವವುಳ್ಳ ರಾಜ್ಯಗಳು ಅಸ್ತಿತ್ವದಲ್ಲಿದ್ದವೆಂದು ಐತಿಹಾಸಿಕ ಪ್ರಮಾಣಗಳಿವೆ. ಆ ರಾಜ್ಯಗಳಿಗೆ ಗಣರಾಜ್ಯಗಳೆನ್ನುತ್ತಿದ್ದರು. ತಮ್ಮತಮ್ಮ ಗಣಗಳಿಗೆ ಅಧಿಷ್ಠಾತ್ರಿಯಾದ ದೇವತೆಯನ್ನು ಆಯಾ ಜನರು ಗಣಪತಿ ಎಂದು ಪೂಜಿಸುತ್ತಿದ್ದರು. ಗಣಪತಿ ಎಂದರೆ ಶುಭ, ಐಕ್ಯ, ಯಶಸ್ಸು, ಸಿದ್ಧಿ, ಇವುಗಳ ಅಧಿದೇವತೆ ಎನ್ನಬಹುದು.

ಸರಸ್ವತಿಯು ವಿದ್ಯೆ ಬುದ್ಧಿಗಳ ಅಧಿದೇವತೆಯು. ಆಕೆ ವಿದ್ಯಾದಾಯಿನಿಯು, ಕಲಾಶಾಲಿನಿಯು, ವಾಗ್ದೇವಿಯು, ಸ್ಫೂರ್ತಿದೇವತೆಯು. ಸರಸ, ಸುಂದರ, ಶುದ್ಧ ಕಾವ್ಯನಿರ್ಮಾಣಕ್ಕೆ ಆಕೆಯ ಸಾನ್ನಿಧ್ಯವು ಅವಶ್ಯವು.

ದ್ವೈತಮತಸ್ಥಾಪನಾಚಾರ್ಯರಾದ ಶ್ರೀ ಮಧ್ವರಾಯರು ತಮ್ಮ ಗುರುಗಳೆಂದು ಎಲ್ಲ ದಾಸರು ಮನ್ನಿಸುತ್ತ ಒಂದುದರಿಂದ ಅವರ ಸ್ತುತಿಯನ್ನು ಇಲ್ಲಿ ಕೊಡುವದು ಅತ್ಯವಶ್ಯವೇ.

ಪುರಂದರದಾಸರು ದಾಸಶ್ರೇಷ್ಠರು. ಅವರು ಎಲ್ಲ ದಾಸರಿಗೂ ಗುರುಸ್ಥಾನದಲ್ಲಿರುವರು ಎಂಬ ಉಲ್ಲೇಖವು ಅನೇಕ ಕಡೆಗೆ ಇರುವದು. 'ಗುರುಪುರಂದರದಾಸರೇ' ಎಂದು, 'ಅಡಿಗಡಿಗೊಂದಿಪೆ ಪುರಂದರ ಗುರುವೇ' ಎಂದು ವಿಜಯದಾಸರು ಹಾಡಿದ್ದಾರೆ.

ಮುಂದೆ ಹರಿಕಥೆ, ಹರಿಭಜನೆ, ಹರಿನಾಮ ಇವುಗಳ ಮಹಿಮೆಯು ವರ್ಣಿತವಾಗಿದೆ. ಶಿವಶರಣರೆಲ್ಲರೂ ಶಿವೋಪಾಸಕರಿದ್ದಂತೆ ದಾಸರೆಲ್ಲರೂ ವಿಷ್ಣುವಿನ ಉಪಾಸಕರಿದ್ದರು. ಭಕ್ತರು ಯಾವದೇ ಹೆಸರನ್ನು ಅಥವಾ ರೂಪವನ್ನು ಕಣ್ಣುಮುಂದಿಟ್ಟುಕೊಂಡಿದ್ದರೂ ನಿಜ ಉಪಾಸ್ಯವಸ್ತುವು ಒಂದೇ ಒಂದು — ಪರಮಾತ್ಮ. ಇಲ್ಲಿ 'ಹರಿ' ಅಂದರೆ ವಿಶಿಷ್ಟ ಗುಣರೂಪಗಳುಳ್ಳ ದೇವತೆ ಎಂದು ಮಾತ್ರ ವೈಷ್ಣವೇತರರು ಯಾರೂ ತಿಳಿಯಕೂಡದು. ವೈಷ್ಣವರು ವಿಷ್ಣುವಿನ ಉಪಾಸನೆ, ಶೈವರು ಶಿವನ ಉಪಾಸನೆ, ದೇವೀ ಉಪಾಸಕರು ದೇವಿಯ ಉಪಾಸನೆ, ಕ್ರಿಸ್ತರು ಆಕಾಶದಲ್ಲಿಯ ದೇವರ ಉಪಾಸನೆ, ಹೀಗೆ ಮಾಡುತ್ತಿರಬಹುದು. ಆದರೆ ಎಲ್ಲರ ಉಪಾಸ್ಯವು' ಪರಮಾತ್ಮ ವಸ್ತುವೇ.' 'ಹರಿಕಥೆ' 'ಹರಿಭಜನೆ,' 'ಹರಿನಾಮ,' ಅಂದರೆ ಪರಮಾತ್ಮನ ಕೀರ್ತನೆ, ಪರಮಾತ್ಮನ ಭಜನೆ, ಪರಮಾತ್ಮನ ನಾಮಸ್ಮರಣೆ. ಯಾವ ಮತದವರಿದ್ದರೂ ಯಾವ ಹಟವನ್ನೂ ಹಿಡಿಯದೆ ಈ ದೃಷ್ಟಿಯಿಂದ ಎಲ್ಲ ಮತಗಳ ಕಡೆಗೆ ನೋಡಬೇಕು. ಪರಮಾತ್ಮನಿಗೆ ಯಾವ ಹೆಸರನ್ನು ಕೊಟ್ಟು ಅವನನ್ನು ಪೂಜಿಸಿದರೂ ಅದು ಅವನಿಗೇ ಹೋಗಿ ಮುಟ್ಟುವದು ಹೊರತು ಆ ಹೆಸರಿಗೆ ಇಲ್ಲವೆ ರೂಪಕ್ಕೆ ಆ ಪೂಜೆ ಮುಟ್ಟುವದಿಲ್ಲ! ಅಥವಾ ಭಿನ್ನಮತೀಯರ ಪರಮಾತ್ಮನೇನೂ ಭಿನ್ನಭಿನ್ನನಿಲ್ಲ! ಈ ಭಿನ್ನತೆ ಆ ಮೂಲ ಬಿಂಬವನ್ನು ಪ್ರತಿಬಿಂಬಿಸುವ ಕನ್ನಡಿಗಳಲ್ಲಿದೆ ಹೊರತು ಆ ಮೂಲ ಬಿಂಬದಲ್ಲಿಲ್ಲ.

## ಹರಿಭಕ್ತಿ ಸುಧೆ

ಭಕ್ತಿಮಾರ್ಗದಲ್ಲಿ ಪರಮಾತ್ಮನ ಭಜನೆ, ಕೀರ್ತನೆ, ಸ್ಮರಣೆ, ಇವುಗಳಿಗೆ ಅತ್ಯಂತ ಮಹತ್ವವಿರುವದು. ಆ ದೃಷ್ಟಿಯಿಂದ ಈ ಪೀಠಿಕೆಯಲ್ಲಿ ಈ ಪದ್ಯಗಳು ಮಾದರಿಗಾಗಿ ಸೇರಿಸಲ್ಪಟ್ಟಿವೆ. ಇವುಗಳ ಮಹತ್ವವು ಮುಂದೆ ಪ್ರತ್ಯೇಕ ಪ್ರಕರಣಗಳಲ್ಲಿ ವಿಶದವಾಗಿ ವರ್ಣಿಸಲ್ಪಟ್ಟಿದೆ.

ಕೊನೆಗೆ ಫಲಶ್ರುತಿಯನ್ನು ಹೇಳುವ ಒಂದು ಭಾಮಿನೀಷಟ್ಪದಿಯು ಇರುವದು.

### ೧. ಗಣಪತಿಯ ಸ್ತುತಿ

ನಾಟಿ ರಾಗ, ಆದಿತಾಳ

ವಂದಿಪೆ ನಿನಗೆ ಗಣನಾಥ | ಮೊದಲೊಂದಿಪೆ ನಿನಗೆ ಗಣನಾಥ || ಪಲ್ಲ ||
ಬಂದ ವಿಘ್ನ ಕಳೆ ಗಣನಾಥ || ಅನುಪಲ್ಲ ||

ಹಿಂದೆ ರಾವಣನು ಮದದಿಂದ ನಿನ್ನ ಪೂಜಿಸದೆ |
ಸಂದ ರಣದಲಿ ಗಣನಾಥ || ೧ ||
ಮಾಧವನಾಜ್ಞದಿ ಧರ್ಮರಾಜ ನಿನ್ನ ಪೂಜಿಸಲು |
ಸಾಧಿಸಿದ ರಾಜ್ಯ ಗಣನಾಥ || ೨ ||
ಮಂಗಳಮೂರುತಿ ಗುರು ರಂಗವಿಠ್ಠಲನ ಪಾದ |
ಭೃಂಗನೆ ಪಾಲಿಸೋ ಗಣನಾಥ || ೩ ||

### ೨. ಸರಸ್ವತಿಯ ಸ್ತುತಿ

ಆರಭಿರಾಗ, ಆದಿತಾಳ

ವಾಣೀ ಪರಮಕಲ್ಯಾಣಿ ನಮೋ ನಮೋ | ಅಜನ
ರಾಣಿ ಪಂಕಜಪಾಣಿ || ಪಲ್ಲ ||
ಭಳಿರೆ ಭಳಿರೆ ಎಂಬೆ ಭಕ್ತಜನ ಸುಖದಾಂಬೆ
ಸುಳಿದಾಡು ಶುಭನಿತಂಬೆ ಅಂಬೆ || ೧ ||
ಅಮ್ಮ-ಹೊಳೆಹೊಳೆವ ಮುಖಮುಕುರ ಬಿಂಬೆ
ಇಳೆಯೊಳಗೆ ಸರಿಗಾಣೆ ಶಾರದಾಂಬೆ ಪುತ್ಥಳಿಯ ಬೊಂಬೆ || ೨ ||
ಶರಣು ಶರಣೆಲೆ ದೇವಿ ಸ್ಮರಣೆಮಾತ್ರದಿ ಕಾಯ್ವಿ
ಚರಣದಂದಿಗೆ ಠೀವಿ ಮೆರೆವ ವಾಗ್ದೇವಿ || ೩ ||

ನಲಿನಲಿವಾಭರಣಗಳ ಧರಿಸಿ ನಟಿಸುವಿ ದೇವಿ
ಇಳೆಯೊಳಗೆ ಹರಿಣಾಕ್ಷಿ ಸಲಹು ಕಾಮಾಕ್ಷಿ ॥ ೪ ॥
ಜಯಜಯತು ಜಗನ್ಮಾತೆ ಜಗದೊಳಗೆ ಪ್ರಖ್ಯಾತೆ
ದಯಮಾಡು ಧವಳಗೀತೆ, ಮಾತೆ ॥ ೫ ॥
ನಿನ್ನಿಂದ ವಿದ್ಯೆ ಬುದ್ಧಿ ಹರಿಯೊಲುಮೆಯುಮ್ಮ
ನಿನ್ನ ನಂಬಿದೆ ತಾಯೆ ನೀ ಬಂದು ಕಾಯೆ ॥ ೬ ॥
ಸತತ ಶ್ರೀ ಹ ಯ ವ ದ ನ ಪದಸೇವಕ ಪ್ರೀತೆ
ಕ್ಷಿತಿಯೊಳಗೆ ನಯದಿಂದ ಗೆಲಿಸೆನ್ನ ಮಾತೆ-ವಿಧಿಜಾತೆ ॥ ೭ ॥

## ೩. ಸರಸ್ವತಿಯ ಸ್ತುತಿ

ಭಾಮಿನಿ ಷಟ್ಪದಿ

ಚತುರ ವದನನ ರಾಣಿ ಅತಿರೋ । ಹಿತ ವಿಮಲ ವಿಜ್ಞಾನಿ ನಿಗಮ ಪ್ರ
ತತಿಗಳಿಗಭಿಮಾನಿ ವೀಣಾಪಾಣಿ ಬ್ರಹ್ಮಾಣಿ ।
ನತಿಸಿ ಬೇಡುವೆ ಜನನಿ ಲಕುಮೀ । ಪತಿಯ ಗುಣಗಳ ತುತಿಪುದಕೆ ಸ
ನ್ಮತಿಯ ಪಾಲಿಸಿ ನೆಲೆಸು ನೀ ಮದ್ವದನ ಸದನದಲಿ ॥

( ಹರಿಕಥಾಮೃತಸಾರದಿಂದ )

## ೪. ಗುರುಮಧ್ವರಾಯರ ಸ್ತುತಿ

ಪಂತುರಾವಳಿ ರಾಗ ಆದಿತಾಳ

ಮಧ್ವಮುನಿಯೆ ನಮ್ಮ ಗುರು ಮಧ್ವಮುನಿಯೆ ॥ ಪಲ್ಲ ॥
ಮಧ್ವಮುನಿ ನಿಮ್ಮನೆಲ್ಲ ಉದ್ಧರಿಸುವ ಕಾಣಿರೋ ॥ ಅನುಪಲ್ಲ ॥
ಹಿಂದೆ ಹನುಮಂತನಾಗಿ ಬಂದು ರಾಮರ ಪಾದಾರ
ವಿಂದವ ಸೇವಿಸುತ ಆನಂದದಿಂದ ಶೋಭಿಸಿದ ॥ ೧ ॥
ಏಣಾಂಕ ವಂಶಾಬ್ಧಿ ಸೋಮ ಕ್ಷೋಣಿಪಾಲಕರ ಶಿರೋ
ಮಾಣಿಕ್ಯನಾಗಿ ಹರಿಗೆ ಪ್ರಾಣನೆಂದೆಣಿಸಿದ ॥ ೨ ॥
ಕಟ್ಟಕಡೆಯಲಿ ಯೋಗಿ ಧಿಟ್ಟನಾಗಿ ಪು ರಂ ದ ರ
ವಿ ಠ್ಠ ಲ ವೇದವ್ಯಾಸರ ಪೆಟ್ಟಿಗೆ ಮುಂದೊಪ್ಪುತ್ತಿಹ ॥ ೩ ॥

## ೫. ಪುರಂದರದಾಸರ ಸ್ತುತಿ

ನಾದನಾಮಕ್ರಿಯೆ ರಾಗ ಆಟತಾಳ

ದಾಸರಾಯಾ ಪುರಂದರ ದಾಸರಾಯಾ । ಪ್ರತಿ
ವಾಸರದಲಿ ಶ್ರೀನಿವಾಸನ್ನ ತೋರೊ ದಯಾಸಾಂದ್ರಾ ॥ ಪಲ್ಲ ॥
ವರದನಾಮಕ ಭೂಮಿಸುರನ ಮಡದಿಯು । ಬ-
ಸುರಲಿ ಜನಿಸಿಬಂದು ಮೆರೆದೆ ಧಾರುಣಿಯೊಳು ॥ ೧ ॥
ಕುಲಿಶಧರಾಮಯು ಪೊಳಲೊಳು ಮಡದಿ । ಮ-
ಕ್ಕಳ ಕೂಡಿ ಸುಖದಿಂದ ಕೆಲವು ಕಾಲದಲಿದ್ದ್ಯೋ ॥ ೨ ॥
ಮನೆ-ಧನ-ಧಾನ್ಯ ವಸ್ತುಗಳನೆಲ್ಲ
ತೃಣಕೆ ಬಗೆದು ಕೃಷ್ಣಾರ್ಪಣವೆಂದೆ ಬುಧರಿಗೆ ॥ ೩ ॥
ವ್ಯಾಸರಾಯರಲಿ ಭಾಸುರ ಮಂತ್ರೋಪ-
ದೇಶವ ಕೊಂಡು ರಮೇಶನ ಒಲಿಸಿದ್ಯೋ ॥ ೪ ॥
ಪ್ರಾಕೃತಭಾಷೆಲಿ ನೀ ಕೃತಿ ಪೇಳಿ । ಅ-
ಪ್ರಾಕೃತ ಹರಿಯಿಂದ ಸ್ವೀಕೃತ ನೀನಾದ್ಯೋ ॥ ೫ ॥
ತೀರ್ಥಕ್ಷೇತ್ರಗಳ ಮೂರ್ತಿಮಹಿಮೆಗಳ
ಕೀರ್ತಿಸಿ ಜಗದಿ ಕೃತಾರ್ಥನೆಂದೆನಿಸಿದೆ ॥ ೬ ॥
ಪಾತಕವನನಿಧಿ ಪೋತನೆನಿಪ ಜಗ
ನ್ನಾಥ ವಿಠಲನ ಸಂಪ್ರೀತಿಯಿಂದೊಲಿಸಿದ್ಯೋ ॥ ೭ ॥

## ೬. ಹರಿಕಥೆ-ಹರಿನಾಮಮಹಿಮೆ

ನಾಟಿ ರಾಗ ತ್ರಿಪುಟ ತಾಳ

ಶ್ರವಣಮನಕಾನಂದವೀವುದು । ಭವಜನಿತ ದುಃಖಗಳ ಕಳೆವುದು
ವಿವಿಧಭೋಗಗಳಿಹಪರಂಗಳಲಿತ್ತು ಸಲಹುವದು ॥ ಭುವನಪಾವನ
ನೆನಿಪ ಲಕ್ಷ್ಮೀ । ಧವನ ಮಂಗಳ ಕಥೆಯು ಪರಮೋ । ತ್ಸವದಿ
ಕಿವಿಗೊಟ್ಟಾಲಿಪುದು ಭೂಸುರರು ದಿನದಿನದಿ ॥ ೧ ॥
ಮಲಗಿ ಪರಮಾದರದಿ ಪಾಡಲು । ಕುಳಿತು ಕೇಳುವ, ಕುಳಿತು
ಪಾಡಲು । ನಿಲುವ, ನಿಂತರೆ ನಲಿವ, ನಲಿದರೆ ಒಲಿವೆ ನಿಮಗೆಂಬ ॥

ಸುಲಭನೋ ಹರಿ ತನ್ನವರನರೆ | ಗಳಿಗೆ ಬಿಟ್ಟಗಲನೊ ರಮಾಧವ |
ನೊಲಿಸಲರಿಯದೆ ಪಾಮರರು ಬಳಲುವರು ಭವದೊಳಗೆ || ೨ ||
ಮಕ್ಕಳಾಡಿಸುವಾಗ ಮಡದಿಯೊ | ಳಕ್ಕರದಿ ನಲಿವಾಗ ಹಯಪ |
ಲ್ಲಕ್ಕಿ ಗಜ ಮೊದಲಾದ ವಾಹನವೇರಿ ಮೆರೆವಾಗ || ಬಿಕ್ಕುವಾಗಾ
ಕಳಿಸುತಲಿ ದೇ | ವಕ್ಕಿತನಯನ ಸ್ಮರಿಸುತಿಹ ನರ | ಸಿಕ್ಕನೆಮ-
ದೂತರಿಗೆ ಆವಾವಲ್ಲಿ ನೋಡಿದರು || ೩ ||

(ಹರಿಕಥಾಮೃತಸಾರದಿಂದ)

## ೭. ಹರಿನಾಮಮಹಿಮೆ

ನಾಟ ರಾಗ

ಎಲ್ಲಿ ಹರಿಕಥಾಪ್ರಸಂಗವೋ
ಅಲ್ಲಿ ಗಂಗಾ-ಯಮುನೆ-ಗೋದಾ-ಸರಸ್ವತಿ-ಸಿಂಧು ||
ಎಲ್ಲ ತೀರ್ಥಗಳು ಬಂದು ಎಣೆಯಾಗಿ | ನಿಲ್ಲುವವು
ವಲ್ಲಭ ಶ್ರೀ ಪುರಂದರವಿಠಲ ಮೆಚ್ಚುವನು ||
ಜಯಜಯಾ ಹರಿಯೆಂಬುವದೇ ಸುದಿನವು
ಜಯಹರೀ ಹರಿಯೆಂಬುವದೇ ತಾರಾಬಲವು
ಜಯಹರೀ ಎಂಬುದೇ ಚಂದ್ರಬಲವು
ಜಯ ಹರಿಯೆಂಬುವದೇ ವಿದ್ಯಾಬಲವು
ಜಯ ಹರಿಯೆಂಬುವದೇ ದೈವಬಲವು
ಜಯ ಹರಿ ಪುರಂದರವಿಠಲನ ಬಲವಯ್ಯ ಸುಜನರಿಗೆ ||

## ೮. ಹರಿಭಜನೆಯ ಮಹಿಮೆ

ಕಲ್ಯಾಣಿರಾಗ ಆದಿತಾಳ

ಹರಿಯ ಭಜನೆ ಮಾಡೊ ನಿರಂತರ || ಪಲ್ಲ ||
ಪರಗತಿಗಿದು ನಿರ್ಧಾರ ನೋಡೊ || ಅನುಪಲ್ಲ ||

ಮೊದಲೆ ತೋರುತಿದೆ ಮಧುರ ವಿಷಯಸುಖ
ಕಡೆಯಲಿ ದುಃಖ ಅನೇಕ || ೧ ||
ವೇದಶಾಸ್ತ್ರಗಳನೋದಿದರೇನು ಸಾಧನಕಿದು ನಿರ್ಧಾರಾ || ೨ ||

ಸಾರವೊ ಬಹು ಸಂಸಾರವಿಮೋಚಕ
ಸೇರೊ ಶ್ರೀ ಹ ಯ ವ ದ ನ ನ್ನ || ೩ ||

## ೯. ಹರಿಸ್ಮರಣಮಹಿಮೆ

ಸುಳಾದಿ ಧ್ರುವತಾಳ

ಹರಿಪದವ ನೆನೆವಂಗೆ ನರಕದ ಭಯವಿಲ್ಲ |
ಹರಿಪದವ ನೆನೆವಂಗೆ ಮಾಯೆಯ ಭಯವಿಲ್ಲ |
ಹರಿಪದವ ನೆನೆವಂಗೆ ವಿಷದ ಭಯವಿಲ್ಲ |
ಹರಿಪದವ ನೆನೆವಂಗೆ ಅರಿಗಳ ಭಯವಿಲ್ಲ |
ಹರಿಪದವ ನೆನೆವಂಗೆ ಭವದ ಭಯವಿಲ್ಲ |
ಹರಿಪದವ ನೆನೆವಂಗೆ ಜನನದ ಭಯವಿಲ್ಲ |
ಹರಿಪದವ ನೆನೆವಂಗೆ ಮರಣದ ಭಯವಿಲ್ಲ |
ಬರಿಯ ಮಾತೇ ಅಲ್ಲ ಅಕುತೋಭಯನೆಂದು |
ವರದ ಹ ಯ ವ ದ ನ ನ ಪದಪದುಮವ ನಂಬು ||

## ೧೦. ಹರಿನಾಮಸ್ಮರಣ ಮಹಿಮೆ

ನಾದನಾಮಕ್ರಿಯೆ ರಾಗ ಆದಿತಾಳ

ಪಾವನ ಮಾಡುವುದು ನಾಮಾಮೃತರಸ
ಪಾವನ ಮಾಡುವುದು || ಪಲ್ಲ ||
ಪಾವನ ಮಾಳ್ಪುದು ನಾಮಸ್ಮರಣೆಯು
ಭೂವಲಯದೊಳು ಈವುದಿಷ್ಟಾರ್ಥವ || ಅನುಪಲ್ಲ ||
ಶ್ರೀನಿವಾಸನ ನಾಮ ಸುಧಾರಸ
ಏನು ರುಚಿಯೊ ಕಾಣೆ ಜೇನುತುಪ್ಪದಂತೆ || ೧ ||
ಸಕ್ಕರೆ ಬೆರಸಿದ ಚೊಕ್ಕ ಪಾನಕದಂತೆ
ಮುಕ್ಕು ಮಾಣಿಸುತಿದೆ ರಕ್ಕಸಾರಿಯ ಧ್ಯಾನ || ೨ ||
ಕದಳಿ ಖರ್ಜೂರ ದ್ರಾಕ್ಷಿ ಇದಕೂ ಇಮ್ಮಿಗಿಲಾಗಿ
ಮುದಕೊಡುವುದು ಜಿಹ್ವೆಗೊದಗಿದ ತಕ್ಷಣ || ೩ ||

ಕಾಸಿದ ಕೆನೆ ಪಾಲ ದೂಷಿಸುವಂತಿದೆ
ಏಸು ರುಚಿಯೊ ಹರಿದಾಸರೆಲ್ಲರಿಗೆ ‖ ೪ ‖
ಹ ಯ ವ ದ ನ ನ ನಿರ್ಭಯದಿಂ ಭಜಿಸಲು
ದಯಮಾಡುವ ಸಾಯುಜ್ಯ ಪದವನಿತ್ತು ‖ ೫ ‖

## ೧೧. ಫಲಶ್ರುತಿ

ಭಾಮಿನಿ ಷಟ್ಪದಿ

ಶ್ರವಣ ಮನಕಾನಂದವೀವುದು
ಭವಜನಿತ ದುಃಖಗಳ ಕಳೆವುದು
ವಿವಿಧ ಭೋಗಗಳಿಹಪರಂಗಳಲಿತ್ತು ಸಲಹುವದು
ಭುವನಪಾವನನೆನಿಪ ಲಕುಮೀ
ಧವನ ಮಂಗಳ ಕಥೆಯು ಪರಮೋ
ತ್ಸವದಿ ಕಿವಿಗೊಟ್ಟಾಲಿಪುದು ಭೂಜನರು ದಿನದಿನದಿ ‖

(ಹರಿಕಥಾಮೃತಸಾರದಿಂದ)

# ೨. ಗುರುಮಹಿಮೆ

ಎಲ್ಲ ಅನುಭಾವಮಾರ್ಗಗಳಲ್ಲಿಯೂ ಅನುಭವಿ ಗುರುವಿಗೆ ಅತ್ಯಂತ ಮಹತ್ವದ ಸ್ಥಾನವು ಕೊಡಲ್ಪಟ್ಟಿದೆ. ಹಲವು ಪಂಥಗಳಲ್ಲಿಯಂತೂ ಗುರುವೇ ಪರಮಾತ್ಮ ಅಥವಾ ಪರಮಾತ್ಮನಿಗಿಂತ ಗುರುವೇ ಶ್ರೇಷ್ಠ ಎಂದು ಹೇಳುವ ಹಾಗೂ ಅದರಂತೆ ನಡಕೊಳ್ಳುವ ವಾಡಿಕೆಯುಂಟು. ದಾಸಕೂಟದವರೂ ಗುರುಮಹಾತ್ಮ್ಯವನ್ನು ಅಲ್ಲಲ್ಲಿ ಹೊಗಳಿರುವರು. ಪ್ರತ್ಯಕ್ಷ ಅನುಭವವನ್ನು ಪಡೆದ ಸಾಕ್ಷಾತ್ಕಾರಿಯಾದ ಗುರುವೇ ಸಾಧಕನಿಗೆ ಯೋಗ್ಯ ಮಾರ್ಗದರ್ಶಕನಾಗಬಲ್ಲನು. ಆದುದರಿಂದಲೇ ಅವನಿಗೆ ಇಷ್ಟೊಂದು ಮಹತ್ವವಿರುವದು.

ಗುರುವು ಯೋಗ್ಯನಿರಬೇಕು, ಅಂದರೆ ಸಾಕ್ಷಾತ್ಕಾರಿಯು ಸದ್ಗುಣಿಯೂ ಇರಬೇಕು ಎಂದು ಬೇರೆ ಹೇಳಬೇಕಾಗಿಲ್ಲ. ಇಂಥ ಗುರುವಿನ ಅನುಗ್ರಹ ಉಪದೇಶಗಳಿಂದಲೆ ಸಾಧಕನು ತನ್ನ ಹಾದಿಯನ್ನು ನಡೆಯಬಲ್ಲನು. ಗುರುಗಳಿಂದ ಪ್ರತ್ಯಕ್ಷ ದೀಕ್ಷೆ ಹೊಂದಿ ತಮ್ಮ ಸಾಧನಮಾರ್ಗವನ್ನು ನಡೆಯಲಾರಂಭಿಸಿದ ಉದಾಹರಣಗಳೇ ದಾಸಕೂಟದಲ್ಲಿ ಬಹಳ. ಒಮ್ಮೊಮ್ಮೆ ಸಾಧಕನಿಗೆ ಕನಸಿನಲ್ಲಿ ಇಲ್ಲವೆ ಧ್ಯಾನಸ್ಥನಾದಾಗ ದೀಕ್ಷೆ ದೊರೆತ ಉದಾಹರಣೆಗಳೂ ಇವೆ. ಆದರೆ ದೀಕ್ಷೆ ಪಡೆಯದೆ ಇದ್ದ ದಾಸರು ಯಾರೂ ಇಲ್ಲ ಎಂದು ಹೇಳಬಹುದು.

ಭಕ್ತಿಮಾರ್ಗದಲ್ಲಿ ಅನುಗ್ರಹ— ಗುರುವಿನ ಅನುಗ್ರಹ ಹಾಗೂ ಪರಮಾತ್ಮಾನುಗ್ರಹ— ಇವುಗಳಿಗೆ ಒಂದು ವಿಶೇಷ ಮಹತ್ವದ ಸ್ಥಾನವಿದೆ. ಇಂತಿಷ್ಟು ಸಾಧನಮಾಡಿದರೆ ಸಿದ್ಧಿಯು ಕೈಗೂಡೇ ತೀರುವದು ಎಂದು ಭಕ್ತರು ಎಂದೂ ಹೇಳುವುದಿಲ್ಲ. ಸಾಧನವನ್ನು ಮಾಡುತ್ತ ಹೋಗಬೇಕು, ಗುರು ಅನುಗ್ರಹ ಹಾಗೂ ಪರಮಾತ್ಮಾನುಗ್ರಹವಾದಾಗ ಸಿದ್ಧಿಯು ಕೈಸೇರುವುದೆಂದು ಭಕ್ತರು ಹೇಳುವರು. ಆದುದರಿಂದ ಗುರು ಅನುಗ್ರಹ ವಿಲ್ಲದೆ ಯಾವ ಸಿದ್ಧಿಯೂ ಕೈಗೂಡದೆಂದೇ ದಾಸರು ಹಾಡಿರುವರು.



೨-೧೪೮೧

'ಗುರು ಉಪದೇಶವೆಂಬುದೆ ಮಹಾದುರ್ಲಭ, ಪರಮ ಮಂಗಳಕರವೊ, ಕರೆಕರೆ ಸಂಸಾರಶರಧಿಯ ದಾಟಲು ಹರಿಗೋಲು ಸ್ಥಾನೀಯವೊ' ಎಂದು ಗೋಪಾಲದಾಸರು ಗುರುಮಹಿಮೆಯನ್ನು ಹೊಗಳಿರುವರು.

ದೇವರ ದಾರಿಯನ್ನು ತೋರು ಎಂದು ಗುರುಗಳನ್ನು ಬೇಡಿಕೊಂಬುವಾಗ ಗೋಪಾಲದಾಸರು ತಮ್ಮ ಗುರುಗಳನ್ನು ಕುರಿತು, 'ವಾದಿರಾಜನೆ ನಿನ್ನ ಪಾದಕ್ಕೆರಗಿ ನಾ ಮೋದದಿ ಬೇಡುವೆ ಮಾಧವನ ತೋರೋ' ಎಂದು ಹಂಬಲಿಸಿದ್ದಾರೆ. ಗುರುಗಳನ್ನು ನೆನೆದರೆ ಯಾವ ಫಲವು ದೊರೆಯುವದು ಎಂಬುದನ್ನು ವರ್ಣಿಸುವಾಗ, 'ನಿನ್ನ ನೆನೆಯೆ ಧನ್ಯ ನಿನ್ನ ನೆನೆಯೆ ಮಾನ್ಯ। ನಿನ್ನ ಕೊಂಡಾಡಲು ಪಾಪಶೂನ್ಯ। ನಿನ್ನವನೆನೆ ವೇಣುಗೋಪಾಲ ವಿಠ್ಠಲ। ಮನ್ನಿಸಿ ಸದ್ಗತಿ ಪಾಲಿಪ ಮುದದಿ।' ಎಂದು ಗೋಪಾಲದಾಸರು ಗುರು ಮಹಾತ್ಮ್ಯವನ್ನು ವರ್ಣಿಸಿರುವರು. 'ನೀನಿಲ್ಲದುಪಾಯ ಮತ್ತಿಲ್ಲ ನೀನೇ ಕಾಯಬೇಕು,' ಎಂದು ಒಳ್ಳೆ ಆರ್ತಭಾವದಿಂದ ದಾಸರು ಗುರುಗಳನ್ನು ಮೊರೆಹೊಕ್ಕುದನ್ನು ನೋಡಿದರೆ ಅವರು ಗುರುಗಳಿಗೆ ಎಷ್ಟು ಮಹತ್ವ ಕೊಡುತ್ತಿದ್ದರು ಎಂಬುದು ವ್ಯಕ್ತವಾಗುವದು.

ನಿಜಾನಂದ, ಆತ್ಮಾನಂದ, ಆತ್ಮಾನಂದ ಸ್ಥಿತಿ ಇದೇ ಭಕ್ತರ ಧ್ಯೇಯವಿರುವದು. ಅದು ಅನುಭವದಿಂದಲೆ ತಿಳಿಯತಕ್ಕವಸ್ತು, ಕೇವಲ ಶಬ್ದಗಳಿಂದ ವರ್ಣಿಸತಕ್ಕುದಲ್ಲ. ಆದುದರಿಂದ ಪ್ರತ್ಯಕ್ಷ ಅನುಭವ ಪಡೆದ ಗುರುವಿನ ಗುರ್ತು, ಉಪದೇಶ, ಸಂಗತಿ, ಅನುಗ್ರಹ ಇವುಗಳನ್ನು ದಾಸರು ಬಹಳ ವರ್ಣಿಸಿರುವರು ಹಾಗೂ ಇವುಗಳ ಹೊರತು ಇನ್ನೊಂದು ಮಾರ್ಗವಿಲ್ಲ ಎಂದು ಅನುಭವಪೂರ್ವಕವಾಗಿ ಹೇಳಿರುವರು.

## ೧೨. ಗುರುವೇ ಮುಕ್ತಿಯ ಸಾಧನ

ನಾದನಾಮಕ್ರಿಯೆ ರಾಗ ಆಟತಾಳ

**ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ ‖ ಪಲ್ಲ ‖**
**ಪರಿಪರಿ ಶಾಸ್ತ್ರವ ನೋಡಿದರೇನು ವ್ಯರ್ಥವಾಯಿತು ಯುಕುತಿ ‖ ಅನುಪಲ್ಲ ‖**
**ಆರುಶಾಸ್ತ್ರವನೋದಿದರೇನು ಮೂ । ರಾರು ಪುರಾಣ ಮುಗಿಸಿದರೇನು ।**
**ಸಾರಿ ಸಜ್ಜನರ ಸಂಗವ ಮಾಡದೆ। ಧೀರನೆಂದು ತಾ ತಿರುಗಿದರೇನು ‖ ೧ ‖**

ಕೊರಲೊಳು ಮಾಲೆಯ ಧರಿಸಿದರೇನು
ಬೆರಳೊಳು ಜಪಮಣಿ ತಿರುವಿದರೇನು ।
ಮರಳಿಮರಳಿ ತಾ ಹೊರಳಿ ಬೂದಿಯೊಳು
ಮರುಳನಂದದಿ ತಿರುಗಿದರೇನು ॥ ೨ ॥
ಧಾರುಣಿಯೆಲ್ಲ ಆಳಿದರೇನು ಶ
ರೀರ ಸುಖವನು ಬಿಡಿಸಿದರೇನು ।
ಮಾರಜನಕ ಸಿರಿ ಪುರಂದರವಿಠಲನ
ಸಾರ ಮಹಿಮೆಗಳ ತೋರಬಲ್ಲ ಸದ್ಗುರುವಿನ ॥ ೩ ॥

## ೧೩. ಗುರುಗಳ ಉಪದೇಶ ಅವಶ್ಯ

ಸುಳಾದಿ

ಗುರು ಉಪದೇಶವಿಲ್ಲದ ಜ್ಞಾನ
ಗುರು ಉಪದೇಶವಿಲ್ಲದ ಯೋಗ
ಗುರು ಉಪದೇಶವಿಲ್ಲದ ಕ್ರಿಯೆಗಳು
ಉರಗನ ಉಪವಾಸದಂತೆ ಕಾಣಿರೋ
ಗುರು ವ್ಯಾಸರಾಯರೆ ಕರುಣದಿಂದೆನಗೆ
ವರಮಹಾಮಂತ್ರಂಗಳ ಉಪದೇಶಿಸಿದರು
ಪುರಂದರವಿಠಲನೆ ಪರನೆಂದರುಹಿ
ದುರಿತ ಭಯವನೆಲ್ಲ ಪರಿಹರಿಸಿದರಾಗಿ

ಜೊತೆ

ಗುರು ವ್ಯಾಸರಾಯರ ಚರಣವೆನಗೆ ಗತಿ
ಪುರಂದರವಿಠಲನ ಅರಿತೆ ಇವರಿಂದ

## ೧೪. ಗುರುಕಾರುಣ್ಯದಿಂದಲೆ ಗತಿ

ಉಗಾಭೋಗ

ಗುರುಕರುಣವಾಹೋದು ಪರಮ ದುರ್ಲಭವಯ್ಯ
ಪರಿಪರಿ ವ್ರತಗಳಾಚರಿಸಿ ಫಲವೇನು
ಗುರು ಕರುಣವೊಂದಿಲ್ಲದೆ ಗತಿಗೆ ಬೇರುಂಟೆ
ಶರೀರದ ಪುತ್ರ ಮಿತ್ರ ಕಳತ್ರ ಬಾಂಧವರು
ನೆರೆ ಸಲಿಸುವರೆ ಸದ್ಗತಿಗೆ ಸಾಧನವ

ನಿರುತದಿ ಗುರುಪಾದ ನಿಜವಾಗಿ ಮನದಲ್ಲಿ
ಅರಿತು ಭಜಿಸಲು ಅಖಿಳ ಸಂಪದವಿತ್ತು
ಪರಿಪಾಲಿಸುವ ನಮ್ಮ ಪು ರಂ ದ ರ ವಿ ಠ ಲ

## ೧೫. ಗುರುಕರುಣದಿಂದ ಏನು ಸಾಧಿಸುವದು ?

ಕಾಂಬೋಧಿ ರಾಗ ಝಂಪೆತಾಳ

ಸಾಧನಕೆ ಬಗೆಗಾಣೆನೆನ್ನಬಹುದೆ || ಪಲ್ಲ ||
ಸಾದರದಿ ಗುರುಕರುಣ ತಾ ಪಡೆದ ಬಳಿಕ || ಅನುಪಲ್ಲ ||
ಕಂಡಕಂಡದ್ದೆಲ್ಲ ಕಮಲನಾಭನ ಮೂರ್ತಿ
ಉಂಡು ಉಟ್ಟದ್ದೆಲ್ಲ ವಿಷ್ಣು ಪೂಜೆ
ತಂಡತಂಡದ ವಾರ್ತೆ ವಾರಿಜಾಕ್ಷನ ಕೀರ್ತಿ
ಹಿಂಡುಮಾತುಗಳೆಲ್ಲ ಹರಿಯ ನಾಮ || ೧ ||
ವಾಗತ್ಯಪಡುವುದೆ ವಿಧಿನಿಷೇಧಾಚರಣೆ
ರೋಗಾನುಭವವೆಲ್ಲ ಉಗ್ರತಪವು
ಆಗದವರಾಡಿಕೊಂಬುವುದೆ ಆಶೀರ್ವಾದ
ಬೀಗರುಪಚಾರವೇ ಭೂತದಯವು || ೨ ||
ಮೈಮರೆತು ಮಲಗುವುದೆ ಧರಣಿಗೆ ನಮಸ್ಕಾರ
ಕೈಮೀರಿ ಹೋದದ್ದೆ ಕೃಷ್ಣಾರ್ಪಣ
ಮೈಮನೋವೃತ್ತಿಗಳೆ ವಿಷಯದಲಿ ವೈರಾಗ್ಯ
ಹೊಯ್ಮಾಲಿತನವೆಲ್ಲ ಹರಿಯ ವಿಹಾರ || ೩ ||
ಹಿಡಿದ ಹಟ ಪೂರೈಸಲದು ಹರಿಯ ಸಂಕಲ್ಪ
ನಡೆದಾಡುವೋದೆಲ್ಲ ತೀರ್ಥಯಾತ್ರೆ
ಬಡತನವು ಬರಲದೇ ಭಗವದ್ಭಜನೆ ಯೋಗ
ಸಡಗರದಲಿಪ್ಪುದೇ ಶ್ರೀಶನಾಜ್ಞೆ || ೪ ||
ಬುದ್ಧಿ ಸಾಲದೆ ಸುಮ್ಮನಿರುವುದೇ ಸಮ್ಮತವು
ಯದೃಚ್ಛಾಲಾಭವೇ ಸುಖವು ಎನಲು
ಮಧ್ವಾಂತರ್ಗತ ಶ್ರೀ ವಿ ಜ ಯ ವಿ ಠ್ಠ ಲ ರೇ ಯ
ಹೃದ್ಗತಾರ್ಥವ ತಿಳಿದು ಒಪ್ಪಿಸಿಕೊಳನೆ || ೫ ||

---

# ೩. ಭಕ್ತಿ ಹಾಗೂ ಭಕ್ತಮಹಿಮೆ



ದಾಸರೆಲ್ಲರೂ ಅನುಭಾವಮಾರ್ಗದವರು ಅಂದರೆ ಸಾಕ್ಷಾತ್ಕಾರವಾದಿಗಳು- ಬುದ್ಧಿವಾದಿಗಳಲ್ಲ. ಆ ಮಾರ್ಗದಲ್ಲಿಯೂ ಅವರು ಮುಖ್ಯವಾಗಿ 'ಭಕ್ತಿಶ್ಚ ತತ್ಸಾಧನಂ' ಅಂದರೆ ಭಕ್ತಿಯೇ ಮುಕ್ತಿಯ ಸಾಧನವೆಂದು ಹೊರಟವರು. ಅನುಭಾವಿಗಳಲ್ಲಿ ಜ್ಞಾನಿಗಳೂ ಇರಬಲ್ಲರು, ಕರ್ಮಯೋಗಿಗಳೂ ಇರಬಹುದು, ಧ್ಯಾನಮಾರ್ಗಿಗಳೂ ಇರುವದುಂಟು. ಆದರೆ ಇವರು ಭಕ್ತರು, ಪರಮಾತ್ಮಪ್ರೇಮದಿಂದ ಓತಪ್ರೋತರಾಗಿ, ಅವನನ್ನು ಹಾಡಿ ಹರಸಿ ಅವನಲ್ಲಿ ಲೀನರಾದವರು. ಆದುದರಿಂದ ಅವರು ಸ್ವಾಭಾವಿಕವಾಗಿಯೇ ಭಕ್ತಿಯನ್ನು ಹಾಗೂ ಭಕ್ತರನ್ನು ಕೊಂಡಾಡಿರುವರು.

ನಿರ್ಹೇತುಕವಾದ ಪರಮಾತ್ಮಪ್ರೀತಿಯೇ ಭಕ್ತಿಯೆನಿಸುವದು. ಅದು ಒಮ್ಮೆ ನವವಿಧ, ಒಮ್ಮೆ ಪಂಚವಿಧ, ಒಮ್ಮೆ ದ್ವಿವಿಧ ಹೀಗೆ ಬೇರೆ ಬೇರೆ ರೀತಿಯಲ್ಲಿ ವರ್ಗೀಕರಿಸಲ್ಪಟ್ಟಿರುವದು. ಆದರೆ ಇಲ್ಲಿ ನಾವು ಭಕ್ತಿ ಎಂಬ ಭಾವವೊಂದನ್ನೆ ಅನ್ವಯಿಸಿ ಬರೆಯುತ್ತಿರುವೆವು. ಹಾಗೂ ಆ ಬಗ್ಗೆ ದಾಸರ ವಿಚಾರಗಳೇನಿರುವವೆಂಬದನ್ನು ಸಂಕ್ಷೇಪದಿಂದ ಹೇಳುತ್ತಿರುವೆವು.

ಸಾಧಕರು ಮುಕ್ತಿಯ ಬೆನ್ನುಬೀಳದೆ ಭಕ್ತಿಯೊಂದನ್ನನುಸರಿಸಿದರೆ ಮುಕ್ತಿಯು ತಾನೇ ಆಳವಡುವುದು ಎಂದು ದಾಸರು ಸಿದ್ಧಾಂತಮಾಡಿರುವರು. ಇಷ್ಟೇ ಅಲ್ಲ. ನಮಗೆ ಮುಕ್ತಿಯು ಬೇಡ, ಭಕ್ತಿಯೇ ಬೇಕು, ಭಕ್ತಿಯೇ ಸಾಕು ಎಂದು ಹಲವೆಡೆಗೆ ಹೇಳಿರುವರು. ಭಗವತ್ಪ್ರೇಮಾನಂದದಲ್ಲಿ ನಲಿದಾಡುತ್ತಿರುವುದು ಮುಕ್ತಿಗಿಂತ ಸುಖಕರವೆಂದು ಅವರ ಅಭಿಪ್ರಾಯವು. ಆದುದರಿಂದ ಭಕ್ತಿಯೇ ಮುಕ್ತಿಯ ಮುಖ್ಯ ಸಾಧನವೆಂದು ಅವರು ಸಾರಿರುವರು. ತಮ್ಮ ಭಕ್ತಿಸುಳಾದಿಯಲ್ಲಿ ವಿಜಯದಾಸರು 'ಭಕ್ತಿಯೆ ಪ್ರಧಾನವಾದ ಚಿಂತೆಯ ಮಾಡು, ಮುಕ್ತಿದಾಯಕ ದೇವ ವಿಜಯ ವಿಠಲ ಒಲಿವ' ಎಂದು ಹೇಳಿರುವರು.

'ಮುಕ್ತಿಯ ಬಯಸುವಗೆ' ಏನೇನು ಬೇಕು ಎಂದು ವಿವರಿಸುವಾಗ 'ಭಕ್ತಿಬೇಕು, ವಿರಕ್ತಿಬೇಕು, ಶಕ್ತಿಬೇಕು' ಎಂದು ಹೇಳಿರುವರು. ಜ್ಞಾನದಿಂದಲೇ ಮೋಕ್ಷ ಎಂಬ ಸಿದ್ಧಾಂತವು ಸತ್ಯವಿದ್ದರೂ ಭಕ್ತಿಮಾರ್ಗ ದಿಂದ ಸಾಗಿದವನಿಗೆ ಜ್ಞಾನವು ಪ್ರಾಪ್ತವಾಗೇ ತೀರುವುದು ಎಂದು ಹೇಳುವಾಗ 'ಘನ ಜ್ಞಾನ ಪುಟ್ಟುವುದು, ಅನಿಮಿಷೇಶನ ಪ್ರೀತಿ ದಿನದಿನಕೆ ವೆಗ್ಗಳವಾಗುವುದು' ಎಂದು ಪುರಂದರದಾಸರು ದಾಸಸುಳಾದಿಯಲ್ಲಿ ಆಶ್ವಾಸನವನ್ನು ಕೊಟ್ಟಿರುವರು. 'ಭಕುತಿಯಿಲ್ಲವೊ ಅದರ ಹೊರತು ಮುಕುತಿಯಿಲ್ಲವೊ' ಎಂದು ವಿಜಯದಾಸರು ಒತ್ತಿ ಹೇಳಿರುವರು.

ಭಕ್ತಿಮಾರ್ಗದ ಇನ್ನೊಂದು ವಿಶೇಷವನ್ನು ಹೇಳುವಾಗ ದಾಸರು ಭಕ್ತರ ಆನಂದಪರವಶತೆಯನ್ನು ವರ್ಣಿಸುವರು. ಪರಮಾತ್ಮ ಪ್ರೇಮೋದ್ರೇ ಕವೇ ಭಕ್ತಿ ಎನಿಸುವುದರಿಂದ ಆ ಭಾವವು ಅಂತಃಕರಣದಲ್ಲಿ ತುಂಬಿದಾಗ 'ತನುವುಬ್ಬಿ ರೋಮಾಂಚನಾನಂದ ಬಾಷ್ಪಗಳು' ಸೂಸುವವು. ಪುರಂದರ ದಾಸರ ಭಕ್ತಿಪರವಶತೆಯನ್ನು ವರ್ಣಿಸುವಾಗ 'ಎರಡು ಕಂಗಳ ಧಾರೆ ಸುರಿಯೆ ಪುಳಕೋತ್ಸವದಿ ಕೊರಳುಬ್ಬಿ ತೊದಲುನುಡಿ ವಿಸ್ಮರಣೆ ಹಾರೆ ಶ್ರೀಹರಿ ಹರೀ ಹರಿಯೆಂದು ಹರಿದಾಡುತಿರಲಾಗ ಸುರರು ಶಿರವನೆ ತೂಗಲು' ಎಂದು ವಿಜಯದಾಸರು ನುಡಿದಿರುವರು. ಅಂದಬಳಿಕ ಮುಂದೆ ಮುಕ್ತಿ ಬರಲಿ ಬಿಡಲಿ, ಭಕ್ತಿಮಾರ್ಗದಲ್ಲಿ ನಿತ್ಯ ಆನಂದೋತ್ಸವ ನಿತ್ಯ ಮಂಗಳಗಳೇ ಭಕ್ತನಿಗೆ ಪರಮಸಂತೋಷವನ್ನುಂಟುಮಾಡುವವು.

ಭಕ್ತಿಮಹಿಮೆಯನ್ನು ಹೊಗಳಿದಂತೆಯೇ ದಾಸರು ಭಕ್ತರ ಮಹಿಮಾತಿ ಶಯವನ್ನು ಅತ್ಯಂತವಾಗಿ ವರ್ಣಿಸಿರುವರು. ಮುಕುತಿಗಿಂತ ಭಕುತಿ ಶ್ರೇಷ್ಠ ಎಂದು ಹೇಳಿದಂತೆ ಹರಿಗಿಂತ ಹರಿದಾಸ ಶ್ರೇಷ್ಠ ಎಂದು ಹೇಳಲು ಅವರು ಹಿಂಜರಿದಿಲ್ಲ. ಭಕ್ತ ಎಂಬುದಕ್ಕೆ ಸಮಾನಾರ್ಥವಾಗಿ ಹರಿಶರಣ, ಹರಿದಾಸ, ದಾಸ, ಸಂತ, ಭಾಗವತ ಎಂಬ ಮುಂತಾದ ಶಬ್ದಗಳನ್ನು ಅವರು ಅಲ್ಲಲ್ಲಿ ಉಪಯೋಗಿಸಿರುವರು. ನನ್ನನ್ನು ಮುಕ್ತನನ್ನಾಗಿ ಮಾಡದೆ ಭಕ್ತನನ್ನಾಗಿಡು, ಅದರಲ್ಲಿಯೇ ನನಗೆ ಪರಮಸಂತೋಷ ಎಂದು ಅನೇಕ ದಾಸರು ಹೇಳಿರುವರು.

ನಿರ್ಹೇತುಕಪ್ರೇಮದಿಂದ ಪ್ರೇರಿತನಾಗಿ ತನ್ನ ಸರ್ವಸ್ವವನ್ನು ಪರಮಾತ್ಮ ನಿಗೆ ಅರ್ಪಣಮಾಡಿ ಕೇವಲ 'ದಾಸೋಹಂ' ಎಂಬ ವೃತ್ತಿಯಿಂದ ಆಚರಿಸು ವವನೆ ಪರಮ ಭಕ್ತನು. 'ಮನ ಮೊದಲಾದ ಸರ್ವೇಂದ್ರಿಯಂಗಳ ಅವನ

ಪಾದದಲ್ಲಿಟ್ಟು ಕೀರ್ತನೆಗೈಯೊ ಮನವೆ, ನಿನಗೆ ಮುಖ್ಯಗತಿಗೆ ಸಾಧನವೆಂದು ಸಾರಿದೆ' ಎಂದು ದಾಸದೀಕ್ಷೆಯನ್ನು ಪುರಂದರದಾಸರು ವರ್ಣಿಸಿರುವರು. ಇಂಥವರು ಮನೆಗೆ ಬಂದರೆ, ಇಂಥ 'ಹರಿಶರಣರ ಪಾದ ಸರಸಿಜಯುಗಳದ ಪರಮಪಾವನವಾದ ರಜವು' ಬಿದ್ದರೆ ಮನೆ ಪಾವನವಾಗುವದು. ಇಂಥ 'ದಾಸದಾಸರ ಮನೆಯ ದಾಸಿಯ ಮಗ ನಾನು' ಎಂದು ಹೇಳಿಕೊಳ್ಳುವುದರಲ್ಲಿ ಕನಕದಾಸರು ಒಳ್ಳೆ ಅಭಿಮಾನವನ್ನು ತಾಳಿರುವರು. ಇದೇ ಮಾತನ್ನು 'ನಿನ್ನ ಭಜಿಪ ಭಕ್ತರ ಮನೆಯ ಆಳಿನಾಳಿನ ದಾಸ ಅಡಿದಾಸ ನಾನಯ್ಯ' ಎಂದು ಅವರು ಉಸಿರಿರುವರು. ಸತ್ಸಂಗವನ್ನು, ದಾಸರ ಸಂಗವನ್ನು ದಾಸರು ಪರಿಪರಿಯಿಂದ ಪುನಃಪುನಃ ವರ್ಣಿಸಿರುವರು. 'ಹೇ ಮನುಜ, ಕೇಶವ ನೊಲುಮೆಯು ಆಗುವತನಕ ಹರಿದಾಸರೊಳಿರುತಿರು' ಎಂದು ಕನಕದಾಸರು ಸಾಧನವನ್ನು ಹೇಳಿರುವರು. 'ನಿನ್ನ ಮಲಗುಣ ಕೊಂಡಾಡಿ ಹಿಗ್ಗುವ ಭಾಗವತರೊಡನೆ ಆಡಿಸೆನ್ನನು ಜನುಮಜನುಮಗಳಲ್ಲಿ ಮರೆಯದಲೆ' ಎಂದು ಜಗನ್ನಾಥದಾಸರು ದೇವರನ್ನು ಬೇಡಿಕೊಂಡಿರುವರು. ಸಂತರ ವಚನಗಳನ್ನು ಮನ್ನಿಸಿ ನಡೆಯಿರಿ ಎಂದು ಹೇಳುವಾಗ ಗೋಪಾಲದಾಸರು 'ಸಂತರ ವಚನಕ್ಕೆ ಸಂಶಯ ತಿಳಿಯದೆ ನಿಶ್ಚಿಂತನಾಗುವುದು ನಗುತ ನೀನು' ಎಂದಿರುವರು.

ದಾಸರು ಇಷ್ಟಕ್ಕೆ ತಡೆಯದೆ ಭಕ್ತರು ನರರಲ್ಲ, ದೇವರು ಎಂದು ಉಸುರಿರುವರು. 'ಶೌರಿಯ ಶರಣರ ನರರೆನ್ನಬಹುದೇ' ಎಂದು ಪುರಂದರ ದಾಸರು ಪ್ರಶ್ನೆಮಾಡಿರುವರು. ಇದಕ್ಕೂ ಮುಂದೆಹೋಗಿ ದಾಸರು ದೇವರಿಗಿಂತ ಶ್ರೇಷ್ಠರು, ಬಲ್ಲಿದರು ಎಂದು ಹಲವರು ಬಣ್ಣಿಸಿರುವರು. 'ನೀನೇ ಭಕ್ತರಾಧೀನನಾದ ಮೇಲೆ ನಿನ್ನ ದಾಸರೇ ಬಲ್ಲಿದರು' ಎಂದು ಪುರಂದರ ದಾಸರು ಹಾಡಿರುವರು. ನಿನಗಿಂತ ನಿನ್ನ ದಾಸರು ಶ್ರೇಷ್ಠರೆಂದಬಳಿಕ ಅವರಿಗೇ ನಾನು ಅಂಜುವೆನು, 'ನಿನಗಿಂತ ಭಕುತಿ ನಿನ್ನವರಲ್ಲಿ ಕೊಡು ಎನಗೆ' ಎಂದು ವಿಜಯದಾಸರು ಕೇಳಿಕೊಂಡಿರುವರು.

ದುಃಖಸಾಗರದೊಳಗಿಂದ ಪಾರಾಗಿ ಮುಕ್ತನಾಗಲು ದಾಸನಾಗುವುದೇ ಉತ್ತಮಮಾರ್ಗವೆಂದು ಅಲ್ಲಲ್ಲಿ ದಾಸರು ಹೇಳಿರುವರು. 'ದಾಸನ್ನ ಮಾಡಿಕೊ ಎನ್ನ' ಎಂದು ಪುರಂದರದಾಸರು ಬೇಡಿಕೊಂಡಿರುವರು. 'ನಾನು ನಿನ್ನ ದಾಸನಾಗಿರುವುದರಿಂದ ನನ್ನನ್ನು ಕಾಯು' ಎಂದು ಕನಕದಾಸರು

ದೇವರಿಗೆ ಪೊರೆಯಿಟ್ಟಿರುವರು. 'ದಾಸನಾಗೋ ಭವಪಾಶನೀಗೋ' ಎಂದು ಅವರೇ ಇನ್ನೊಂದೆಡೆಗೆ ಹೇಳಿರುವರು. ದಾಸಮಾರ್ಗವು ಸುಲಭ, ಸರಳ, ಹಾಗೂ ನಿಶ್ಚಿತ ಎಂದು ಹರಿಶರಣರ ಹೇಳಿಕೆ. 'ಹರಿಯ ಪರಮಭಕ್ತಿಯಿಂದ ಭಜಿಪ ನರನು ಮುಕ್ತನಲ್ಲವೆ, ಭವದಿ ಮುಕ್ತನಲ್ಲವೆ,' ಎಂದು ಜಗನ್ನಾಥ ದಾಸರು ಪ್ರಶ್ನಿಸಿರುವರು.

ಪೂರ್ಣಸ್ಥಿತಿಗೆ ಮುಟ್ಟಿದ ಭಕ್ತನು ಹೇಗಿರುವನು ಎಂಬುದನ್ನು ಹಲವು ದಾಸರು ಬಣ್ಣಿಸಿರುವರು. ಆ ವರ್ಣನೆಗೂ ಸಿದ್ಧಪುರುಷರ ವರ್ಣನೆಗೂ ವ್ಯತ್ಯಾಸವಿಲ್ಲ ಎಂದು ಹೇಳಬಹುದು. ಪೂರ್ಣಾರ್ಪಣಮಾಡಿದ ಭಕ್ತಶ್ರೇಷ್ಠ ನಿಗೂ ಸಿದ್ಧನಿಗೂ ವ್ಯತ್ಯಾಸವಿರುವ ಬಗೆಯಾವುದು?

## ೧೬. ಮುಕುತಿಗಿಂತ ಭಕುತಿ ಸುಖವು

ಪೂರ್ವಕಲ್ಯಾಣಿ ರಾಗ ಅಟತಾಳ

ಭಕುತಿ ಸುಖವೊ ರಂಗ ಮುಕುತಿ ಸುಖವೊ || ಪಲ್ಲ ||
ಭಕುತಿ ಸುಖವೊ ಮುಕುತಿ ಸುಖವೊ
ಯುಕುತಿವಂತರೆಲ್ಲ ಹೇಳಿ || ಅನುಪಲ್ಲ ||
ಭಕುತಿ ಮಾಡಿದ ಪ್ರಲ್ಹಾದ | ಮುಕುತಿಯನ್ನು ಪಡೆದುಕೊಂಡ
ಮುಕುತಿಬೇಡಿದ ಧ್ರುವರಾಯ | ಯುಕುತಿಯಿಂದ ಹರಿಯಕಂಡ || ೧ ||
ಭಕುತಿಮಾಡಿದ ಅಜಾಮಿಳನು | ಅಂತ್ಯದಲ್ಲಿ ಹರಿಯಕಂಡ
ಮುಕುತಿ ಬೇಡಿದ ಕರಿರಾಜ | ದುರಿತಗಳನು ಕಳೆದುಕೊಂಡ || ೨ ||
ಭಕುತಿ ಮುಕುತಿದಾತ ನಮ್ಮ | ಲಕುಮಿಯರಸ ವಿಜಯ ವಿಠಲ
ಶಕುತನೆನುತ ತಿಳಿದು ನಿತ್ಯ | ಭಕುತಿಯಿಂದ ಭಜನೆಮಾಡಿರೊ || ೩ ||

## ೧೭. ಭಕುತಿಯಿಂದ ಮುಕುತಿ

ಧನ್ಯಾಸಿ ರಾಗ ಅಟತಾಳ

ಭಕುತಿಯ ಪಾಲಿಸು ಜೀಯಾ ಮುಂದೆ || ಪಲ್ಲ ||
ಮುಕುತಿಗೊಡವೆ ಯಾಕೆ ನೀನೊಲಿದ ಮೇಲೆ || ಅನುಪಲ್ಲ ||
ತನುವೆ ನಿನ್ನಾಧೀನವೆನಿಸು, ಇದು

ಅನುದಿನ ಕೊಡು ಏಕಪ್ರಕಾರ ಮನಸು
ಧನ ಒಡವೆಯು ಕಂಡ ಕನಸು, ಎಂದು
ಎನಗೆ ತೋರಲಿ ನಿತ್ಯ ನಿನ್ನಂಘ್ರಿ ನೆನಸು ॥ ೧ ॥
ತತ್ವದ ಮತದೊಳಗಿರಿಸು, ಪುಸಿ
ಉತ್ತರ ಮತವೆಂದು ಮಾರ್ಗವ ಮರೆಸು
ಉತ್ತಮರೊಳಗೆನ್ನನಿರಿಸು, ಭವ
ಒತ್ತುವ ನಿನ್ನ ನಾಮಾಮೃತ ಸುರಿಸು ॥ ೨ ॥
ಶ್ರವಣಮನನ ಧ್ಯಾನವೀಯೊ, ಎನ್ನ
ಅವಗುಣವೆಣಿಸದೆ ಕರುಣಾಳು ಕಾಯೊ
ಅವಸಾನದಲಿ ನೀನೆಗತಿಯೊ, ತ್ರೈ
ಭುವನೇಶ ವಿಜಯವಿಠ್ಠಲ ನೀ ದೊರೆಯೊ ॥ ೩ ॥

## ೧೮. ನಿಶ್ಚಲಭಕ್ತಿಯು ಮುಕ್ತಿಕೊಡುವದು

ಕಾಂಬೋಧಿ ರಾಗ ಝಂಪೆ ತಾಳ

ಯಾರೆತ್ತ ಪೋದರೇನು ಊರೆತ್ತ ಬಂದರೇನು ।
ಪೂರ್ವಪ್ರಾಪ್ತಿ ತನಗಲ್ಲದುಂಟೆ ಮನವೇ ॥ ಪಲ್ಲ ॥
ಹಗಲೆ ತಾರಕೆಗಳು ಹಾರಿ ಆಡಿದರೇನು ।
ಬೈಗು ಭಾಸ್ಕರ ಮೂಡಿ ಬೆಳಗಾದರೇನು ॥
ಹಗೆಯುವರ ಮನೆಯಲ್ಲಿ ಹಗರಣಾದರೆ ಏನು ।
ನಿಗಮಗೋಚರನಂಘ್ರಿ ನೆನೆ ಕಂಡ್ಯಾ ಮನವೇ ॥ ೧ ॥
ಬೆಂಡು ಮುಳುಗಿದರೇನು ಗುಂಡು ತೇಲಿದರೇನು ।
ಭಂಡ ನಾಲಿಗೆ ಎರಡು ತುಂಡಾದರೇನು ॥
ಉಂಡಮನೆಗೆರಡೆಣಿಸನುರಿದು ಬಿದ್ದರೆ ಏನು ।
ಪುಂಡರೀಕಾಕ್ಷನ್ನ ನೆನೆ ಕಂಡ್ಯಾ ಮನವೇ ॥ ೨ ॥
ವೆಚ್ಚಕಿಲ್ಲದ ಹಣವು ವ್ಯರ್ಥವಾದರೆ ಏನು ।
ಮುಚ್ಚರಿಸುವರೆಲ್ಲ ಮಡಿದರೇನು ॥
ಅಚ್ಯುತಾನಂತ ಶ್ರೀ ಪುರಂದರವಿಠ್ಠಲನ ।
ನಿಶ್ಚಲ ಭಕುತಿಯಿಂ ನೆನೆ ಕಂಡ್ಯಾ ಮನವೇ ॥ ೩ ॥



೩–೧೪೧೧

## ೧೯. ಹರಿಭಕ್ತಿಮಾಡುವಗೆ ಭಯವಿಲ್ಲ

ಸುಳಾದಿ ಮಠ್ಯತಾಳ

ಹರಿನಾಮ ಹರಿಪಾದ ತೀರಥವಿರಲು
ಹರಿದಿನ ಹರಿದಾಸರ ಪಾದರಜವಿರಲು
ದುರಿತದ ಭಯವ್ಯಾಕೆ ನರಕದ ಭೀತ್ಯಾಕೆ
ಹರಿದಿನ ಹರಿದಾಸರ ಪಾದರಜವಿರಲು ।
ದುರಿತದ ಭಯವೆ ಕೇಸರಿಯು ಇಕ್ಕೆಯೊಳಿದ್ದವಗೆ
ಕರಿಯು ಭಯವುಂಟೆ ಶ್ರೀಕೃಷ್ಣನ ದಾಸರ ಸಂಗವಿರಲು
ದುರಿತ ತಿಮಿರಕ್ಕೆ ತರಣಿ ತಾನಲ್ಲವೆ ॥

## ೨೦. ನಮನಭಕ್ತಿಯಿಂದ ಮುಕ್ತಿ

ಸುಳಾದಿ ಅಟತಾಳ

ಸಾಂಕೇತವಾಗಲಿ ಪರಿಹಾಸ್ಯವಾಗಲಿ
ಊಣಕದಿಂದಾಗಲಿ ಡಂಭದಿಂದಾಗಲಿ
ಎದ್ದಾಗಲಿ ಮತ್ತೆ ಬಿದ್ದಾಗಲಿ
ನಮೋ ನಮೋ ನಮೋ ಸಿರಿಕೃಷ್ಣ ಎಂಬ ಘೋಷ
ಮುಕುತಿ ಕನ್ನಿಕೆಯ ಮದುವೆಯ ವಾದ್ಯಘೋಷ ।

## ೨೧. ವಿವಿಧಭಕ್ತಿಯಿಂದ ಫಲ

ಸುಳಾದಿ ಧ್ರುವತಾಳ

ಹರಿಚರಿತೆ ಶ್ರವಣ ದುರಿತಕುಚ್ಚಾಟನಂ
ಹರಿನಾಮ ಕೀರ್ತನ ಭವರೋಗಕ್ಕೆ ಸಿದ್ಧೌಷಧಂ
ಹರಿಚರಣ ಸ್ಮರಣ ಮುಕ್ತ್ಯಂಗನೆಗಾಕರುಷಣಂ
ಹರಿಪಾದಸೇವನ ಅನಂತ ಫಲ ಸಾಧನಂ
ಇಂತೆಂಬೊದೊಂದು ಪೇರ್ಮೆಯು ಹರಿಸೇವೆ ಫಲರೂಪ
ಶ್ರವಣವೆ ಶುಭದ ಬೆಳಗು, ಕೀರ್ತನೆಯು ಲೇಸಿನ ಹೆಚ್ಚಿಗೆ
ಸ್ಮರಣವಚ್ಚ ಸುಖವೆಂಬುದನುಭವ ಸಿದ್ಧಿ
ಶ್ರೀಕೃಷ್ಣನ ಪಾದಸೇವೆ ಮುಕ್ತಿಕನ್ಯಾಸೇರುವೆ

## ೨೨. ಹರಿಚರಣರ ಆಗಮನ

ಉಗಾಭೋಗ

ಹರಿಶರಣರು ಎನ್ನ ಮನೆಗೆ ಬಂದರೆ ಪಾವನ್ನವಾಗೋದು
ಹರಿಶರಣರು ಎನ್ನ ಕೂಡೆ ಮಾತಾಡಿದರೆ ತನುತಾಪಹೋಗೋದು
ಹರಿಶರಣರು ಎನ್ನ ಮನೆಯೊಳಗುಂಡರೆ ಇಪ್ಪತ್ತೊಂದು ಕುಲ
ಪಾವನವಾಗೋದು
ಹರಿ ಎನ್ನನಗಲದಿರೊ ಗದುಗಿನ ವೀರನಾರಾಯಣ ಪುರಂದರವಿಠಲ

## ೨೩. ನಾನು ದಾಸರದಾಸ

ಕಾಂಬೋದಿ ರಾಗ ಝಂಪೆತಾಳ

ದಾಸದಾಸರ ಮನೆಯ ದಾಸಿಯರ ಮಗ ನಾನು
ಸಾಸಿರನಾಮದೊಡೆಯ ರಂಗಯ್ಯನ ಮನೆಯ || ಪಲ್ಲ ||
ಶಂಕುದಾಸರ ಮನೆಯ ಮಂಕುದಾಸನು ನಾನು
ಮಂಕುದಾಸನು ನಾನು ಮರುಳುದಾಸ
ಸಂಕೀರ್ತನೆಯ ಮಾಡಿ ನೆನೆವ ಭಕ್ತರ ಮನೆಯ
ಬಿಂಕದಿ ಬಾಗಿಲ ಕಾಯ್ವ ಬಡ ದಾಸ ನಾನಯ್ಯ || ೧ ||
ಕಾಳಿದಾಸರ ಮನೆಯ ಕೀಳುದಾಸ ನಾನಯ್ಯ
ಆಳುದಾಸನು ನಾನು ಮೂಳದಾಸ
ಫಾಲಾಕ್ಷಸಖ ನಿನ್ನ ಭಜಿಪ ಭಕ್ತರ ಮನೆಯ
ಆಳಿನಾಳಿನ ದಾಸ ಅಡಿದಾಸ ನಾನಯ್ಯ || ೨ ||
ಹಲವು ದಾಸರ ಮನೆಯ ಹೊಲೆದಾಸ ನಾನಯ್ಯ
ಕುಲವಿಲ್ಲದ ದಾಸ ಕುರುಬದಾಸ
ಛಲದಿ ನಿನ್ನ ಭಜಿಸುವರ ಮನೆಯ ಮಾದಿಗ ದಾಸ
ಸಲೆ ಮುಕ್ತಿ ಸಲ್ಲಿಸೆನ್ನೊಡೆಯ ಕೇಶವನೆ || ೩ ||

## ೨೪. ದಾಸನನ್ನು ಕಾಯಬೇಕು

ಮುಖಾರಿ ರಾಗ ಝಂಪೆತಾಳ

ಹೂವ ತರುವರ ಮನೆಗೆ ಹುಲ್ಲ ತರುವೆ || ಪಲ್ಲ ||
ಆವ ಪರಿಯಲಿ ಕಾಯೊ ದೇವ ಚಿನ್ಮಯನೆ || ಅನುಪಲ್ಲ ||

ಈರೇಳು ಜನುಮದಿಂ ದಾಸನಾಗಿಹೆ ನಾನು
ಸೇರಿದೆನೊ ತವಶರಣರ ಸೇವೆಗೆ
ಘೋರದುರಿತಗಳೆಂಬ ವಾರಿಧಿಯ ಬತ್ತಿಸಿ
ನಾರಸಿಂಹನೆ ಕಾಯೊ ಕುಲಸ್ವಾಮಿ || ೧ ||
ರಂಗನಾಥನೆ ನಿನ್ನ ಡಿಂಗರಿಗನೋ ನಾನು
ಡಂಗುರವ ಹೊಯಿಸಯ್ಯ ದಾಸನೆಂದು
ಭಂಗಪಡಿಸದೆ ನೀನು ಶರಣರೊಳಗಿಂಬಿಟ್ಟು
ಗಂಗೆ ಜನಕನೆ ಕಾಯೊ ಚರಣಕ್ಕೆ ಶರಣು || ೨ ||
ಎಷ್ಟು ಮಾಡಲು ನಿನ್ನ ಬಂಟನೋ ವೈಷ್ಣವರ
ಹುಟ್ಟುದಾಸಿಯ ಮಗನೊ ಪರದೇಶಿಯೋ
ಸೃಷ್ಟಿಗೊಡೆಯನೆ ನೆಲೆಯಾದಿಕೇಶವನೆ ಕೈ
ಬಿಟ್ಟಿಯಾದರೆ ನಿನಗೆ ಹರಿದಾಸರಾಣೆ || ೩ ||

## ೨೫. ಭಕ್ತನು ಹೇಗಿರುವನು?

ಉಗಾಭೋಗ

ಕಂಗಳು ಚೆಲುವನು ನೋಡಿ ಕರ್ಣಂ | ಗಳು ವಾರುತೆಯ ಕೇಳಿ
ಹಿಂಗದೆ ನಾಮುವ ವದನದಿ ಸವಿಯುತ್ತ ಪ-
ದಂಗಳ ಮನದಿ ನೆನೆನೆನೆದು ರೋ-
ಮಂಗಳು ಪುಳಕಿತನಾಗಿ ಲೋ
ಕಂಗಳ ಕಡಲೊಳು ಮುಳುಗಿ ಮೈಯುಬ್ಬಿಕೊಬ್ಬುತ್ತ
ಅಂಗವ ಮರೆದಾನಂದದಿ
ರಂಗಾ ಎನುತಿದ್ದರೆ ಸಾಲದೆ
ಮಂಗಳ ಜಯವನ್ನು ಕರುಣಿಸೊ ಮತ್ತೊಂದು
ಸಂಗವನೊಲ್ಲೆನೊ ಸಿರಿಕೃಷ್ಣರಾಯ |

## ೨೬. ನಿಜದಾಸರು ಯಾರು?

ಮುಖಾರಿರಾಗ ಝಂಪೆತಾಳ

ದಾಸರೆಂದರೆ ಪುರಂದರದಾಸರೈಯ || ಪಲ್ಲ ||
ವಾಸುದೇವ ಕೃಷ್ಣನ್ನ ಸೂಸಿ ಪೂಜಿಸುವ || ಅನುಪಲ್ಲ ||

ಗ್ರಾಸಕಿಲ್ಲದೆ ಪೋಗಿ ಪರರ ಮನೆಗಳ ಪೊಕ್ಕು
ದಾಸನೆಂದು ತುಲಸಿಮಾಲೆ ಧರಿಸಿ
ಬೇಸರಿಲ್ಲದೆ ಅವರ ಕಾಡಿಬೇಡಿ ಬಳಲಿಸುತ
ಕಾಸುಗಳಿಸುವ ಪುರುಷನವ ದಾಸನೇ || ೧ ||
ಡಂಭಕದಿ ಹರಿಸ್ಮರಣೆಮಾಡಿ ಜನರಾಮುಂದೆ
ಸಂಭ್ರಮದಿ ತಾನುಂಬ ಊಟ ಬಯಸಿ
ಅಂಬುಜೋದ್ಭವ ಪಿತನ ಆಗಮಗಳರಿಯದಲೆ
ತಂಬೂರಿ ಮೀಟಲವ ಹರಿದಾಸನೇ || ೨ ||
ಯಾಯಿವಾರವ ಮಾಡಿ ವಿಪ್ರರಿಗೆ ಮೃಷ್ಟಾನ್ನ
ಪ್ರೀಯದಲಿ ತಾನೊಂದು ಕೊಡದ ಲೋಭಿ
ಮಾಯಸಂಸಾರದಲಿ ಮಮತೆ ಹೆಚ್ಚಾಗಿಟ್ಟು
ಗಾಯನವ ಮಾಡಲವ ದಾಸನೇನ್ನೈಯ || ೩ ||
ಪಾತಕನ ತೆರದಿ ಪದಗಳನೆ ತಾ ಬೊಗಳಿ
ಕೂಟಜನರ ಮನವ ಸಂತೋಷಪಡಿಸಿ
ಗೂಟನಾಮಗಳಿಟ್ಟುಕೊಂಡ್ಡಿರಿಯ ತಾನೆನುತ
ತೂಟಕವ ಮಾಡಲವ ದಾಸನೇನ್ನೈಯ || ೪ ||
ನೀತಿಯೆಲ್ಲವನರಿತು ನಿಗಮವೇದ್ಯನ ನಿತ್ಯ
ವಾತಸುತನಲ್ಲಿಹನ ವರ್ಣಿಸುತಲಿ
ಗೀತನರ್ತನದಿಂದ ಕೃಷ್ಣನ್ನ ಪೂಜಿಸುವ
ಪೂತಾತ್ಮ ಪುರಂದರದಾಸರಿವರ್ರೈಯ || ೫ ||

## ೨೭. ಭಕ್ತರ ಗುಣವಿಶೇಷಗಳು

ಕಾಂಬೋದಿರಾಗ ಝಂಪೆತಾಳ

ಬೂದಿಮುಚ್ಚಿದ ಕೆಂಡದಂತಿಪ್ಪರು || ಪಲ್ಲ ||
ಈ ಧರೆಯ ಮೇಲೆ ಶ್ರೀಹರಿಭಕ್ತಜನರು || ಅನುಪಲ್ಲ ||
ಅಂಗನೋಡಲು ಅಷ್ಟಾವಕ್ರವಾಗಿಪ್ಪರು
ಕಂಗಳಿಂದಲಿ ನೋಡೆ ಘೋರತರರು
ಮಂಗಳಾಂಗನ ಅಂತರಂಗದಲಿ ಭಜಿಸುತ್ತ
ಹಿಂಗದೆ ಸಂತಜನಸಂಗದೊಳಿಹರು || ೧ ||

ನಾಡ ಜನರುಗಳಂತೆ ನಡೆಯರು ನುಡಿಯರು
ಕೂಡರು ಕುಟಿಲ ಜನಸಂಘದಲ್ಲಿ
ಚಾಡಿಕ್ಷುದ್ರವಹೇಳಿ ಒಡಲ ತುಂಬಿಸಿಕೊಳ್ಳರು
ರೂಢಿಯೊಳಗೆಂದೆಂದು ಗೂಢವಾಗಿಹರು || ೨ ||
ಡಂಭಕತನದಿಂದ ಗೊಂಬೆನೆರಹಿಕೊಂಡು
ಡೊಂಬಕುಣಿತದಂತೆ ಕುಣಿದಾಡರು
ಹಂಬಲಂಗಳಬಿಟ್ಟು ಹರುಷವುಳ್ಳವರಾಗಿ
ಬಿಂಬಮೂರುತಿಯನ್ನು ಕೊಂಡಾಡುತಿಹರು || ೩ ||
ಶತ್ರುಮಿತ್ರರುಗಳ ಸಮವಾಗಿ ಎಣಿಸುವರು
ಪುತ್ರಮಿತ್ರಭ್ರಾತೃಗಳನೆಚ್ಚರು
ಯಾತ್ರೆ ತೀರ್ಥಂಗಳಿಗೆ ಹೋಗುತ್ತ ಶ್ರೀಹರಿಯ
ಸ್ತೋತ್ರಗಳ ಮಾಡಿ ಸಾಧನೆಮಾಡಿಕೊಂಬುವರು || ೪ ||
ಕಷ್ಟ ಸೌಖ್ಯಂಗಳನು ಕರಿವರದಗರ್ಪಿಪರು
ಇಟ್ಟು ಕೊಟ್ಟದ್ದು ಹರಿಕೊಟ್ಟನೆಂಬುವರು
ಸೃಷ್ಟೀಶ ಸಿ ರಿ ವಿ ಜ ಯ ವಿ ಠ್ಠ ಲ ನ ಪದಪದ್ಮ
ಮುಟ್ಟಿ ಭಜಿಸಿ ಮುಕ್ತಿಸಾಮ್ರಾಜ್ಯ ಪಡೆಯುವರು || ೫ ||

## ೨೮. ಭಕ್ತರು ಸಿದ್ಧಪುರುಷರು

ಪೀಲುರಾಗ ಆದಿತಾಳ

ರಂಗ ನಿನ್ನ ಕೊಂಡಾಡುವ ಮಂಗಳಾತ್ಮರ
ಸಂಗಸುಖವಿತ್ತು ಕಾಯೋ ಕರುಣಾಸಾಗರ || ಪಲ್ಲ ||
ಅರಿಯರೊ ನೀನಲ್ಲದೆ ಅನ್ಯದೈವರ
ಮರೆಯರೊ ನೀಮಾಡಿದ ಅನಿಮಿತ್ತೋಪಕಾರ
ತೊರೆಯರೊ ನಿನ್ನಂಘ್ರಿಸೇವೆ ಪ್ರತಿವಾಸರ
ಅರಿಯರೊ ಪರತತ್ವವಲ್ಲದೆ ಇತರ ವಿಚಾರ || ೧ ||
ಮೂಕಬಧಿರರಂತಿಪ್ಪರೊ ನೋಳ್ಪಜನಕೆ
ಕಾಕು ಯುಕುತಿಗಳನವರು ತಾರರೋ ಮನಕೆ
ಸ್ವೀಕರಿಸರನರ್ಪಿತವೊಂದು ಕಾಲಕೆ
ಆ ಕೈವಲ್ಯಭೋಗಸುಖ ಅವರಿಗೆ ಬೇಕೆ || ೨ ||

ಜಯಾಜಯ ಲಾಭಾಲಾಭ ಮಾನಾಪಮಾನ
ಭಯಾಭಯ ಸುಖದುಃಖ ಲೋಷ್ಟಕಾಂಚನ
ಪ್ರಿಯಾಪ್ರಿಯ ನಿಂದಾಸ್ತುತಿಗಳನುದಿನ
ಶ್ರೀಯರಸ ಚಿಂತಿಸುವರೋ ನಿನ್ನ ಅಧೀನ ॥ ೩ ॥
ಈಶಿತವ್ಯರೆಂತಿಪ್ಪರೇಕಾಂತ ಭಕ್ತರು
ದೇಶಕಾಲೋಚಿತ ಧರ್ಮಕರ್ಮಸಕ್ತರು
ಆಶಾಕ್ರೋಧ ಲೋಭಮೋಹಪಾಶಮುಕ್ತರು
ಈಸು ಜನರೇ ಶಾಪಾನುಗ್ರಹಶಕ್ತರು ॥ ೪ ॥
ಕಂಡಕಂಡಲ್ಲಿ ವಿಶ್ವರೂಪ ಕಾಂಬರು
ಉಂಡು ಉಣಿಸಿದ್ದೆಲ್ಲ ನಿನ್ನ ಯಜ್ಞವೆಂಬರು
ಬಂಡುಣಿಯಂದದಿ ನಾಮಾಮೃತವನುಂಬರು
ಹೆಂಡಿರುಮಕ್ಕಳು ನಿನ್ನ ತೊಂಡಿರೆಂಬರು ॥ ೫ ॥
ಬಿಡರು ತಮ್ಮ ಸ್ವಧರ್ಮಗಳೇನುಬಂದರು
ಬಡರು ದೈನ್ಯ ಒಬ್ಬರಿಗು ಲೋಕವಂದ್ಯರು
ಪಿಡಿಯರು ನಿನ್ನ ದ್ವೇಷಿಗಳಿಂದೇನು ಬಂದರು
ಕೊಡುವರು ಬೇಡಿದಿಷ್ಟಾರ್ಥ ನಿತ್ಯಾನಂದರು ॥ ೬ ॥
ನಗುವರೊ ರೋದಿಸುವರೊ ನಾಟ್ಯಮಾಡೋರೋ
ಬಗೆಯರೊ ಬಡತನಭಾಗ್ಯ ಭಾಗವತರು
ತೆಗೆಯರೊ ನಿನ್ನಲ್ಲಿ ಮನವೊಮ್ಮೆಯಾದರು
ಜ ಗ ನ್ನಾ ಥ ವಿ ಠ ಲ ನಿನ್ನವರೇನು ಧನ್ಯರೋ ॥ ೭ ॥

## ೨೯. ಭಕ್ತನಿಗೆ ಭಯವಿಲ್ಲ

ಪೂರ್ವಿ ರಾಗ ಅಟತಾಳ

ನಾ ನಿನ್ನ ಧ್ಯಾನದೊಳಿರಲು ಮಿಕ್ಕ
ಮಾನವರೇನು ಮಾಡುವರೊ ಗೋಪಾಲಾ ॥ ಪ ॥
ಮತ್ಸರಿಸಿದರೇನು ಮಾಡಲಾಪರು ಎನ್ನ
ಅಚ್ಯುತಾನಂತನ ಕೃಪೆಯಿರಲು ॥
ನಿಚ್ಚದಲಿ ನಿನ್ನ ನಾಮವ ಜಪಿಸಲು
ಕಿಚ್ಚಿಗೆ ಇರುವೆ ಮುತ್ತುವದೆ ಪೇಳೆಲೊ ರಂಗ ॥ ೧ ॥

ಧಾಳಿಲಿ ಕುದುರೆ ವೈಯಾರದಿ ಕುಣಿಯಲು
ಧೂಳು ರವಿಯ ಮೇಲೆ ಮುಸುಕುವದೆ ||
ತಾಳಿದವರಿಗೆ ವಿರುದ್ಧ ಲೋಕದೊಳುಂಟೆ
ಗಾಳಿಗೆ ಗಿರಿ ನಡುಗುವದೆ ಹೇಳೆಲೊ ರಂಗ || ೨ ||
ಕನ್ನಡಿಯೊಳಗಣ ಗಂಟೆ ಕಂಡು ಕಳ್ಳ
ಕನ್ನವಿಕ್ಕಲವನ ವಶವಹುದೇ ||
ನಿನ್ನ ನಂಬಲು ಮುದ್ದು ಪು ರಂ ದ ರ ವಿ ಠ ಲ
ಚಿನ್ನಕ್ಕೆ ಪುಟವನಿಟ್ಟಂತೆ ಅಹುದು ರಂಗ || ೩ ||

## ೩೦. ಭಕ್ತರು ನರರಲ್ಲ, ದೇವರು

ರಾಗ ಕೇದಾರಗೌಳ ರೂಪ ತಾಳ

ನೋಡಿರೈ ಕಲ್ಪಭೂರುಹರ
ನಾಡೊಳಗಚ್ಯುತ ದಾಸರು ನರರೇ || ಪಲ್ಲ ||
ಕ್ಷೀರಕೂಡಿದ ಜಲವ ನೀರೆನ್ನಬಹುದೇ
ನೀರೊಳುದಿಸಿದ ಮುತ್ತು ನೀರಾಗೋದೆ
ಅರಿದ ಭಾಂಡಮೃತ್ತಿಕೆ ಕೂಡಲರಿವುದೆ
ಶೌರಿಯ ಶರಣರ ನರರೆನ್ನಬಹುದೇ || ೧ ||
ಹರಿಗೆರೆದ ನೀರು ತೀರ್ಥವೆನಿಸಿತು, ನರ
ಹರಿವುಂಡ ಚರುವು ಪ್ರಸಾದವಾಯ್ತು
ಹರಿದಾಸರುಗಳೆಂಬ ನಾಮಧಾರಕರನ್ನು
ನರರೆನ್ನಬಹುದೇನೋ ಸುರರಿಗಧಿಕರನ್ನು || ೨ ||
ಪರಬ್ರಹ್ಮವಿಷ್ಣುವು ಚರಬ್ರಹ್ಮವೈಷ್ಣವ
ಪರಿಕಿಸಲರಿಯರು ಮತಿಭ್ರಷ್ಟರು
ಧರೆಯೊಳು ಪು ರಂ ದ ರ ವಿ ಠ ಲ ನ ದಾಸರ
ನರರೆಂದವಗೆ ಘೋರ ರೌರವ ನರಕ || ೩ ||

## ೩೧. ಭಕ್ತರೇ ಬಲ್ಲಿದರು

ಪೂರ್ವಕಲ್ಯಾಣಿ ರಾಗತಾಳ

ನೀನೇ ಬಲ್ಲಿದನೋ ಹರಿ ನಿನ್ನ ದಾಸರು ಬಲ್ಲಿದರೊ || ಪಲ್ಲ ||
ನಾನಾತೆರದಿ ನಿಧಾನಿಸಿ ನೋಡಲು,

ನೀನೇ ಭಕ್ತರಾಧೀನನಾದ ಮೇಲೆ || ಅನುಪಲ್ಲ ||
ಜಲಜಭವಾಂಡಕೆ ಒಡೆಯನೆಂದೆನಿಸಿ
ಬಲು ಬಲು ದೊಡ್ಡವನಹುದಹುದೊ
ಅಲಸದೆ ಹಗಲಿರುಳೆನ್ನದೆ ಅನುದಿನ
ಬಲಿಯ ಮನೆಯ ಬಾಗಿಲ ಕಾಯಿದ ಮೇಲೆ || ೧ ||
ಖ್ಯಾತಿಯಿಂದ ಪುರುಹೂತ ಸಹಿತ ಸುರ
ವ್ರಾತವು ನಿನ್ನನು ಓಲೈಸೆ
ಭೂತಳದೊಳು ಸಂಪ್ರೀತಿಗೆ ಸಿಲುಕಿ
ಪಾರ್ಥನ ರಥಕೆ ಸೂತನಾದ ಮೇಲೆ || ೨ ||
ಪರಮಪುರುಷ ಪರಬೊಮ್ಮನೆಂದೆನಿಸಿ
ನಿರುತ ಶ್ರುತಿಯು ಕೊಂಡಾಡಲು, ಪಾಂಡವ
ರರಮನೆ ಅಟ್ಟೊಳಿಗದವನಂದದಿ
ಕರೆಕರೆದಲ್ಲಿಗೆ ಪೋಪುದಾದಮೇಲೆ || ೩ ||
ಧುರದಲಿ ಪಣೆಯನೊಡೆದ ಭೀಷ್ಮನ ಸಂ
ಹರಿಪೆನೆಂದು ಚಕ್ರವ ಪಿಡಿಯೆ ಶ್ರೀ
ಹರಿನಿನ್ನ ಕರುಣದ ಕವಚವ ತೊಟ್ಟು ತಾ
ನಿರುವ ಕಾರಣ ಸುಮ್ಮನೆ ತಿರುಗಿದ ಮೇಲೆ || ೪ ||
ತರಳನು ಕರೆಯಲು ಭರದಿ ಕಂಭದಿ ಬಂದು
ನರಮೃಗ ರೂಪದಿಂದವನ ಕಾಯ್ದೆ
ವರದಾಯಕ ಪುರಂದರವಿಠ್ಠಲ ನಿನ್ನ
ಸ್ಮರಿಪ ಮನದಲಿ ಸೆರೆಸಿಕ್ಕಿದಮೇಲೆ || ೫ ||



೪–೧೪೧೧

# ೪. ನಾಮಮಹಿಮೆ



ದಾಸರ ಭಕ್ತಿಸಾಧನದಲ್ಲಿ ದೇವರ ನಾಮಕ್ಕೆ ಒಂದು ಮಹತ್ವದ ಸ್ಥಾನ ವಿರುವದು ಸಹಜವು. ಉಳಿದ ಪಂಥಗಳಲ್ಲಿ ಧ್ಯಾನಕಾಲದಲ್ಲಿ ಉಪಯೋಗಿಸುವ ದಕ್ಕಾಗಿ ಮಂತ್ರೋಪದೇಶವನ್ನು ಮಾಡುವದುಂಟು. ಭಕ್ತಿಪಂಥದಲ್ಲಿ ನಾಮವೇ ಮಹಾಮಂತ್ರವು. ನವವಿಧ, ಪಂಚವಿಧ, ತ್ರಿವಿಧ, ಚತುರ್ವಿಧ ಹೀಗೆ ಭಕ್ತಿಯಲ್ಲಿ ಆಯಾ ಭಕ್ತಿಯಲ್ಲಿಯ ವಿಶೇಷಗಳಿಗನುಸರಿಸಿ ವಿಧಗಳು ಮಾಡಲ್ಪಟ್ಟಿದ್ದರೂ ಅವೆಲ್ಲವುಗಳಲ್ಲಿಯೂ ನಾಮಕ್ಕೆ ಅತ್ಯಂತ ಮಹತ್ವವು ಕೊಡಲ್ಪಟ್ಟಿದೆ. ಹರಿನಾಮದಿಂದ ಎಲ್ಲ ಪಾಪಗಳು ಹೋಗಿ ಅಖಿಲ ಇಷ್ಟಾರ್ಥ ಗಳು ಸಿದ್ಧಿಸುವವು ಎಂದು ಎಲ್ಲ ಹರಿದಾಸರು ಪುನಃ ಪುನಃ ಬೇಸರದೆ ಹರಿನಾಮ ವನ್ನು ಹೊಗಳಿರುವರು.

ದಾಸಕೂಟದ ಎಲ್ಲ ಭಕ್ತಮಹಾಶಯರು ತಮ್ಮ ತಮ್ಮ ಇಷ್ಟದೇವತೆಯ ನಾಮವನ್ನು ಸತತವಾಗಿ ಜಪಿಸುತ್ತಿದ್ದರೆಂಬುದು ಅವರ ಜೀವನಕ್ರಮದಿಂದಲೂ ಅವರು ರಚಿಸಿದ ಪದ್ಯಗಳಿಂದಲೂ ಗೊತ್ತಾಗುವದು. 'ಎಲ್ಲರೂ ವಿಷ್ಣುದಾಸರು ಅಥವಾ ಹರಿದಾಸರು ಎಂಬುದು ನಿಜ. ಆದರೆ ಅವರು ಸಹಸ್ರನಾಮದೊಡೆಯ ನಾದ ಶ್ರೀಹರಿಯ ಯಾವುದೊಂದು ನಾಮವನ್ನು ತಮ್ಮ ಮಂತ್ರವನ್ನಾಗಿ ಮಾಡಿಕೊಂಡು ತಮ್ಮ ಸ್ಮರಣಮನನಾದಿ ಸಾಧನಗಳನ್ನು ಸಾಗಿಸಿದುದು ಕಂಡುಬರುವದು. ಸ್ವಾಭಾವಿಕವಾಗಿ ಆ ನಾಮವನ್ನೆ ಅವರು ಜಪಿಸುತ್ತಿ ದ್ದರೂ ನಾಮಮಹಿಮೆಯನ್ನು ಹೇಳುವಾಗ ಅವರು ' ನಾಮ ' ' ಹರಿನಾಮ ' ಎಂಬ ಸಾಮಾನ್ಯ ಶಬ್ದಪ್ರಯೋಗವನ್ನೆ ಮಾಡಿರುವರು.

ಈ ' ನಾಮ ' ಸಾಧನವು ಬಹಳ ಸುಲಭವು ಎಂದು ದಾಸರು ಒತ್ತಿ ಹೇಳುವರು. ಮಂತ್ರ ಮುಂತಾದವುಗಳನ್ನು ಜಪಿಸಬೇಕಾದರೆ ವಿಧಿ ಬಹಳ. ಮಂತ್ರಕ್ಕೆ ಸಂಕೇತಾರ್ಥವಿರುವದು. ಅದನ್ನೆಲ್ಲ ತಿಳಿದು ಮಂತ್ರ ಜಪವನ್ನು

ಮಾಡುವದು ಅವಶ್ಯ. ಆದರೆ ಹರಿನಾಮ ಸಾಧನೆಗೆ ಆ ಯಾವನಿರ್ಬಂಧಗಳೂ ಇಲ್ಲ. ಕುಳಿತಾಗ, ನಿಂತಾಗ, ಬೇಕಾದ ಕರ್ಮವನ್ನು ಮಾಡುತ್ತಿರುವಾಗ ನಾಮಸ್ಮರಣೆಯನ್ನು ಮಾಡಬಹುದು. ಹಾಗೂ ಕಲಿಯುಗದಲ್ಲಿ ಇದರಂಥ ಬೇರೆ ಸಾಧನವೇ ಇಲ್ಲವೆಂದು ದಾಸರು ಸಾಧಿಸುವರು. 'ಶುಭವಾವುದಯ್ಯ, ನಿಮ್ಮನಾಮದಿಂದಧಿಕ ಸುಲಭ ವಿದ್ಯಾವ ಕಾಣೆ ವಿಚಾರಿಸೆ' ಎಂದು ವಿಜಯ ದಾಸರು ನುಡಿದಿರುವರು.

ಹರಿನಾಮದ ಫಲ ಹಾಗೂ ಸಾಮರ್ಥ್ಯ ಇವು ಇಷ್ಟೇ ಎಂದು ಹೇಳಲಿ ಕ್ಕಾಗುವುದಿಲ್ಲ. 'ದ್ರೌಪದಿಯ ಹರಿಯ ನಾಮವೆ ಕಾಯಿತು' ಎಂದು ಪುರಂದರದಾಸರು ಹಾಡಿದರೆ 'ಅಚ್ಯುತನ ನಾಮವನು ನೆನೆದು ಸುಖಿಯಾಗು' ಎಂದು ಕನಕದಾಸರು ಉಪದೇಶಿಸಿರುವರು. ಹರಿನಾಮವು ಪಾಪಗಳನ್ನು ನೀಗುವದು, ಪರಮಾತ್ಮನನ್ನು ದೊರಕಿಸುವದು. 'ನಮ್ಮ ಪುರಂದರ ವಿಠಲನ ನಾಮವ ನೆನೆದೆ ಅದರಿಂದೇನು ಫಲ, ಇದರಿಂದೇನು ಫಲ' ಎಂದು ಪುರಂದರದಾಸರು ಕೇಳುವರು. ಅನೇಕ ಬಾಹ್ಯಾಚಾರಗಳು ಕೇವಲ ದಾಂಭಿಕ ವಿರುವವು, ಅವುಗಳಿಗೆ ನಾಮದ ಜೊತೆ ಇಲ್ಲದಿದ್ದರೆ ಅವು ವ್ಯರ್ಥ ಎಂದು ಪುರಂದರದಾಸರ ಅಭಿಪ್ರಾಯವು.

ಇದೊಂದೇ ಸಾಧನವು ಸಾಕು, ಬೇರೆ ಸಾಧನಗಳ ಅವಶ್ಯಕತೆ ಇಲ್ಲ ಎಂದು ದಾಸರು ಮೇಲಿಂದಮೇಲೆ ಹೇಳುವರು. 'ಹರಿನಾಮದ ಮಹಿಮೆ ಅರಿದವನಾರು' ಎಂದು ಕೇಳಿ ವಿಜಯದಾಸರು 'ಅನಂತ ಬಗೆ ಕರ್ಮ ಹರಿ ನಾಮವೊಂದಕ್ಕೆ ಸರಿಬಾರವು' ಎಂದು ಅಭಿಮಾನದಿಂದ ಹೇಳಿರುವರು. ಹರಿನಾಮವನ್ನು ಬಿಟ್ಟು ಕರ್ಮಮಾಡಿದರೆ 'ದೋಷವು ಕರಗದು' ಆದರೆ 'ಹರಿನಾಮದಲ್ಲಿ ಪ್ರೀತಿಯಿಟ್ಟು ಕರ್ಮವ ತೊರೆಯೆ ಪಾಪವಿಲ್ಲ, ಫಲವಕ್ಕು' ಎಂದು ಅದೇ ದಾಸರು ವಿಧಾನವನ್ನು ಮಾಡಿರುವರು.

ದೇವರಿಗಿಂತ ಭಕ್ತರು ಶ್ರೇಷ್ಠ ಎಂದು ಹೇಳಿದಂತೆಯೇ ಅವನಿಗಿಂತ ಅವನ ನಾಮವು ಶ್ರೇಷ್ಠ ಎಂದು ದಾಸರು ಹೇಳಿರುವರು. ನಮಗೆ ನೀನು ಬೇಡ, ನಿನ್ನ ಹಂಗೂ ಬೇಡ, ಕೇವಲ ನಿನ್ನ ನಾಮದ ಬಲವೊಂದಿದ್ದರೆ ಸಾಕು ಎಂದು ಪುರಂದರದಾಸರ ಉಕ್ತಿ ಇರುವದು.

## ೩೨. ಯಾಂತ್ರಿಕನಾಮೋಚ್ಚರಣ ಕೂಡ ಫಲದಾಯಕ

ಕಾಂಬೋದಿರಾಗ ಝಂಪೆತಾಳ

ರಾಮ ಎಂಬುವ ಎರಡು ಅಕ್ಷರದ ಮಹಿಮೆಯನು
ಪಾಮರರು ತಾವೇನು ಬಲ್ಲರಯ್ಯ || ಪಲ್ಲ ||
ರಾಯೆಂದ ಮಾತ್ರದೊಳು ರಕ್ತಮಾಂಸದೊಳಿದ್ದ
ಆಯಸ್ಥಗತವಾದ ಅತಿಪಾಪವನ್ನು
ಮಾಯವನು ಮಾಡಿ ಮಹರಾಯ ಮುಕ್ತಿಯಕೊಡುವ
ದಾಯವನು ವಾಲ್ಮೀಕಿ ಮುನಿರಾಯ ಬಲ್ಲ || ೧ ||
ಮತ್ತೆ ಮಾ ಎಂದೆನಲು ಹೊರಬಿದ್ದ ಪಾಪಿಗಳು
ಒತ್ತಿ ಒಳಪೊಗದಂತೆ ಕವಾಟವಾಗಿ
ಚಿತ್ತ ಕಾಯಗಳ ಪವಿತ್ರ ಮಾಡುವ ಪರಿಯ
ಭಕ್ತವರ ಹನುಮಂತನೊಬ್ಬ ಬಲ್ಲ || ೨ ||
ಧರೆಯೊಳೀ ನಾಮಕೆ-ಸರಿಮಿಗಿಲು ಇಲ್ಲೆಂದು
ಪರಮವೇದಗಳೆಲ್ಲ ಪೊಗಳುತಿಹವು
ಸಿರಿಯರಸ ಪು ರಂ ದ ರ ವಿ ಠ ಲ ನಾಮವನು
ಸಿರಿಕಾಶಿಯೊಳಗಿಪ್ಪ ಶಿವನು ತಾ ಬಲ್ಲ || ೩ ||

## ೩೩. ನಾಮದ ಫಲಗಳು

ಹರಿನಾಮ ಸುಳಾದಿ ಧ್ರುವತಾಳ

ಹರಿನಾಮ ಪರಿಪರಿಯ ಭಕುತರೊಡನಾಡಿತು
ಹರಿನಾಮವೊಂದಿರಲು ಮತ್ತೊಂದುಪಾಯವೆ
ಹರಿನಾಮ ಸಮಸ್ತ ಭವನಿವಾರಣವೈಯು
ಹರಿನಾಮ ಮನಸಿಗೆ ನಿರ್ಮಲ ಕಾರಣ
ಹರಿನಾಮ ಸರ್ವದೇವರ್ಕಳಿಂದಧಿಕವೊ
ಹರಿನಾಮ ಅಜಭವಾದಿಗಳಿಗೆ ಗತಿಪ್ರದ
ಹರಿನಾಮ ಸಮಸ್ತ ಪ್ರಾಯಶ್ಚಿತ್ತಕ್ಕೆ ಮೊದಲು
ಹರಿನಾಮ ನಂಬಿದರೆ ಕೇಡಿಲ್ಲ ಕೇಡಿಲ್ಲ
ಹರಿನಾಮ ನೆನೆದವರ ಕುಲಕೋಟಿ ಉದ್ಧಾರ

ಹರಿನಾಮ ನೆನೆದರೆ ಸರ್ವರೋಗಂಗಳು
ಉರುಳಿಪೋಗುವುದು ನೀ ಕೇಳೊ ಎಲೊ ಕೇಳೊ
ಹರಿನಾಮ ನಿಜಸ್ವಾಮಿ ವಿ ಜ ಯ ವಿ ಠ್ಠ ಲ ನಂ ಘ್ರಿ
ಪರಿಶುದ್ಧನಾಗಿ ನೆನೆ ನಿತ್ಯ ಮನದಲ್ಲಿ

## ೩೪. ನಾಮದ ಮಹಿಮೆ

ಅಭಯ ಸುಳಾದಿ ಆದಿತಾಳ

ನಾಮವೆ ಸರ್ವಪವಿತ್ರ ಮಾಡುವುದು
ನಾಮವೆ ಘನದುರಿತ ಸಂಹಾರ ಮಾಡುವುದು
ನಾಮವೆ ನೆನೆವಂಗೆ ವಜ್ರಾಗಿಯಿಪ್ಪುದು
ನಾಮವೆ ಸಕಲ ಭಕ್ತಸ್ತೋಮವ ಪಾಲಿಸಿತು
ನಾಮವೆ ನಿಂದಲ್ಲಿ ಕುಳಿತಲ್ಲಿ ಮಹಾಭಾಗ್ಯ
ನಾಮವೊಂದು ನೆನೆಯೆ ವಿ ಜ ಯ ವಿ ಠ್ಠ ಲ ನ
ಧಾವನೆ ಆಗುವುದು ನಡೆಯದೆ ನಮಗೆಲ್ಲ

## ೩೫. ರಾಮನಾಮ

ಧನಾಸಿರಾಗ ಆದಿತಾಳ

ರಾಮಮಂತ್ರವ ಜಪಿಸೊ ಹೇ ಮನುಜಾ || ರಾಮ || ಪ ||
ಆ ಮಂತ್ರ ಈ ಮಂತ್ರ ನೆಚ್ಚಿ ನೀ ಕೆಡಬೇಡ
ಸೋಮಶೇಖರ ತನ್ನ ಭಾಮಿನಿಗೊರೆದಿಹ || ಅ. ಪ. ||
ಕುಲಹೀನನಾದರು ಕೂಗಿ ಜಪಿಸುವ ಮಂತ್ರ
ಸತಿ ಬೀದಿಯೊಳು ಉಚ್ಚರಿಪ ಮಂತ್ರ ||
ಹಲವು ಪಾಪಂಗಳ ಹತಗೆಡಿಸುವ ಮಂತ್ರ
ಸುಲಭದಿಂದಲಿ ಸ್ವರ್ಗ ಸೂರೆಗೊಂಬುವ ಮಂತ್ರ || ೧ ||
ಸ್ನಾನಮೌನಂಗಳಿಗೆ ಸಾಧನದ ಮಂತ್ರ
ಮಾನವರು ಮನದಿ ಧ್ಯಾನಿಪ ಮಂತ್ರ ||
ಹೀನ ಗುಣಂಗಳ ಹಿಂಗಿಸುತಿಹ ಮಂತ್ರ
ಏನೆಂಬೆ ವಿಭೀಷಣಗೆ ಪಟ್ಟಗಟ್ಟಿದ ಮಂತ್ರ || ೨ ||

ಸಕಲ ವೇದಗಳಿಗೆ ಸಾರವೆನಿಪ ಮಂತ್ರ
ಮುಕುತಿ ಮಾರ್ಗಕೆ ಇದೇ ಮೂಲಮಂತ್ರ ||
ಭಕುತಿರಸಕೆ ಬಟ್ಟೆ ಒಮ್ಮೆ ದೋರುವ ಮಂತ್ರ
ಸುಖನಿಧಿ ಪು ರಂ ದ ರ ವಿ ಠ ಲ ನ ಮಹಾಮಂತ್ರ || ೩ ||

## ೩೬. ನಾಮವೊಂದೆ ಸಾಕು

ಮುಖಾರಿ ರಾಗ ಝಂಪೆ ತಾಳ

ಸಂಸಾರವೆಂಬ ಸಾಗರವನುತ್ತರಿಸುವೊಡೆ
ಕಂಸಾರಿ ನಾಮವೊಂದು ಸಾಕು ಮನವೆ || ಪಲ್ಲ ||
ಯತಿಯಾಗ ಬೇಡ ನೀ ವೈರಾಗ್ಯವನೆ ಹಿಡಿದು
ವ್ರತವ ಮಾಡಿದೆನೆಂಬ ಹೆಮ್ಮೆ ಬೇಡ
ಶ್ರುತಿಸ್ಮೃತಿಯ ನೋಡಿದೆನೆಂಬ ಚೇಷ್ಟೆಯು ಬೇಡ
ರತಿಪತಿಪಿತನಾಮವೊಂದೆ ಸಾಕು ಮನವೆ || ೧ ||
ತನುವದಂಡಿಸಿ ತುದಿಯ ಕೋಡುಗಲ್ಲಿನ ಮೇಲೆ
ವನಿತೆಯನು ಬಿಟ್ಟು ತಪವಿರಲು ಬೇಡ
ಅನುದಿನವು ನೀರೊಳಗೆ ಮುಳುಗಿ ನಡುಗಲು ಬೇಡ
ವನಜನಾಭನ ನಾಮ ನೆನೆ ಕಂಡ್ಯ ಮನವೆ || ೨ ||
ತೀರ್ಥಯಾತ್ರೆಯಮಾಡಿ ಬಹುವಿಧದಿ ಬಳಲಿ ಕೃ
ತಾರ್ಥನಾದೆನೆಂಬ ಹಮ್ಮು ಬೇಡ
ಪಾರ್ಥಸಾರಥಿ ಕಾ ಗಿ ನೆ ಲೆ ಯಾ ದಿ ಕೇ ಶ ವ ನ ಸಂ
ಕೀರ್ತನೆಯ ಮಾಡಿ ಸುಖಿಯಾಗೊ ಮನವೆ || ೩ ||

## ೩೭. ಒಂದೇ ನಾಮದ ಮಹಿಮೆ

ರಾಗ ಆನಂದಭೈರವಿ ಅಟತಾಳ

ಒಂದೇ ನಾಮದೊಳಡಗಿದವು ಅಡಗಿದವು || ಪ ||
ಆ-ನಂದದಿಂದುಚ್ಚರಿಸುವ ಅಖಿಲ ವೇದಗಳು || ಅನುಪಲ್ಲ ||
ಒಂದೆ ನಾಮವು ಪ್ರಲ್ಹಾದನ್ನ ಕಾಯಿತು ಮ-
ತೊಂದೆ ನಾಮವು ಅಜಮಿಳನ ಸಲಹಿತು ||

ತಂದೆತಾಯಿಯು ಬಿಟ್ಟ ಕಂದ ಧ್ರುವರಾಯಗಾ-
ನಂದದ ಪದವಿತ್ತಾನಂತ ಗುಣಗಳೆಲ್ಲ || ೧ ||
ಮತ್ಸ್ಯಾದ್ಯನಂತವತಾರಾ ಅವತಾರಾ
ಸ್ವಚ್ಛಾದಷ್ಟಾದಶ ಪುರಾಣಸಾರ ||
ಕಚ್ಛಪನಾಗಿ ಮೂಜಗಕೆ ಆಧಾರ
ಸ್ವೇಚ್ಛೆಯಿಂದಲಿ ಹರಿ ಮಾಡೊ ವ್ಯಾಪಾರ || ೨ ||
ಒಬ್ಬರೀತಗೆ ಸಮರಿಲ್ಲ ಮಿಗಿಲಿಲ್ಲ
ಅಬ್ಬರದಲಿ ಸಲಹುವ ಜಗವೆಲ್ಲ ||
ಕಬ್ಬುಬಿಲ್ಲನ ಪಿತ ಪು ರಂ ದ ರ ವಿ ಠ ಲ ವೈ-
ದರ್ಭೆಯು ರಮಣನ ವರ ಸುಗುಣಗಳೆಲ್ಲ || ೩ ||

## ೩೮. ನಾಮವೆಂಬ ಯೋಗಯಂತ್ರ

ಶಂಕರಾಭರಣ ರಾಗ ಛಾಪುತಾಳ

ಯಂತ್ರದೊರಕಿತು ಯೋಗ | ಯಂತ್ರದೊರಕಿತು || ಪ ||
ಯಂತ್ರವಾಹಕ ನಾರಾಯಣನ
ಅಂತರಂಗದಿ ನೆನೆಸುವಂಥ || ಅ. ಪ. ||
ಆಸೆಯಿಂದ ಮುಳುಗೋದಲ್ಲ ಕ್ಲೇಶಬಟ್ಟು ತಿರುಗೋದಲ್ಲ
ವಾಸುದೇವ ಕೃಷ್ಣನೆಂಬ ಶಾಶ್ವತವಾದ ದಿವ್ಯನಾಮಾ || ೧ ||
ಹಾಸಬಹುದು ಹೊದಿಯಬಹುದು ಸೂಸಿ ಒಡತುಂಬಬಹುದು
ದಾಸರನ್ನು ಬಿಡದೆ ಪೊರೆವ ಶ್ರೀಶನೆಂಬ ದಿವ್ಯನಾಮ || ೨ ||
ಒಂದು ಬಾರೆ ಸ್ಮರಿಸಿದರೆ ಒಂದು ಕೋಟಿ ಜಪದ ಫಲವು
ಇಂದಿರೇಶ ಪು ರಂ ದ ರ ವಿ ಠ ಲ ನೆಂಬ ದಿವ್ಯ ನಾಮ || ೩ ||

## ೩೯. ಸ್ಮರಣೆ ಪಾಪಿಷ್ಠನನ್ನು ಪಾವನಮಾಡುವದು

ರೇಗುಪ್ತಿ ರಾಗ ಅಟತಾಳ

ಸ್ಮರಣೆ ಒಂದೇ ಸಾಲದೆ ಗೋವಿಂದನ ನಾಮ ಒಂದೇ ಸಾಲದೇ || ಪ ||
ಪರಮ ಪುರುಷನನ್ನು ನೆರೆನಂಬಿದವರಿಗೆ
ದುರಿತಬಾಧೆಗಳ ಗುರುತತೋರುವದೆ || ಅ. ಪ. ||

ಕಡುಮೂರ್ಖನಾದರೇನು ದುಷ್ಕರ್ಮದಿಂ ತೊಡೆದಾತನಾದರೇನು ||
ಜಡನಾದರೇನಲ್ಪ ಜಾತಿ ಆದರೇನು
ಬಿಡದೆ ಪ್ರಲ್ಹಾದನ್ನ ಸಲಹಿದ ಹರಿಯ || ೧ ||

ಪಾತಕಿ ಆದರೇನು ಸರ್ವಪ್ರಾಣಿ ಘಾತಕಿಯಾದರೇನು ||
ನೀತಿಯಬಿಟ್ಟು ದುಷ್ಕರ್ಮಿಯಾದರೇನು
ಆತುರದಜಾಮಿಳನ ಸಲಹಿದ ಹರಿಯ || ೨ ||

ಸಕಲ ತೀರ್ಥಯಾತ್ರೆಯ ಮಾಡಿದಂಥ ನಿಖಿಲ ಪುಣ್ಯದ ಫಲವು ||
ಭಕುತಿಪೂರ್ವಕವಾಗಿ ಬಿಡದನುದಿನದಲ್ಲಿ
ಪ್ರಕಟ ಪು ರಂ ದ ರ ವಿ ಠ ಲ ನ ನಾಮದ || ೩ ||

## ೪೦. ಬೇರೆ ನಾಮಗಳು ಬೇಡ

ಆರಭಿ (ದರಬಾರು) ರಾಗ ಅಟತಾಳ

ನಾರಾಯಣ ನಿನ್ನ ನಾಮ ಒಂದಿರುತಿರೆ
ಬೇರೊಂದು ನಾಮವಿನ್ಯಾಕಯ್ಯಾ || ಪಲ್ಲ ||
ನೆಟ್ಟನೆ ದಾರಿಯು ಬಟ್ಟೆಯೊಳಿರುತಿರೆ
ಬೆಟ್ಟವ ಬಳಸಲಿನ್ಯಾಕಯ್ಯಾ
ಅಷ್ಟೈಶ್ವರ್ಯವು ಮೃಷ್ಟಾನ್ನವಿರುತಿರೆ
ಬಿಟ್ಟಿ ಕೂಳನು ತಿನ್ನಲ್ಯಾಕಯ್ಯ || ೧ ||

ಪರುಷದ ಪಾಳೆಗಳಿರುತಿರೆ ಬೀದಿ
ಜರಿಗಲ್ಲ ತೊಳೆಯಲಿನ್ಯಾಕಯ್ಯ
ಹರಿವಾಣದೊಳಗಮೃತಾನ್ನವು ಇರುತಿರೆ
ತಿರುಪೆ ಕೂಳನು ತಿನ್ನಲ್ಯಾಕಯ್ಯ || ೨ ||

ಬೆಲ್ಲವು ಕರದೊಳಗಿರುತಿರೆ ಕಾಡ
ಕಲ್ಲನ್ನು ಕಡಿಯಲಿನ್ಯಾಕಯ್ಯ
ಬಲ್ಲಿದ ನೆ ಲೆ ಯಾ ದಿ ಕೇ ಶ ವ ನಿರುತಿರೆ
ಚಿಲ್ಲರೆ ದೈವದ ಹಂಬಲ್ಯಾಕಯ್ಯ || ೩ ||

## ೪೧. ಪಾಪಿಯನ್ನು ಕೂಡ ನಾಮ ಕಾಯುವುದು

ನಾದನಾಮಕ್ರಿಯೆ ರಾಗ ಏಕತಾಳ

ನಾ ಡೊಂಕಾದರೆ ಏನೋ ನಿನ್ನ ನಾಮಡೊಂಕೆ ವಿಠಲ || ಪಲ್ಲ ||
ನದಿಯು ಡೊಂಕು ಆದರೇನು ಉದಕ ಡೊಂಕೆ ವಿಠಲ || ೧ ||
ಕಬ್ಬು ಡೊಂಕು ಆದರೇನು ಸಿಹಿ ಡೊಂಕೆ ವಿಠಲ || ೨ ||
ಪುಷ್ಪಡೊಂಕು ಆದರೇನು ಪರಿಮಳ ಡೊಂಕೆ ವಿಠಲ || ೩ ||
ಆಕಳು ಡೊಂಕು ಆದರೇನು ಹಾಲು ಡೊಂಕೆ ವಿಠಲ || ೪ ||
ಬಿಲ್ಲು ಡೊಂಕು ಆದರೇನು ಬಾಣ ಡೊಂಕೆ ವಿಠಲ || ೫ ||
ನಾನು ಹೊಲೆಯನಾದರೆ ನಿನ್ನ ನಾಮ ಹೊಲೆಯೆ ವಿಠಲ || ೬ ||
ಅಜ್ಞನಾದರೇನು ಕಾಯೊ ಸುಜ್ಞ ಪುರಂದರ ವಿಠಲ || ೭ ||

## ೪೨. ನಿನಗಿಂತ ನಿನ್ನ ನಾಮವೆ ಶ್ರೇಷ್ಠ

ಕಾನಡಾ ರಾಗ ತಾಳ

ನೀನ್ಯಾಕೋ ನಿನ್ನ ಹಂಗ್ಯಾಕೋ || ಪಲ್ಲ ||
ನಿನ್ನ ನಾಮದ ಬಲವೊಂದಿದ್ದರೆ ಸಾಕೊ || ಅನುಪಲ್ಲ ||
ಈ ಮರ ಆ ಮರ ಧ್ಯಾನಿಸುತಿರುವಾಗ
ರಾಮ ರಾಮ ಎಂಬ ನಾಮವೆ ಕಾಯ್ತೊ || ೧ ||
ಬಾಲೆಯ ಸಭೆಯಲಿ ಸೀರೆಯ ಸೆಳೆವಾಗ
ಬಾಲಕೃಷ್ಣನೆಂಬ ನಾಮವೆ ಕಾಯ್ತೊ || ೨ ||
ಯಮನದೂತರು ಬಂದು ಅಜಮಿಳನೆಳೆವಾಗ
ನಾರಾಯಣನೆಂಬ ನಾಮವೆ ಕಾಯ್ತೊ || ೩ ||
ಕರಿಮಕರಿಗೆ ಸಿಕ್ಕಿ ಮೊರೆಯಿಡುತಿರುವಾಗ
ಆದಿ ಮೂಲನೆಂಬ ನಾಮವೆ ಕಾಯ್ತೊ || ೪ ||
ಪ್ರಲ್ಹಾದನ ಪಿತ ಬಾಧಿಸುತಿರುವಾಗ
ನಾರಸಿಂಹನೆಂಬ ನಾಮವೆ ಕಾಯ್ತೊ || ೫ ||
ಹಸುಳೆ ಆ ಧ್ರುವರಾಯ ಅಡವಿಗೆ ಪೋಪಾಗ
ವಾಸುದೇವನೆಂಬ ನಾಮವೆ ಕಾಯ್ತೊ || ೬ ||
ನಿನ್ನ ನಾಮಕೆ ಸರಿಯಾವುದು ಕಾಣೆನೊ
ಘನ್ನಮಹಿಮ ಸಿರಿ ಪುರಂದರ ವಿಠಲ || ೭ ||

# ೫. ಸ್ಮರಣಕೀರ್ತನಗಳ ಮಹಿಮೆ



ನಾಮ ಮಹಿಮೆಯನ್ನು ಹಾಡುವಾಗಲೆ ಎಷ್ಟೋ ಸಾರೆ ದಾಸರು ಸ್ಮರಣ-ಕೀರ್ತನಗಳ ಮಹಿಮೆಯನ್ನೂ ಹೊಗಳಿರುವರು. ಯಾಕಂದರೆ ಸ್ಮರಣ ವೆಂದರೆ ನಾಮಸ್ಮರಣೆ ಹಾಗೂ ಕೀರ್ತನವೆಂದರೆ ನಾಮಸಂಕೀರ್ತನೆ ಎಂದು ಅನೇಕ ಸಾರೆ ಅರ್ಥವಾಗುವದು. ಈ ಪ್ರಕರಣದಲ್ಲಿ ವಿಶೇಷವಾಗಿ ಶ್ರೀಹರಿ ನಾಮಸ್ಮರಣೆ ಹಾಗೂ ಹರಿಗುಣಕೀರ್ತನೆ ಇವುಗಳನ್ನು ಕುರಿತು ಇರುವ ದಾಸರ ವಿಚಾರಗಳನ್ನು ಕೊಟ್ಟಿದ್ದೇವೆ.

ಪರಮ ಭಕ್ತಿಯು ಶ್ರೀಹರಿಪ್ರೇಮದ ಪರಿಣತ ಸ್ವರೂಪವಿರುವುದು. ಭಕ್ತಿಯಲ್ಲಿ ಬೇರೆ ಬೇರೆ ವಿಧಗಳು ಕಲ್ಪಿಸಲಾಗಿವೆ ಎಂದು ಈ ಮೊದಲೇ ಹೇಳಿದ್ದೇವೆ. ಅವುಗಳಲ್ಲಿ ಸ್ಮರಣ ಹಾಗೂ ಕೀರ್ತನ ಇವು ಅತ್ಯಂತ ಸುಲಭವಾದ ಹಾಗೂ ಸಾಮಾನ್ಯವಾದ ವಿಧಗಳಿರುವವು. ಧ್ಯೇಯವಸ್ತುವನ್ನು— ಇಲ್ಲಿ ಪರಮಾತ್ಮನೆ ಧ್ಯೇಯವಸ್ತು. ಪ್ರಿಯವಸ್ತು– ಪ್ರಾಪ್ತಮಾಡಿಕೊಳ್ಳಬೇಕಾದರೆ ತನ್ಮಯರಾಗುವದು ಅವಶ್ಯವಿರುವುದರಿಂದ ಆ ವಸ್ತುವಿನ ಸತತ ಸ್ಮರಣ ಹಾಗೂ ಆ ವಸ್ತುವಿನ ಸತತ ಸಂಕೀರ್ತನ ಇವು ಸಹಜೋಪಾಯಗಳಿರುವವು. ಭಕ್ತಿಯಲ್ಲಿ ಸರ್ವಸಮರ್ಪಣ ಇಲ್ಲವೆ ಆತ್ಮನಿವೇದನವೇ ಎಲ್ಲಕ್ಕೂ ಶ್ರೇಷ್ಠವಾದ ಮೆಟ್ಟಲು. ಅದನ್ನು ಸಾಧಿಸುವುದಕ್ಕಾಗಿ ಸಾಧಕರು ಹರಿನಾಮಸ್ಮರಣ, ಹರಿನಾಮಸಂಕೀರ್ತನ, ಹರಿಗುಣಗಾನ, ಹರಿಸಾಮರ್ಥ್ಯ ವರ್ಣನ ಮುಂತಾದ ಸುಲಭ ಸಾಧನಗಳನ್ನು ಉಪಯೋಗಿಸುವರು.

ನಾಮಸ್ಮರಣವನ್ನು ಕುರಿತು ಹೇಳುವಾಗ ಪುರಂದರದಾಸರು 'ನಿನ್ನ ಸ್ಮರಣವೆಂಬದು ಎನ್ನ ಜೀವಕ್ಕೆ ಜೀವ' ಎಂದು ನುಡಿದು ಈ ಸಾಧನದ ಮಹತ್ವವನ್ನು ಹೇಳಿರುವರು. ಸ್ಮರಣದಿಂದ ಭವಭಯವು ಪರಿಹರಿಸುವುದು, ಸ್ಮರಿಸುವ ಜನಕೆಲ್ಲ ಭವಭಯ ತಾಪಗಳಿಲ್ಲ ಎಂದು ಅದೇ ದಾಸರು ಸಾರಿರುವರು. 'ಕನಸಿಲಿ ಮನಸಿಲಿ ಮನಸಿಜನೈಯ್ಯನ ನೆನೆಸುವ ಭಾಗ್ಯವನು

ಕೊಡು ' ಎಂದು ವಿಜಯದಾಸರು ಸರಸ್ವತಿಯನ್ನು ಬೇಡಿಕೊಂಡಿರುವರು. ಸ್ಮರಣೆಯು ಪೂರ್ಣ ಫಲಕಾರಿಯಾಗಬೇಕಾದರೆ ಅದು ಸತತ ನಡೆಯಬೇಕು. ಹಾಗೂ ಏಕಚಿತ್ತದಿಂದ ನಡೆಯಬೇಕು. ಹರಿಯ ಸ್ಮರಣೆಯಿಂದ ಎಷ್ಟು ಲಾಭಗಳಾಗುವವೊ ಅಷ್ಟೇ ಅವನ ವಿಸ್ಮರಣೆಯಿಂದ ಹಾನಿಯಾಗುವು ದೆಂಬುದನ್ನು ವಿಜಯದಾಸರು ಚನ್ನಾಗಿ ಬಣ್ಣಿಸಿರುವರು.

ಮೇಲಾಗಿ ಸ್ಮರಣೆಯು ಸಾಧಕರಿಗೆ ಅತ್ಯಂತ ಸಂತೋಷಕಾರಕವು. ಹಲವರಿಗೆ ಮನೆಮಾರು, ಧನಧಾನ್ಯಾದಿಗಳು ಆನಂದವನ್ನುಂಟು ಮಾಡುತ್ತಿರ ಬಹುದು. ಆದರೆ ' ನಿನ್ನ ನೆನಹೆನಗೆ ಸಂತೋಷ ರಂಗವಿಠ್ಠಲರೇಯ ' ಎಂದು ಶ್ರೀಪಾದರಾಯರು ಹೇಳಿರುವರು. ಸ್ಮರಣದ ಸಾಧ್ಯವು ಆನಂದದಾಯಕ ವಿರುವುದಲ್ಲದೆ ಈ ಸಾಧನವು ಕೂಡ ಅತ್ಯಂತ ಆನಂದವನ್ನುಂಟುಮಾಡು ವಂತಹದಿರುವದು.

ನಾಮಸ್ಮರಣವೆಂಬ ಸಾಧನದ ಬಗ್ಗೆ ಮೇಲೆ ಯಾವ ಮಾತುಗಳನ್ನು ಹೇಳಿರುವೆವೊ ಅವೆಲ್ಲ ಕೀರ್ತನವನ್ನೂ ಅನ್ವಯಿಸುವವು. ಹರಿಕಥಾಶ್ರವಣ ಹಾಗೂ ಹರಿಕಥೆ ಮಾಡುವುದು ಇವು ಕಲಿಯುಗಕ್ಕೆ ತಕ್ಕಂಥ ಸಾಧನಗಳೆಂದು ದಾಸರು ಹೇಳಿರುವರು. ಕೃತ ತ್ರೇತಾದಿಯುಗಗಳಲ್ಲಿ ಧ್ಯಾನಾದಿ ಸಾಧನಗಳು ಯೋಗ್ಯವಿದ್ದರೂ ಈಗ ಮಾತ್ರ ಕೀರ್ತನವೇ ಶ್ರೇಷ್ಠ ಸಾಧನ ಎಂದು ಶ್ರೀಪಾದರಾಯರು ಒಂದು ಉಗಾಭೋಗದಲ್ಲಿ ಹೇಳಿರುವರು. ' ಹರಿಕಥಾ ಶ್ರವಣ ಮಾಡೋ, ಹರಿಕಥಾ ವೈಕುಂಠಕಿದು ನೋಡೋ ' ಎಂದು ಪುರಂದರ ದಾಸರು ಹಾಡಿರುವರು.

## ೪೩. ಸ್ಮರಣದಿಂದ ಜನ್ಮಸಾರ್ಥಕ

ಪುನ್ನಾಗವರಾಳಿ ರಾಗ ಆದಿತಾಳ

ಯಾಕೆ ಬಂದಿ ಜೀವ ಯಾಕೆ ಬಂದಿ || ಪಲ್ಲ ||
ಲೋಕದ ಅನುಭವ ಬೇಕಾಯಿತೆ ನಿನಗೆ || ಅನುಪಲ್ಲ ||

ಮೇರುಪರ್ವತದಲ್ಲಿ ವಾರಣವಂತನಾಗಿ
ಮಾರಮಣನ ಪಾದ ಆರಾಧನೆ ಬಿಟ್ಟು || ೧ ||
ಉಣ್ಣು ಉಣ್ಣು ಉಣ್ಣು ಉಣ್ಣು ಮತ್ತೆ ಉಣ್ಣು
ಹೆಣ್ಣು ಹೊನ್ನು ಮಣ್ಣು ನಿನ್ನದೆಂತೆಂಬಿ || ೨ ||

ಆದದ್ದೆಲ್ಲ ಆಯಿತು ಹೋದ ಮಾತುಗಳ್ಯಾಕೆ
ಶ್ರೀದ ವಿ ಜ ಯ ವಿ ಠ್ಠ ಲ ನ್ನ ಆದರದಿ ಸ್ಮರಿಸುತಿರು || ೩ ||

## ೪೪. ಸತತ ಸ್ಮರಣ ಅವಶ್ಯ

ಮಧ್ಯಮಾವತಿರಾಗ ಆದಿತಾಳ

ನೆನೆಬೇಕು ನೆನೆಬೇಕು ನೆನೆಯಬೇಕಮ್ಮ || ಪಲ್ಲ ||
ಮನದ ಚಪಲಬುದ್ಧಿ ಇನ್ನೂ ಬಿಡದಮ್ಮ || ಅನುಪಲ್ಲ ||

ಎಡೆಬಿಡದಲೆ ನಿನ್ನ ಒಡಲ ಚಿಂತಿಸುವಿ
ಕಡಲಶಯನನ ನಾಮ ಬಿಡದೇ ಹಗಲಿರುಳು || ೧ ||
ಹೊತ್ತು ಹೋಯಿತು ಇನ್ನು ವ್ಯರ್ಥವಾಗುವುದು
ಹತ್ತಿಲೆ ಇಹುದು ಕಣ್ಣೆತ್ತಿ ನೋಡಿದರೆ || ೨ ||
ಇಂದಿರಾರಮಣ ಶ್ರೀ ಪು ರಂ ದ ರ ವಿ ಠ ಲ
ಮಂದರೋದ್ಧಾರನ ಆನಂದಯೆಂದೆಣಿಸಿ || ೩ ||

## ೪೫. ಯಾವಾಗಲೂ ನಾಮಸ್ಮರಣೆ ನಡೆಯಲಿ

ರಾಗ ಆನಂದಭೈರವಿ ಅಟತಾಳ

ನಾರಾಯಣ ನಿಮ್ಮ ನಾಮದ ಸ್ಮರಣೆಯು
ಸಾರಾಮೃತ ಎನ್ನನಾಲಿಗ್ಗೆ ಬರಲಿ || ಪಲ್ಲ ||

ಕೂಡುವಾಗಲಿ ನಿಂತಾಡುವಾಗಲಿ ಮತ್ತೆ
ಹಾಡುವಾಗಲಿ ಹರಿದಾಡುವಾಗಲಿ ||
ಖೋಡಿ ವಿನೋದದಿ ನೋಡದೆ ನಾ ಬಲು
ಮಾಡಿದ ಪಾಪ ಬಿಟ್ಟೋಡಿ ಹೋಗೊ ಹಾಗೆ || ೧ ||
ಊರಿಗೆ ಹೋಗಲಿ ಊರೊಳಗಿರಲಿ
ಕಾರಣಾರ್ಥಗಳೆಲ್ಲ ಕಾದಿರಲಿ ||
ವಾರಿಜನಾಭ ನರಸಾರಥಿ ಸನ್ನುತ
ಸಾರೆ ಸಾರಿಗೆ ನಾನು ಬ್ಯಾಸರಾಗಧಾಂಗೆ || ೨ ||
ಹಸಿವಿದ್ದಾಗಲಿ ಹಸಿವಿಲ್ಲದಾಗಲಿ
ರಸಕಸಿ ಇರಲಿ ಹರುಷವಿರಲಿ ||

ವಸುದೇವಾತ್ಮಕ ಶಿಶುಪಾಲಕ್ಷಯಾ
ಅಸುರಾಂತಕ ನಿಮ್ಮ ಹೆಸರು ಮರೆಯದ ಹಾಂಗೆ || ೩ ||
ಕಷ್ಟದಲ್ಲಿರಲಿ ಉತ್ಕೃಷ್ಟದಲ್ಲಿರಲಿ
ಎಷ್ಟಾದರೆ ಮತಿಗೆಟ್ಟಿರಲಿ
ಕೃಷ್ಣಾ ಕೃಷ್ಣಾ ಎಂದು ಶಿಷ್ಟರು ಪೇಳುವ
ಅಷ್ಟಾಕ್ಷರ ಮಹಾಮಂತ್ರದ ನಾಮದ || ೪ ||
ಕನಸಿನೊಳಾಗಲಿ ಕಳವಳಿಪಾಗಲಿ
ಮನಸುಗೊಟ್ಟಿರಲಿ ಮುನಿದಿರಲಿ ||
ಜನಕಜಾಪತಿ ನಿಮ್ಮ ಚರಣಕಮಲವನು
ಮನಸಿನೊಳಗೆ ಒಮ್ಮೆ ನೆನೆಸಿಕೊಳ್ಳೊಹಾಗೆ || ೫ ||
ಜ್ವರ ಬಂದಾಗಲಿ ಛಳಿ ಬಂದಾಗಲಿ
ಮರಳಿ ಮರಳಿ ಮತ್ತೆ ನಡುವಾಗಲಿ ||
ಹರಿನಾರಾಯಣ ದುರಿತನಿವಾರಣೆಂದು
ಇರಳು ಹಗಲು ನಿಮ್ಮ ಸ್ಮರಣೆ ಮರೆಯಧಾಂಗೆ || ೬ ||
ಸಂತತಿ ಹರಿ ನಿಮ್ಮ ಸಾವಿರ ನಾಮವು
ಅಂತರಂಗದ ಒಳಗಿರಿಸಿ ||
ಎಂತೋ ಪು ರಂ ದ ರ ವಿ ಠ ಲ ರಾಯನೇ
ಅಂತ್ಯಕಾಲದಲ್ಲಿ ಚಿಂತಿಸೋಹಾಂಗೆ || ೭ ||

## ೪೬. ಸ್ಮರಿಸುವವನಿಗೆ ಚಿಂತೆಬೇಡ

ಪಂತುವರಾಳಿ ರಾಗ ರೂಪಕತಾಳ

ಚಿಂತೆಯಾತಕೊ ಬಯಲ ಭ್ರಾಂತಿಯಾತಕೊ || ಪ ||
ಕಂತುಪಿತನ ದಿವ್ಯ ನಾಮ ಮಂತ್ರವನ್ನು ಜಪಿಸುವವಗೆ || ಅ. ಪ. ||

ಕಾಲಕಾಲದಲ್ಲಿ ಬಿಡದೆ ವೇಳೆಯರಿತು ಕೂಗುವಂಥ
ಕೋಳಿ ತನ್ನ ಮರಿಗೆ ಮೊಲೆಯ ಹಾಲು ಕೊಟ್ಟು ಸಲಹಿತೆ || ೧ ||
ಪಡಗರದ ನಾರಿಯರು ಹಡೆಯುವಾಗ ಸೂಲಗಿತ್ತಿ
ಅಡವಿಯೊಳಗೆ ಹೆರುವ ಮೃಗವ ಹಿಡಿದು ರಕ್ಷಿಸುವರಾರು || ೨ ||

ಘಟ್ಟಿ ಮಣ್ಣ ಶಿಶುವಮಾಡಿ ಹೊಟ್ಟೆಯೊಳಗೆ ಇರಿಸಲಿಲ್ಲ
ಕೊಟ್ಟದೇವರು ಕೊಂಡುಹೋದರೆ ಕುಟ್ಟಿಕೊಂಡು ಅಳುವದೇತಕೆ || ೩ ||
ಹೆತ್ತ ತಾಯಿ ಸತ್ತುಹೋಗಲು ಕೆಟ್ಟೆವೆಂಬರು ಲೋಕ ಜನರು
ಮತ್ತೆ ಗುರುಗುರಿಸೆ ತಾವು ಹತ್ತರಿದ್ದು ಸಲಹುತಿಹರೆ || ೪ ||
ಪರದಲ್ಲಿ ಪದವಿಯುಂಟು ಇಹದಲ್ಲಿ ಸೌಖ್ಯವುಂಟು
ಗುರುಪುರಂದರವಿಠಲನ್ನ ಸ್ಮರಣೆಯನ್ನು ಮರೆಯದವಗೆ || ೫ ||

## ೪೭. ಸ್ಮರಣ ವಿಸ್ಮರಣಗಳು

ಕಾಂಬೋಧಿ ರಾಗ ಝಂಪೆತಾಳ

ಹರಿಯ ನೆನೆಸಿದ ದಿವಸ ಶುಭಮಂಗಳ || ಪಲ್ಲ ||
ಹರಿಯ ನೆನೆಸದ ದಿವಸ ಅಮಂಗಳ || ಅನು ಪಲ್ಲ ||

ಹರಿಯ ನೆನೆಸಿದ ನಿಮಿಷ ಆವಾಗಲೂ ಹರುಷ
ಹರಿಯ ನೆನೆಸದ ನಿಮಿಷ ದುರ್ಮಾನಸ
ಹರಿಯ ನೆನೆಸಿದ ಘಳಿಗೆ ಮುಕ್ತಿಗೆ ಬೆಳೆವಣಿಗೆ
ಹರಿಯ ನೆನೆಸದ ಘಳಿಗೆ ಅದು ಯಮನ ಬಳಿಗೆ || ೧ ||
ಹರಿಯ ನೆನೆಸಿದ ಪ್ರಹರ ಕುಲಕೋಟಿ ಉದ್ಧಾರ
ಹರಿಯ ನೆನೆಸದ ಪ್ರಹರ ಹೀನಾಚಾರ
ಹರಿಯ ನೆನೆಸಿದ ಹಗಲು ಮುಕ್ತಿಗೆ ಬಲು ಮಿಗಿಲು
ಹರಿಯ ನೆನೆಸದ ಹಗಲು ನರಕಕ್ಕೆ ತಗಲು || ೨ ||
ಹರಿಯ ನೆನೆಸಿದ ಮಧ್ಯಾಹ್ನ ಸುಧಾಪಾನ
ಹರಿಯ ನೆನೆಸದ ಮಧ್ಯಾಹ್ನ ಸುರಾಪಾನ
ಹರಿಯ ನೆನೆಸಿದ ಸಾಯಂಕಾಲವೇ ಸುಖಕಾಲ
ಹರಿಯ ನೆನೆಸದ ಸಾಯಂಕಾಲ ದುಷ್ಕಾಲ || ೩ ||
ಹರಿಯ ನೆನೆಸಿದ ದಿನವು ನರನಿಗೆ ಸುದಿನವು
ಹರಿಯ ನೆನೆಸದ ದಿನವು ದುರ್ದಿನವು
ಹರಿಯ ನೆನೆಸಿದ ನರನು ಅವನು ಕೃತಕರ್ಮನು
ಹರಿಯ ನೆನೆಸದ ನರನು ಜನ್ಮವ್ಯರ್ಥನು || ೪ ||

## ಹರಿಭಕ್ತಿ ಸುಧೆ

ಹರಿಯ ನೆನೆಸಿದ ರಾತ್ರೆ ತೀರ್ಥ ಕ್ಷೇತ್ರಯಾತ್ರೆ
ಹರಿಯ ನೆನೆಸದ ರಾತ್ರೆ ಮಧ್ಯರಾತ್ರೆ
ಪುರಂದರನ ಪ್ರಿಯಸಿರಿ ವಿ ಜ ಯ ವಿ ಠ್ಠ ಲ ನಂಘ್ರಿ
ಮರೆಯದಲೆ ತಾ ನಿತ್ಯ ನೆನೆದವನೆ ಮುಕ್ತ || ೫ ||

### ೪೮. ಇತರ ಸಾಧನವಿಲ್ಲದಿದ್ದರೂ ಸ್ಮರಣೆಬೇಕು

ಬೇಹಾಗ ರಾಗ ಆದಿತಾಳ

ಕಲಿಯುಗದೊಳು ಹರಿನಾಮವ ನೆನೆದರೆ
ಕುಲಕೋಟಿಗಳುದ್ಧರಿಸುವುದು || ಪಲ್ಲ ||
ಸುಲಭದ ಮುಕ್ತಿಗೆ ಸುಲಭನೆಂದೆನಿಸುವ
ಜಲರುಹನಾಭನ ನೆನೆಮನವೆ || ಅನುಪಲ್ಲ ||

ಸ್ನಾನವನರಿಯೆನು ಮೌನವನರಿಯೆನು ಧ್ಯಾನವನರಿಯೆನೆಂದೆನಬೇಡ
ಜಾನಕಿವಲ್ಲಭ ದಶರಥನಂದನ ಗಾನವಿನೋದನ ನೆನೆಮನವೆ || ೧ ||
ಅರ್ಚಿಸಲರಿಯೆನು ಮೆಚ್ಚಿಸಲರಿಯೆನು ತುಚ್ಛನು ನಾನೆಂದೆನಬೇಡ
ಅಚ್ಯುತಾನಂತ ಗೋವಿಂದ ಮುಕುಂದನ ಇಚ್ಛೆಯಿಂದ ನೀ
ನೆನೆಮನವೆ || ೨ ||
ಜಪವೊಂದರಿಯೆನು ತಪವೊಂದರಿಯೆನು ಉಪದೇಶವಿಲ್ಲೆಂದೆನಬೇಡ
ಅಪಾರ ಮಹಿಮ ಶ್ರೀ ಪು ರಂ ದ ರ ವಿ ಠ ಲ ನ ಉಪಾಯದಿಂದಲಿ
ನೆನೆಮನವೆ || ೩ ||

### ೪೯. ಹರಿಕಥೆ ಮಾಡಬೇಕು

ಭಾಮಿನಿ ಷಟ್ಪದಿ

ಕೇಳುವುದು ಹರಿಕಥೆಯ ಕೇಳಲು
ಹೇಳುವುದು ಹರಿಭಕ್ತಿ ಮನದಲಿ
ತಾಳುವುದು ಹಿರಿದಾಗಿ ನಿನ್ನಯ ಚರಣಸೇವೆಯಲಿ
ಊಳಿಗವ ಮಾಡುವುದು ವಿಷಯವ
ಹೂಳುವದು ನಿಜಮುಕ್ತಿ ಕಾಂತೆಯ
ನಾಳುವುದು ಕೃಪೆಮಾಡಿ ರಕ್ಷಿಸು ನಮ್ಮನನವರತ ||
(ಕನಕದಾಸರ ಹರಿಭಕ್ತಿಸಾರದಿಂದ)

## ೫೦. ಹರಿಭಜನೆ ಮಾಡಬೇಕು

ಕಲ್ಯಾಣಿ ರಾಗ ಆದಿತಾಳ

ಹರಿಯ ಭಜನೆ ಮಾಡೊ ನಿರಂತರ || ಪಲ್ಲ ||
ಪರಿಗತಿಗಿದು ನಿರ್ಧಾರ ನೋಡೋ || ಅ. ಪ. ||
ಮೊದಲೆ ತೋರುತಿದೆ ಮಧುರ ವಿಷಯಸುಖ
ಕಡೆಯಲಿ ದುಃಖ ಅನೇಕ || ೧ ||
ವೇದಶಾಸ್ತ್ರಗಳನೋದಿದರೇನು ಸಾಧನಕಿದು ನಿರ್ಧಾರ || ೨ ||
ಸಾರವೊ ಬಹು ಸಂಸಾರ ವಿಮೋಚಕ
ಸೇರೋ ಹ ಯ ವ ದ ನ ನ್ನ || ೩ ||

## ೫೧. ಕಲಿಯುಗದಲ್ಲಿ ಕೀರ್ತನವೇ ಸಾಧನ

ಉಗಾಭೋಗ

ಧ್ಯಾನವು ಕೃತಯುಗದಲ್ಲಿ ಯಜನ ಯಜ್ಞವು ತ್ರೇತಾಯುಗದಲ್ಲಿ
ದಾನವಾಂತಕನ ದೇವತಾರ್ಚನೆಯು ದ್ವಾಪರ ಯುಗದಲ್ಲಿ ಕಲಿಯುಗದಿ
ಗಾನದಿ ಕೇಶವನೆಂದರೆ ಕೈಗೊಡುವನು ರ ೦ ಗ ವಿ ಠ ಲ

## ಸತತ ಕೀರ್ತನೆ ಮಾಡು

ಪೂರ್ವಕಲ್ಯಾಣಿ ರಾಗ ಆದಿತಾಳ

ಎಲೆಮನ ಮುರಾರಿಯನು ಕೊಂಡಾಡು, ಎಲೆಮನ || ಪಲ್ಲ ||
ಕಾಲನ ದೂತರ ಕಾಲಿಗೆ ಬಿದ್ದರೆ | ನಾಳೆಗೆ ನಿಲುವರೆ ನೋಡು || ೧ ||
ಮಂದಿಯ ಮಾತಿಗೆ ಎಂದೆಂದು ಮರುಗದೆ,
ಮುಂದಿನ ಗತಿ ನೀ ನೋಡು || ೨ ||
ರಾಜೀವ ಮುಖಿಯರ ಸೋಗಿಗೆ ಮೆಚ್ಚದೆ
ವಿ ಜ ಯ ವಿ ಠ ಲ ನ ಪಾಡೊ || ೩ ||

## ೫೨. ಕೀರ್ತನೆ ಹೇಗಿರಬೇಕು

ಮಧ್ಯಮಾವತಿ ರಾಗ ಅಟತಾಳ

ತಾಳಬೇಕು ತಕ್ಕ ಮೇಳಬೇಕು || ಪಲ್ಲ ||
ಶಾಂತವೇಳಬೇಕು ಗಾನವನ್ನು ಕೇಳಬೇಕೆಂಬುವರಿಗೆ || ಅ. ಪ. ||

ಗಳಶುದ್ಧಿ ಇರಬೇಕು ತಿಳಿದು ಹೇಳಬೇಕು
ಕಳವಳ ಬಿಡಬೇಕು ಕಳೆಮೊಗ ಇರಬೇಕು ॥ ೧ ॥
ಯತಿಪ್ರಾಸ ಇರಬೇಕು ಗತಿಗೆ ನಿಲ್ಲಿಸಬೇಕು
ರತಿಪತಿ ಪಿತನೊಳು ಅತಿಪ್ರೇಮವಿರಬೇಕು ॥ ೨ ॥
ಹರಿದಾಸನಾಗಲುಬೇಕು ಹರುಷ ಹೆಚ್ಚಲುಬೇಕು
ಪು ರಂ ದ ರ ವಿ ಠ ಲ ನಲ್ಲಿ ಸ್ಥಿರಚಿತ್ತವಿರಬೇಕು ॥ ೩ ॥

## ೫೩. ಹರಿಕಥೆ ಹೇಗೆ ಇರಬೇಕು

ಕಲ್ಯಾಣಿ ರಾಗ ಅಟತಾಳ

ಕೇಳನೊ ಹರಿ ತಾಳನೊ ॥ ಪ. ॥
ತಾಳ ಮೇಳಗಳಿದ್ದು ಪ್ರೇಮವಿಲ್ಲದ ಗಾನ ॥ ಅ. ಪ. ॥
ತಂಬೂರಿ ಮೊದಲಾದ ಅಖಿಳ ವಾದ್ಯಗಳಿದ್ದು
ಕೊಂಬು ಕೊಳಲು ಧ್ವನಿ ಸ್ವರಗಳಿದ್ದು ॥
ತುಂಬುರ ನಾರದರ ಗಾನಕೇಳುವ ಹರಿ
ನಂಬಲಾರ ಈ ಡಂಭಕದ ಕೂಗಾಟ ॥ ೧ ॥
ನಾನಾಬಗೆಯ ರಾಗ ಭಾವ ತಿಳಿದು ಸ್ವರ
ಜ್ಞಾನ ಮನೋಧರ್ಮ ಜಾತಿಯಿದ್ದು ॥
ದಾನವಾರಿಯ ದಿವ್ಯ ನಾಮರಹಿತವಾದ
ಹೀನ ಸಂಗೀತ ಸಾಹಿತ್ಯಕ್ಕೆ ಮನವಿತ್ತು ॥ ೨ ॥
ಅಡಿಗಡಿಗಾನಂದಬಾಷ್ಪ ಪುಳಕದಿಂದ
ನುಡಿನುಡಿಗೆ ಶ್ರೀಹರಿಯೆನ್ನುತ ॥
ದೃಢಭಕ್ತರನು ಕೂಡಿ ಹರಿಕೀರ್ತನೆಪಾಡಿ
ಕಡೆಗೆ ಪು ರಂ ದ ರ ವಿ ಠ ಲ ನೆಂದರೆ ಕೇಳ್ವ ॥ ೩ ॥

## ೫೪. ಹರಿಕಥೆಯ ಸವಿ

ಮೋಹನ ರಾಗ ಅಟತಾಳ

ಹರಿಕಥಾಮೃತಸೇವೆ ಹರಿದಾಸರಲ್ಲದಲೆ
ದುರುಳ ಮೂಢರು ಬಲ್ಲರೇ ॥ ಪ. ॥

ಸ್ತನ್ಯಪಾನದ ಸವಿಯ ಚಿಣ್ಣರರಿಯುವಂತೆ
ಮಣ್ಣುಬೊಂಬೆಯು ಬಲ್ಲುದೆ ||.
ಅನ್ನಪಾನದ ಸವಿಯ ಕೊನೆನಾಲಿಗರಿವಂತೆ
ಅಣಿಮಾಡಿಕೊಡುವಂಥ ಕರ ಬಲ್ಲುದೆ || ೧ ||
ನವನೀರದಾರ್ಭಟಕೆ ನವಿಲುಗಳು ನಲಿವಂತೆ
ಕಾವುಕಾವೆಂಬ ಕಾಕವು ನಲಿವುದೆ ||
ದಿವಸಾಧಿಪತಿಯುದಿಸಲರಳುವಬ್ಜಗಳಂತೆ
ದಿವಸಾಂಧ ಪಕ್ಷಿಗಳು ಹರುಷಿಸುವುವೆ || ೨ ||
ಮೊಲ್ಲೆಮಲ್ಲಿಗೆ ಮುಡಿಯಬಲ್ಲ ಮಾನವರಂತೆ
ಭಲ್ಲೂಕಗಳು ಅದರ ಬಗೆ ಬಲ್ಲವೇ ||
ಫುಲ್ಲಾಕ್ಷ ರಘುಪತಿ ಪುರಂದರ ವಿಠ್ಠಲನ
ಬಲ್ಲ ಸಜ್ಜನರಂತೆ ಖುಲ್ಲರರಿಯುವರೆ || ೩ ||

---

# ೬. ಆರ್ತಭಾವ

ಸಾಮಾನ್ಯವಾಗಿ ಭಕ್ತರಲ್ಲಿ ಉಂಟಾಗುವ ಭಾವಗಳಲ್ಲಿ ಆರ್ತಭಾವವನ್ನು ನಾವು ಇಲ್ಲಿ ಮೊದಲು ವಿಚಾರಿಸಿದ್ದೇವೆ. ಮಾನಸಶಾಸ್ತ್ರದೃಷ್ಟಿಯಿಂದ ಕೂಡ ಈ ಭಾವವೆ ಭಕ್ತರಲ್ಲಿ ಮೊದಲು ಉಂಟಾಗುವದೆಂದು ಹೇಳಬಹುದು. ಜೀವನದಲ್ಲಿ ಅನೇಕ ತೊಂದರೆಗಳುಂಟಾಗಿ ಮನಸು ದುಃಖಿತವಾಯಿತೆಂದರೆ ಭಕ್ತನು ದೇವರಿಗೆ ಮೊರೆಹೋಗುವನು. ಆಗ ತಾನು ಭೋಗಿಸಿದ ಇಲ್ಲವೆ ಭೋಗಿಸುತ್ತಿರುವ ದುಃಖ, ಅಪಮಾನ, ಮುಂತಾದವುಗಳೆಲ್ಲ ಕಣ್ಣಮುಂದೆ ಕಟ್ಟುವವು. ತನ್ನಲ್ಲಿಯ ಕೊರತೆಗಳ ಹಾಗೂ ತನ್ನ ದುರ್ಬಲತೆಯ ಅರಿವು ಅವನಿಗೆ ಆಗುವದು, ತನ್ನ ಕೃತಕರ್ಮಗಳಿಗಾಗಿ ಪಶ್ಚಾತ್ತಾಪವುಂಟಾಗುವದು. ಹಾಗೂ 'ದೇವರೇ ನೀನೇಗತಿ' ಎಂದು ಅವನು ದೇವರಿಗೆ ಮೊರೆ ಇಡುವನು.

ಇದೇ ಆರ್ತಭಾವದ ಮುಖ್ಯ ಲಕ್ಷಣವು. ಆರ್ತ ಅಂದರೆ ದುಃಖಿತ, ಪೀಡಿತ. ಅತ್ಯಂತ ದುಃಖದಿಂದ, ಶಾರೀರಿಕ ಮಾನಸಿಕ ತಾಪಗಳಿಂದ ಬಳಲುತ್ತಿರುವವನೆ ಆರ್ತನು. ಈ ದುಃಖವು ಇನ್ನು ಸಾಕು, ಇದರಿಂದ ನನ್ನನ್ನು ಮುಕ್ತಮಾಡು ಎಂದು ಆರ್ತನು ಪರಮಾತ್ಮನಿಗೆ ಬೇಡಿಕೊಳ್ಳುವನು. ಆ ಭಾವವು ಯಾವ ಪದ್ಯಗಳಲ್ಲಿ ಮುಖ್ಯವೊ ಅಂಥವುಗಳು ಈ ಪ್ರಕರಣದಲ್ಲಿ ಕೊಡಲ್ಪಟ್ಟಿವೆ.

ತಾತ್ಪರ್ಯವೇನಂದರೆ, ರೋಗರುಜೆ, ಜಡ್ಡುಮುಪ್ಪು, ನೋವು ಸಾವು ಮುಂತಾದ ಶರೀರಪೀಡೆಯಿಂದ, ನಿರ್ಧನತೆಯಿಂದ ಹಾಗೂ ದುಷ್ಟ ಸ್ತ್ರೀಪುತ್ರ ಮಿತ್ರಾದಿಗಳಿಂದಾಗುವ ಸಾಂಸಾರಿಕ ಪೀಡೆಯಿಂದ, ತಾನು ಮಾಡಿದ ದುಷ್ಕರ್ಮ ಅಥವಾ ಪಾಪಾದಿಗಳಿಂದಾಗುವ ಮಾನಸಿಕ ಪೀಡೆಯಿಂದ ತಲ್ಲಣಗೊಂಡು ತಳಮಳಿಸಿ ಭಕ್ತನು ಪರಮಶಕ್ತಿಯುತನಾದ ಪರಮಾತ್ಮನಿಗೆ ದುಃಖಿತಭಾವದಿಂದ ಶರಣಾಗತನಾಗಿ ತನ್ನ ಬಳಲಿಕೆಯನ್ನು ಹೋಗಲಾಡಿಸಲು ಬೇಡಿಕೊಳ್ಳುವುದೆ ಆರ್ತಭಾವವೆನಿಸುವದು.

ಮನುಷ್ಯನು ಅನುಭವಿಸುವ ತಾಪಗಳನ್ನು ಮೂರುಬಗೆಯಾಗಿ ವಿಂಗಡಿಸಿರುವರು. ಅವುಗಳಿಗೆ ತಾಪತ್ರಯ ಇಲ್ಲವೆ ತ್ರಿವಿಧತಾಪ ಎಂಬ ಹೆಸರು. ಶರೀರಕ್ಕೆ ಅಥವಾ ಶರೀರದ ಮುಖಾಂತರ ಮನಸಿಗೆ ಆಗುವ ತಾಪಗಳೆಲ್ಲ ಆಧಿಭೌತಿಕ ತಾಪಗಳೆನಿಸುವವು; ದೈವಬಲದಿಂದ ಇಲ್ಲವೆ ಗ್ರಹಬಲದಿಂದ ಆಗುವ ತಾಪಗಳೆಲ್ಲ ಆಧಿದೈವಿಕ ತಾಪಗಳು; ಪ್ರತ್ಯಕ್ಷ ಮನಸ್ಸಿಗೆ ಉಂಟಾಗುವ ಅಪಮಾನಾದಿ, ಪಶ್ಚಾತ್ತಾಪಾದಿಗಳು ಅಧ್ಯಾತ್ಮಿಕ ತಾಪಗಳು.

ಸಾಮಾನ್ಯ ಮನುಷ್ಯನು ಜೀವನದಲ್ಲಿ ತನ್ನ ಇಂದ್ರಿಯಗಳ ಒಲವಿನಂತೆ ವಿಷಯಗಳ ಬೆನ್ನುಬಿದ್ದು ಅವುಗಳಿಂದ ತೃಪ್ತಿಪಡಲು ಯತ್ನಿಸುವನು. ನ ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ, ಎಂಬ ತತ್ವಕ್ಕನುಸರಿಸಿ ಅವುಗಳಿಂದ ಅವನಿಗೆ ತೃಪ್ತಿಯು ಎಂದೂ ಉಂಟಾಗದು. ತದ್ವಿರುದ್ಧವಾಗಿ ವಿಷಯಗಳನ್ನು ದೊರಕಿಸುವುದರಲ್ಲಿ ಅನೇಕ ಎಡರುತೊಡರುಗಳುಂಟಾಗಿ ಮನುಷ್ಯನು ದುಃಖಕ್ಕೀಡಾಗುವನು. ಅವನ ಇಚ್ಛೆಗಳ ಪೂರೈಕೆಯ ಮಾರ್ಗದಲ್ಲಿ ಅಡಿಗಡಿಗೆ ಅಡಚಣಿಗಳುಂಟಾಗುವವು. ಆಗ ಅವನ ಅಹಂಭಾವಕ್ಕೆ ಪೆಟ್ಟುಬಿದ್ದು ತನ್ನ ಕ್ಷುದ್ರತ್ವ, ಅಲ್ಪಮತಿತ್ವ, ಅಲ್ಪಶಕ್ತಿತ್ವ, ಇವುಗಳ ಅನುಭವವಾಗುವದು. ಈ ಅನುಭವದಿಂದ ಜಾಣನಾಗಿ ತನ್ನ ತಾಪತ್ರಯಗಳನ್ನು ಹೋಗಲಾಡಿಸಲು ಅವನು ಯತ್ನಿಸುವನು. ಆ ಕಾಲದಲ್ಲಿ ಈ ತಾಪತ್ರಯಗಳನ್ನು ಕಳೆಯಲು ಪರಾತ್ಪರಶಕ್ತಿಯೊಂದೇ ಸಮರ್ಥವು ಎಂದು ತಿಳಿದು ಭಕ್ತನು ದೇವರಿಗೆ ಮೊರೆ ಇಡುವನು.

ಆರ್ತಭಾವದ ಭಕ್ತಿಯು ಸಹೇತುಕೀ ಭಕ್ತಿಯು, ಯಾಕಂದರೆ ಇದರಲ್ಲಿ ಭಕ್ತನು ತನ್ನ ದುಃಖಗಳು ದೂರಾಗಬೇಕೆಂಬ ಬಯಕೆಯಿಂದ ದೇವರಡಿಗೆ ಹೋಗುವನು. ಇದಲ್ಲದೆ ಆಯಾ ದುಃಖಗಳು ದೂರಾದೊಡನೆ ಪುನಃ ಅವನು ದೇವರನ್ನು ಮರೆತುಬಿಡುವ ಭಯವು ಇರುವದು. ಇದು ಸಹೇತುಕೀ ಇಲ್ಲವೆ ಗೌಣೀಭಕ್ತಿಯೆನಿಸುವದು. ಆದರೆ ಇದರಲ್ಲಿಯೆ ವೈರಾಗ್ಯ ಹಾಗೂ ಮುಮುಕ್ಷುಭಾವದ ಬೀಜಗಳಿರುವವು.

ವಿವಿಧ ದುಃಖಗಳ ಅರಿವು, ದೇಹಾದಿಗಳ ನಶ್ವರತೆಯ ಕಲ್ಪನೆ, ಕಾಮಾದಿ ಅರಿಷಡ್ವರ್ಗಗಳ ಬಲ, ತನ್ನ ಜನ್ಮವು ವ್ಯರ್ಥಹೋಯಿತಲ್ಲ ಎಂಬ ಮುಂತಾದ ಪಶ್ಚಾತ್ತಾಪ, ತಾನು ಹರಿಕೀರ್ತನಾದಿಗಳನ್ನು ಮಾಡಲಿಲ್ಲ ಎಂಬ ಮುಂತಾದ

ಬಗ್ಗೆ ದುಃಖ, ಕೆಟ್ಟ ಹೆಂಡತಿಮಕ್ಕಳು ಗಂಟುಬಿದ್ದು ತನಗೆ ತೊಂದರೆ ಕೊಟ್ಟ ಬಗ್ಗೆ ಮನಸ್ತಾಪ, ತನ್ನ ಗರ್ವ ಮದಮೋಹ ಮುಂತಾದವುಗಳ ಬಗ್ಗೆ ಮನೋವ್ಯಥೆ ಇವೆಲ್ಲ ಈ ಮುಂದಿನ ಪದ್ಯಗಳಲ್ಲಿ ಚಿತ್ರಿತವಾಗಿವೆ ಹಾಗೂ 'ಇವೆಲ್ಲವುಗಳಿಂದ ಬಿಡಿಸಪ್ಪಾ, ದೇವದೇವಾ' ಎಂಬ ಒಂದೇ ಒಂದು ಶೋಕ ಧ್ವನಿಯು ಇವೆಲ್ಲವುಗಳೊಳಗಿಂದ ಹೊರಡುತ್ತಲಿದೆ. ಇದೇ ಆರ್ತಭಾವವು.

## ೫೫. ನಾನು ಆರ್ತನು ನನ್ನನ್ನು ಕಾಪಾಡು

ಪುನ್ನಾಗವರಾಳಿ ರಾಗ ಝಂಪೆತಾಳ

ಯಾಕೆ ಪುಟ್ಟಿಸಿದಿ ನೀ ಸಾಕಲಾರದೆ ಜಗ-
ದೇಕಕಾರಣ ಪುರುಷನೇ, ಕೃಷ್ಣಾ || ಪ ||

ಏಕೋ ವಿಷ್ಣುನೆಂಬೊ ವಾಕು ಚಿಂತಿಸೆ ಇಂಥ
ಕಾಕುಮಾಡುವದುಚಿತವೇ, ಕೃಷ್ಣಾ || ಅ. ಪ. ||

ಒಡಲಿಗನ್ನವ ಕಾಣೆ ಉಡಲು ಅರಿವೆಯು ಕಾಣೆ
ಗಡಗಡನೆ ನಡುಗುತಿಹೆನೋ, ಕೃಷ್ಣಾ |
ಕುಡಿತೆಕೊಡುವವರಿಲ್ಲ ನುಡಿಯಕೇಳುವರಿಲ್ಲ
ಬಡತನವು ಕಂಗೆಡಿಸಿತೋ, ಕೃಷ್ಣಾ |
ಮಡದಿಮಕ್ಕಳ ಬಿಟ್ಟು ಒಡಹುಟ್ಟಿದರ ಬಿಟ್ಟು
ಅಡವಿಪಾಲಾದೆನಲ್ಲೋ, ಕೃಷ್ಣಾ ||
ಕಡೆಹಾಯ್ಸುವರ ಕಾಣೆ ನಡುಮಡುವಿನೊಳು ಕೈಯ
ಬಿಡದೆ ದಡವನು ಸೇರಿಸೋ, ಕೃಷ್ಣಾ || ೧ ||

ಕೊಟ್ಟವರ ಸಾಲವನು ಕೊಟ್ಟು ತೀರಿಸದವರ
ಪೊಟ್ಟೆಯೋಳ್ ಪುಟ್ಟಿದಾಯ್ತೋ, ಕೃಷ್ಣಾ |
ಎಷ್ಟು ಜನ್ಮದಿ ಮನಮುಟ್ಟಿ ಮಾಡಿದ ಕರ್ಮ
ಕಟ್ಟೀಗ ಉಣಿಸುತಿಹುದೋ, ಕೃಷ್ಣಾ |
ಸೃಷ್ಟಿಯೊಳಗೆನ್ನಂಥ ಕೆಟ್ಟ ಪಾಪಿಷ್ಠ ಜನ
ಪುಟ್ಟಿಸಲಿಲ್ಲವೇನೋ, ಕೃಷ್ಣಾ ||
ವಿಠ್ಠಲನೆ ನಿನ್ನ ಮನಮುಟ್ಟಿ ಭಜಿಸಿ ಹಿಂದೆ
ಎಷ್ಟು ಜನ ಬದುಕಿಲ್ಲವೋ, ಕೃಷ್ಣಾ || ೨ ||

ಆಳು ದೇಹವು ಗೇಣು ಕೀಳಾಗಿ ಪಲ್ಗಿರಿದು
ಖೂಳ ಜನರುಗಳ ಮನೆಗೇ, ಕೃಷ್ಣಾ |
ಹಾಳು ಒಡಲಿಗೆ ತುತ್ತು ಕೂಳಿಘೋಗಿ ಅವರನ್ನು
ಓಲೈಸಲಾರೆನಲ್ಲೋ, ಕೃಷ್ಣಾ |
ಬಾಳು ಈ ಪರಿಯಾದ ಮೇಲೆ ಭೂಮಿಯೊಳು ಬಹು
ಕಾಲ ಕಳೆಯುವದುಚಿತವೇ, ಕೃಷ್ಣಾ ||
ಆಲಸ್ಯವಿಲ್ಲದಲೆ ಈ ವೇಳೆಯರಿತು ಎನ
ಪಾಲಿಸಲು,ಬಹು ಕೀರ್ತಿಯೋ, ಕೃಷ್ಣಾ || ೩ ||
ಆರುಗತಿ ನಿನಗಧಿಕರಾರು ಧಾರುಣಿಯೊಳಗೆ
ತೋರಿಸ್ಯೆ ಕರುಣನಿಧಿಯೇ, ಕೃಷ್ಣಾ |
ಈರೇಳು ಲೋಕಕಾಧಾರವಾದವಗೆ ಬಲು
ಭಾರ ನಾನಾದೆನೇನೋ, ಕೃಷ್ಣಾ |
ಮೀರಿ ನಡೆಯಲು ಹದಿನಾರೆರಡು ಪಲ್ಗಳು
ಬೇರು ಕಳಚಿ ಕಳೆನವೋ, ಕೃಷ್ಣಾ |
ತೋರು ಬಂಕಾಪುರದ ಧಾರುಣೀ ಪುರವಾಸ
ವೀರ ನರಸಿಂಹದೇವಾ, ಕೃಷ್ಣಾ || ೪ ||
ಎಂದೆಂದು ಸಿರಿಯರಸನೆಂದು ಶ್ರುತಿ ಸಾರುತಿದೆ
ಬಂದವರಿಗೇನು ಸಿರಿಯೋ ಕೃಷ್ಣಾ |
ಒಂದೊಂದು ನಿಮಿಷ ಯುಗಕಿಂತಧಿಕವಾಗುತಿದೆ
ಮುಂದೋರಧಾಂಗಾಯಿತೋ, ಕೃಷ್ಣಾ |
ಸಂದೇಹವಿಲ್ಲ ಗೋವಿಂದ ಶ್ರೀಪದದಾಣೆ
ತಂದೆ ನೀ ರಕ್ಷಿಸದಿರೇ, ಕೃಷ್ಣಾ ||
ಮುಂದೆ ಭಜಿಸರು ಹೀಗೆಂದು ವಾರ್ತೆಯು ಕೇಳಿ
ಬಂದಿತಪಕೀರ್ತಿಮಾತೋ, ಕೃಷ್ಣಾ || ೫ ||
ಪೃಥ್ವಿಯೊಳಗುದಿಸಿ ಮೂವತ್ತಾರು ವತ್ಸರ
ಈ ತೆರದಿ ಕಾಲ ಕಳೆದೇ, ಕೃಷ್ಣಾ |
ವ್ಯರ್ಥವಾಯಿತು ಜನ್ಮ ಸಾರ್ಥಕಾಗದೆ ಕಣ್ಣು
ಕತ್ತಲೆಯು ಕವಿಯಿತಲ್ಲೋ, ಕೃಷ್ಣಾ |

ಇತ್ತ ಬಾರೆಂದೆನ್ನ ಹತ್ತಿರಕೆ ಕರೆದೊಂದು
ತುತ್ತು ಕೊಡುವರ ಕಾಣೆನೋ ಕೃಷ್ಣಾ ||
ವಿಸ್ತರಿಸಲಾರೆ ಇನ್ನೆತ್ತ ಪೋಗಲಿ ನಿನ್ನ
ಚಿತ್ತವೇತಕೆ ಕರಗದೋ, ಕೃಷ್ಣಾ || ೬ ||

ಹರಿಯಾತ್ರೆ ಮಾಡಲಿಲ್ಲ ಹರಿಮೂರ್ತಿ ನೋಡಲಿಲ್ಲ
ಹರಿದಾಸ ಸಂಗವಿಲ್ಲಾ, ಕೃಷ್ಣಾ |
ಹರಿವಾರ್ತೆ ಕೇಳಲಿಲ್ಲ ಸುರನದಿಯ ಮಿಂಯಲಿಲ್ಲ
ಧರಣಿ ಸಂಚರಿಸಲಿಲ್ಲಾ, ಕೃಷ್ಣಾ |
ಅರಿತರಿತು ಮನ ವಿಷಯಕಾಗಿ ಹರುಷವ ತಾಳಿ
ಬರಿದಾಯಿತಾಯುವೆಲ್ಲಾ, ಕೃಷ್ಣಾ ||
ಬರಿದಾಯಿತಾಯುವೆಲ್ಲಾ, ಕೃಷ್ಣಾ ||
ಮರುತಾಂತರ್ಗತ ಸಿರಿಯರಸ ಹರಿಯೆಂತೆಂದು
ಹರುಷಾಬ್ಧಿಮಗ್ನನಲ್ಲಾ, ಕೃಷ್ಣಾ || ೭ ||

ಹರಿಯಸ್ಮರಣೆಯ ಸ್ಮರಿಸಿ ಸಿರಿತುಳಸಿ ಪುಷ್ಪವನು
ಕರವೆತ್ತಿ ನೀಡಲಿಲ್ಲಾ, ಕೃಷ್ಣಾ |
ಸರುವಜ್ಞರಾಯರು ವಿರಚಿಸಿದ ಗ್ರಂಥವನು
ದರುಶನವೇ ಮಾಡಲಿಲ್ಲಾ, ಕೃಷ್ಣಾ |
ಹರಿ–ನಾರಾಯಣನೆಂದು ಕರವೆತ್ತಿ ಮುಗಿದೊಮ್ಮೆ
ಮೈಮರೆದು ನೆರೆ ನಟಿಸಲಿಲ್ಲಾ, ಕೃಷ್ಣಾ ||
ಸ್ಮರಿಸಲಾರದ ಪಾಪ ಸ್ಮರಣೆಪೂರ್ವಕ ಮಾಡಿ
ಸ್ಥಿರಭಾರನಾದೆನಲ್ಲಾ, ಕೃಷ್ಣಾ || ೮ ||

ದುರುಳಜನರೊಡನಾಡಿ ಹರಿಣಾಕ್ಷಿಯರ ಗೂಡಿ
ಸರಿ ದಾರು ಎಂದು ತಿರುಗೀ, ಕೃಷ್ಣಾ |
ನಿರುತ ಕ್ಷುದ್ರವ ನೆನೆಸಿ ನೆರೆ ಮೋರೆ ಹಿಗ್ಗಿಸಿ
ಹಿರಿ ಕೋಣನಂತೆ ತಿರುಗೀ, ಕೃಷ್ಣಾ |
ಪರರ ಅನ್ನವನುಂಡು ಶರೀರವನು ಪೋಷಿಸಿ
ಸಿರ ಬಲಿತು ಸಿತಿಗೆ ಹಾಯ್ದೂ, ಕೃಷ್ಣಾ ||

ಶರಣವತ್ಸಲನೆಂಬ ಬಿರುದು ಪಸರಿಸುವಂಥ
ಕರುಣವಿನ್ನೆಂದಿಗಿಹುದೋ, ಕೃಷ್ಣಾ || ೯ ||
ಉರಿಯೊಳಗೆ ಬಿದ್ದು ನಾ ಶರೀರವನು ಕಳೆಯಲೊ
ಪರವತವನೇರುರುಳಲೋ, ಕೃಷ್ಣಾ |
ಗರಳ ಮಡುವಿಲಿ ಧುಮುಕಿ ಉರಗಫಣಿ ತುಳಿಯಲೊ
ತಿರಿಶೂಲ ಕಿರಿಹೋಗಲೋ, ಕೃಷ್ಣಾ |
ಕೊರಳಬಂಧವ ಹಾಕಿ ಮರನೇರಿ ಕರಬಿಡಲೊ
ಕರಗಸದಿ ಸಿರಕೊಯ್ಯಲೋ, ಕೃಷ್ಣಾ ||
ಕರುಣವಾರಿಧಿ ಎನ್ನ ಕರಪಿಡಿದು ಸಲಹದಿರೆ
ಧರೆಯೊಳುದ್ಧರಿಪರಾರೋ, ಕೃಷ್ಣಾ || ೧೦ ||
ಎಷ್ಟು ಹೇಳಲಿ ಎನ್ನ ಕಷ್ಟ ಕೋಟಿಗಳನ್ನು
ಸುಟ್ಟದೆ ಬೇಯುತಿದಕೋ, ಕೃಷ್ಣಾ |
ಕಷ್ಟಬಟ್ಟೆ ಮಗನೆಂದು ದೃಷ್ಟಿ ನೀರೊರಸಿ ಎನ
ಹೊಟ್ಟೆಯ ಪಿಡಿವರಾರೋ, ಕೃಷ್ಣಾ |
ಕೃಷ್ಣನಾಮ ವಜ್ರಕ್ಕೆ ಬೆಟ್ಟದುರಿತನಾಗಿ
ತಟ್ಟನೇ ಬಂದು ನಿಂತು ಕೃಷ್ಣಾ ||
ಇಷ್ಟವನು ಸಲಿಸಿ ನೀ ಗುಟ್ಟಲಿ ಶ್ರೀ ರಂಗ
ವಿ ಠ್ಠ ಲ ಎನ್ನಕಾಯೋ, ಕೃಷ್ಣಾ || ೧೧ ||

## ೫೬. ಸಂಸಾರತಾಪದಿಂದ ಬಿಡಿಸು

ಮಧ್ಯಮಾವತಿ ರಾಗ ಅಟತಾಳ

ಸಂಸಾರವೆಂಬ ಮಾರಿಗೆ ಸಿಲುಕಿದೆ || ಪ ||
ಕಂಸಾರಿ ಕರುಣದಿಂದೆನ್ನ ನೋಡಯ್ಯ || ಅ. ಪ. ||
ಬಲಿಗಾಯುತವಾದ ಕುರಿ ಮೆಲುವಂತೆ ಹೆಡ |
ತಲೆ ಮೃತ್ಯುವನರಿಯದೆ ಮತ್ತನಾಗಿಪ್ಪೆ || ೧ ||
ಕಂಡು ಕಂಡು ಪತಂಗವು ಕಿಚ್ಚಿನೊಳು ಬೀಳುವಂತೆ
ಕಂಡ ಕಂಡ ಹೇಯ ವಿಷಯಂಗಳಿಗೆರಗುವೆನಯ್ಯ || ೨ ||
ಪತಿಯಿರಲು ಸತಿಗನ್ಯಾದರಿಸುವಂತೆ ಕಂಡಕಂಡ
ಗತಿ ನೀನಿರಲು ಅನ್ಯವೆ ಗತಿಯೆಂಬೆನಯ್ಯ || ೩ ||

ಒಂದು ಮೊಲಕೆ ಆರು ಹುಲಿ ಬಂದಡರುವಂತೆ
ಬಂದೆಳೆವುತಲಿದೆ ಅರಿಷಡುವರುಗವು || ೪ ||
ಜಲಕ್ಕಾಗಿ ಕೋಡಗ ಪಾಟು ಬಡುವಂತೆ
ಭೂಲೋಗರಿಗಾಗಿ ನಾ ತೊಳಲಿ ಬಳಲುವೆ || ೫ ||
ಶುಕನ ಓದುಗಳಂತೆ ಎನ್ನ ಓದುಗಳಯ್ಯ
ಅಕಟಕಟವೆನಗೆ ಬಂಧವಾಯಿತು ನೋಡೋ || ೬ ||
ಮಿಂದು ನಿಂದಾನೆ ಹುಡಿಯ ಹೊಯ್ದುಕೊಂಬುವಂತೆ
ಮಂದಮತಿಯಾದೆನಯ್ಯ ತಂದೆ ಕರುಣಿಸೊ ಕೃಷ್ಣ || ೭ ||

## ೫೭. ನಾನು ಅಜ್ಞಾನಿಯು

ಕಾಂಬೋಧಿರಾಗ ಝಂಪೆ ತಾಳ

ನಾನೆಲ್ಲಿ ಜ್ಞಾನಿಯು ನಾನೆಲ್ಲಿ ಸುಜನಾ
ಹೀನ ವಿಷಯಗಳುಂಬ ಶ್ವಾನನಂತಿರುವೆ || ಪ ||
ಮೂತ್ರದ ಮನೆಗಾಗಿ ಗಾತ್ರ ಬಳಲಿಸಿ ಮದನ
ಸೂತ್ರಬೊಂಬೆಯು ಎನಿಸಿ ನೇತ್ರದಿಂದ ||
ಪಾತ್ರದವರ ನೋಡಿ ಸ್ತೋತ್ರಮಾಡುತ ಹಿಗ್ಗಿ
ರಾತ್ರಿ ಹಗಲು ಕೆಟ್ಟ ವಾರ್ತೆಯಲ್ಲಿರುವೆ || ೧ ||
ಧನದಾಸೆ ಘನವಾಗಿ ಅಣುಮಹತ್ಕಾರ್ಯದೊಳು
ಶಣಿಸಿ ದಣಿಯಲು ತೃಣವು ದೊರೆಯದಿರಲು ||
ಮನೆಮನೆ ಬಾಯ್ದೆರೆದು ಶುನನಂತೆ ದಿನಗಳೆವೆ
ಮನುಜ ಪಶುವಿಗೆ ಇನ್ನು ಮುನಿಯೆಂಬೆಯೆಂತೋ || ೨ ||
ನಾಲಿಗೆಯ ರುಚಿಯಿಂದ ಸಾಲದಾಯಿತು ಬಯಕೆ
ಕಾಲಕಾಲಕೆ ನೆನೆಸಿ ಹಾಳಾದರೂ ||
ಶೀಲಗಳ ಕಳಕೊಂಡು ಚಾಲುವರಿಯುತ ಪರರ
ಆಲಯದ ಉಚ್ಛಿಷ್ಟ ಮೇಲಾದ ಸವಿಯು || ೩ ||
ಸ್ನಾನಧ್ಯಾನವನರಿಯೆ ಸಾನುರಾಗದಿ ಭಕ್ತಿ
ಕೂನವಿಲ್ಲದ ಡಂಭ ಮೌನಿಯೆನಿಸಿ ||
ನಾನಾ ವಿಷಯ ಮನದಿ ನಾನೆನೆಸುವೆ ನಿತ್ಯ
ಏನಾದರೂ ಕಷ್ಟ ಕಾಣದಂತಿರುತಿಪ್ಪೆ || ೪ ||



೭–೧೪೧೧

ಪತಿತರೊಳು ಎನ್ನಂಥ ಪತಿತರೊಬ್ಬರ ಕಾಣೆ
ಗತಿಯು ನೀನಲ್ಲದೆ ಅನ್ಯರಿಲ್ಲ ||
ಪತಿತಪಾವವನೆಂಬೊ ಬಿರಿದುಂಟುಮಾಡುವ
ಕ್ಷಿತಿಪತಿ ಶ್ರೀಕೃಷ್ಣರಾಯ ನೀನಹುದು || ೫ ||

## ೫೮. ತಾಪತ್ರಯಗಳಿಂದ ಕಾಯಲು

ಪಂತುವರಾಳಿ ರಾಗ ಅಟತಾಳ

ಕಾಯೊ ಕಾಯೊ || ಪ ||
ಕಾಯೊ ಕಾಯೊ ವರವೀಯೊ ವಿಜಯ ಗುರು
ರಾಯ ನೀನಲ್ಲದುಪಾಯ ಮತ್ತಿಲ್ಲ || ಅ. ಪ ||
ತಾಪತ್ರಯ ಬಲು ದೀಪನವಾಗಿದೆ
ನೀ ಪರಿಪಾಲಿಸದೀಪರಿ ಥರವೇ || ೧ ||
ಪಾಪಗಳೆಣಿಸದೆ ಪಾವನ ಮಾಳ್ಪುದು
ಶ್ರೀಪತಿ ಪಡೆದ ಸುರಾಪಗದಂತೆ || ೨ ||
ಸ್ವೀಕಾರ ಮಾಳ್ಪುದು ನಿರಾಕರಿಸದೆ ಬಲು
ವ್ಯಾಕುಲನಾಗಿಹೆ ನೀ ಕರುಣದಲ್ಲಿ || ೩ ||
ದೂರ ನೀ ನೋಡಲು ಆರು ಇಲ್ಲವೊ ಗತಿ
ಕಾರುಣ್ಯದಲಿ ನಿವಾರಿಸೋ ದುರಿತ || ೪ ||
ಒಂದರಿತವನಲ್ಲ ಇಂದಿರೇಶನ ಪಾದ
ದ್ವಂದ್ವವ ತೋರೋ ಹೇ ತಂದೆ ಕರುಣದಿ || ೫ ||
ನಿನ್ನಾಳುಗಳೊಳು ಈ ನರ ಮೂರ್ಖನು
ಏನು ಅರಿಯ ಬಲು ದೀನನಾಗಿಹನೋ || ೬ ||
ಆಲಸ್ಯ ತಾಳದು ಪಾಲಿಸು ವೇ ಣು ಗೋ–
ಪಾ ಲ ವಿ ಠ ಲ ನ ಆಳು ಕೃಪಾಳೋ || ೭ ||

## ೫೯. ನಾನು ಭವರೋಗಪೀಡಿತ-ಕಾಪಾಡು

ಕಾಂಬೋಧಿ ರಾಗ ಝಂಪೆತಾಳ.

ಆವ ರೋಗವು ಎನಗೆ ದೇವ ಧನ್ವಂತ್ರಿ
ಸಾವಧಾನದಿ ಎನ್ನ ಕೈಪಿಡಿದು ನೋಡಯ್ಯ || ಪಲ್ಲ ||

ಹರಿಮೂರ್ತಿಗಳು ಎನ್ನ ಕಂಗಳಿಗೆ ಕಾಣಿಸವು
ಹರಿಯ ಕೀರ್ತನೆ ಕೇಳಿಸದೆನ್ನ ಕಿವಿಗೆ ||
ಹರಿಮಂತ್ರ ಸ್ತೋತ್ರ ಬಾರದು ಎನ್ನ ನಾಲಿಗೆಗೆ
ಹರಿಪ್ರಸಾದ ಜಿಹ್ವೆಗೆ ಸವಿಯಾಗದಯ್ಯ || ೧ ||
ಹರಿಪಾದ ಸೇವೆಗೆನ್ನ ಹಸ್ತಗಳು ಚಲಿಸವು
ಗುರುಹಿರಿಯರಂಘ್ರಿಗೆ ಶಿರಬಾಗದು ||
ಹರಿಯ ನಿರ್ಮಾಲ್ಯವಾಘ್ರಾಣಿಸದು ನಾಸಿಕವು
ಹರಿಯಾತ್ರೆಗಳಿಗೆನ್ನ ಕಾಲೇಳವಯ್ಯ || ೨ ||
ಅನಾಥಬಂಧು ಗೋ ಪಾ ಲ ವಿ ಠ್ಠ ಲ ರೇ ಯ
ಎನ ಭಾಗದ ವೈದ್ಯ ನೀನೆಯಾದಿ ||
ಅನಾದಿಕಾಲದ ಭವರೋಗ ಕಳೆಯಯ್ಯ
ನಾನೆಂದಿಗೂ ಮರೆಯೆ ನೀ ಮಾಡಿದುಪಕಾರ || ೩ ||

## ೬೦. ಪರದಾಸ್ಯ ಬೇಡ

ಮುಖಾರಿ ರಾಗ ಝಂಪೆತಾಳ

ಏನು ಬರೆದೆಯೊ ಬ್ರಹ್ಮ ಇಂತು ನಿರ್ದಯನಾಗಿ || ಪ ||
ಅಭಿಮಾನವನು ತೊರೆದು ನಾ ಪರರ ಬೇಡುವದ || ಅ. ಪ. ||
ಗೇಣೊಡಲು ಹೊರುವುದಕೆ ಹೋಗಿ ಪರರನು ಪಂಚ
ಬಾಣ ಸಮರೂಪ ನೀನೆಂದು ಪೊಗಳಿ ||
ಆಣೆ ನಿನ್ನಾಣೆ ನಾಳೆ ಬಾರೆಂದೆನಲು
ಗಾಣವನು ತಿರುಗುವ ಎತ್ತಿನಂತೆ ಬಳಲುವದು || ೧ ||
ಬಲ್ಲಿದವರ ಮನೆಯ ಬಾಗಿಲ ಕಾದು ಬೇಸತ್ತು
ಸೊಲ್ಲುಸೊಲ್ಲಿಗೆ ಅವರ ಕೊಂಡಾಡುತ ||
ಇಲ್ಲ ಈ ವೇಳೆಯಲಿ ನಾಳೆ ಬಾರೆಂದೆನಲು
ಹಲ್ಲಿಯನು ತಿಂದ ಇಲಿಯಂತೆ ಕೊರಗುವದು || ೨ ||
ಹಿಂದೆ ಬರೆದ ಬರಹ ಹ್ಯಾಗಾದರಾಗಲಿ
ಮುಂದೆನ್ನ ವಂಶದಲಿ ಜನಿಸುವವರ ||
ಸಂದೇಹ ಬೇಡ ಶ್ರೀ ಪು ರಂ ದ ರ ವಿ ಠ ಲ ನೆ
ಕಂದರ್ಪ ಜನಕ ಉಡುಪಿಯ ಕೃಷ್ಣನಾಣೆ || ೩ ||

## ೬೧. ಮಾನವಸೇವೆ ಸಾಕು

ಪೂರ್ವಿಕಲ್ಯಾಣಿರಾಗ ರೂಪಕತಾಳ

ಸಾಕು ಸಾಕು ಮನುಜ ಸೇವೆಯು ಶ್ರೀರಂಗರಾಯಾ || ಪ ||
ಸಾಕು ಸಾಕು ಮನುಜ ಸೇವೆ ಮಾಡಿ ಮಾಡಿ ದಣಿದೆನಯ್ಯ
ಬೇಕು ನಿನ್ನ ಪಾದಭಜನೆ ಲೋಕದೊಡೆಯ ರಂಗರಾಯಾ || ಅ. ಪ. ||

ಹೊತ್ತರೆದ್ದು ಪೋಗಿ ಪರರ ಚಿತ್ತವೃತ್ತಿಯನ್ನೆ ಅರಿತು
ನಿತ್ಯದಲ್ಲಿ ಮನೆಯ ಕೆಲಸ ಭೃತ್ಯನಂತೆ ಮಾಡಿ ದುಡಿದು ||
ರಿಕ್ತಹಸ್ತದಿ ಮನೆಗೆ ಸೇರುವೆ, ಉದರದ ನಿ-
ಮಿತ್ತ ಕಂಡ ಕಡೆಗೆರಗುವೆ, ತಂದು ಅಪರರಾತ್ರಿಯಲಿ
ತಿಂದು ಒರಗುವೆ || ೧ ||

ಸ್ನಾನ-ಮೌನ ನಿತ್ಯ ಸಂಧ್ಯಾನ ನೇಮಗಳನೆ ತೊರೆದು
ಹೀನನಾಗಿ ಕೆಟ್ಟ ಜನ್ಮಗಳಲ್ಲಿ ತಿರುಗಿ ತಿರುಗಿ ||
ಶ್ವಾನನಂತೆ ದಿನವ ಕಳೆದೆನೊ, ದುರಾಸೆಯಲ್ಲಿ
ಮಾನ ಬಿಟ್ಟು ಕಡೆಗೆ ಎಳ್ಳು ಕಾಳಿನಷ್ಟು ಸುಖವ ಕಾಣೆನೋ || ೨ ||

ಒಡಲ ಆಸೆಗಾಗಿ ಮೀನು ಒಡನೆ ಬಿದ್ದು ಜೇನಿನೊಳಗೆ
ತುಡುಕಿ ಮಿಡುಕುವಂತೆ ಬಾಯ ಬಿಡುತಲಿಹೆನೊ ಬಿಸರುಹಾಕ್ಷಾ ||
ಬಿಡಿಸೊ ಎನ್ನ ಬಂಧಪಾಶವ ಹೇ ಕರುಣ ನಿಧಿಯೆ
ಕೊಡಿಸೊ ನಿನ್ನ ಭಕ್ತರ ಸಂಗವ ಸಹಸ್ರ ನಾಮದೊಡೆಯ
ವೆಂಕಟಾದಿಕೇಶವ || ೩ ||

## ೬೨. ಪಶ್ಚಾತ್ತಾಪದ ಪ್ರಕಟನೆ

ಸುರಟಿ ರಾಗ ಆದಿ ತಾಳ

ಭ್ರಾಂತನಾದೆನಲ್ಲ, ಪರಗತಿ, ಚಿಂತೆಯೆಂಬೊದಿಲ್ಲಾ || ಪ ||
ಶ್ರೀಕಾಂತನ ಪದ ಸಂತತ ಪೂಜಿಸಿ ಸಂತೋಷಿಸಲಿಲ್ಲ || ಅ. ಪ. ||
ಮೋಸಹೋದೆನಲ್ಲ, ವಿಷಯದ, ಆಸೆ ತೀರಲಿಲ್ಲ
ಹೇಸಿಕೆ ಭವಸುಖ ಲೇಸೆಂದೆನಿಪ ವಿಲಾಸವಾಯಿತಲ್ಲಾ ಬರಿದೆ || ೧ ||
ಮಂದನಾದೆನಲ್ಲ, ದಿನಗಳು, ಸಂದುಹೋದವಲ್ಲ

ಮಂದರಧರ ಮುಕುಂದನಂಘ್ರಿಯ ಹೊಂದಿ ಸುಖಿಸಲಿಲ್ಲ
|| ಬರಿದೆ || || ೨ ||

ದೇಹ ನಿತ್ಯವಲ್ಲ, ಮಮತೆ, ಗೇಹ ವ್ಯರ್ಥವಲ್ಲ
ಮೋಹವಸ್ತು ಗೋ ಪಾ ಲ ವಿ ಠ ಲ ಬಲ್ಲ ಮೋಹದ
ರಸವೆಲ್ಲ || ಬರಿದೆ || || ೩ ||

## ೭೩. ನಾನು ಅಪರಾಧಿ

ಕಾಂಬೋಧಿರಾಗ ಝಂಪೆ ತಾಳ

ಬಿನ್ನಹಕೆ ಬಾಯಿಲ್ಲವಯ್ಯ
ಅನಂತ ಅಪರಾಧ ಎನ್ನೊಳಗೆ ಇರಲಿಕ್ಕೆ || ಪ ||
ಶಿಶುಮೋಹ ಸತಿಮೋಹ ಜನನಿ ಜನಕರ ಮೋಹ
ರಸಿಕ ಭ್ರಾತರ ಮೋಹ ರಾಜಮೋಹಾ ||
ಪಶುಮೋಹ ಭೂಮೋಹ ಬಂಧುವರ್ಗದ ಮೋಹ
ಅಸುರಾರಿ ನಿನ್ನ ಮರೆತೆನೊ ಅಕಟ ಕಾಯೋ || ೧ ||
ಅನ್ನಮದವರ್ಥಮದವಖಿಳ ವೈಭವದ ಮದ
ಮುನ್ನ ಪ್ರಾಯದ ರೂಪ ಮೋಹ ಮದವೋ ||
ತನ್ನ ಸತ್ವದಾ ಮದ ಧಾತ್ರಿವಶವಾದ ಮದ
ಇನ್ನು ತನಗೆದುರಿಲ್ಲವೆಂತೆಂಬೊ ಮದದಿಂದ || ೨ ||
ಇಷ್ಟು ದೊರಕಿದರೆ ಮತ್ತಿಷ್ಟು ಬೇಕೆಂಬಾಸೆ
ಅಷ್ಟು ದೊರಕಿದರು ಮತ್ತಷ್ಟರಾಸೆ ||
ಕಷ್ಟ ಬೇಡೆಂಬಾಸೆ ಕಡು ಸುಖವ ಕಾಂಬಾಸೆ
ನಷ್ಟ ಜೀವನದಾಸೆ ಪು ರಂ ದ ರ ವಿ ಠ ಲ || ೩ ||

## ೭೪. ಹೆಂಡತಿಯಿಂದ ತಾಪ

ನಾದನಾಮಕ್ರಿಯೆ ರಾಗ ಅಟತಾಳ.

ಹೆಂಡತಿ ಪ್ರಾಣ ಹಿಂಡುತಿ ಎನ್ನ
ಕೊಂಡ ಕೋತಿಯಂತೆ ಕುಣಿಸುತ್ತಾಡಿಸುತಿ || ಪ ||
ಹೊತ್ತರೆ ಏಳುತಿ ಹೊರಗೆ ತಿರುಗಾಡುತಿ

ಹೊತ್ತು ಹೋಯಿತು ಭತ್ತ ತಾ ಎನ್ನುತಿ ||
ಉತ್ತಮ ಹಿರಿಯರ ಮಾತು ಮೀರುತಿ
ಮೃತ್ಯುದೇವತೆಯಂತೆ ಮನೆಯಲ್ಲಿ ಕುಳಿತಿ || ೧ ||
ಇಲ್ಲದ್ದು ಬೇಡುತಿ ಸುಳ್ಳು ಮಾತಾಡುತಿ
ಒಳ್ಳೆ ಊಟವನುಂಡು ಕುಳಿತೇನಂತೀ ||
ಎಳ್ಳಷ್ಟು ಕೆಲಸವ ಮಾಡಲೊಲ್ಲೆನಂತಿ
ಎಲ್ಲೆಲ್ಲಿ ತಲೆಯಿತ್ತ ಥಾಂಗೆ ಮಾಡುತಿ || ೨ ||
ಹಿರಿಯತನಕೆ ಮನಗರುವಿಕೆ ಮಾಡುತಿ
ಪರಿವಾರದವರನೆಲ್ಲವ ಕಾಡುತಿ ||
ಸಿರಿವರದ ಪುರಂದರ ವಿಠಲನಿಗೆ ದೂರಾಗಿ
ದುರಿತಕ್ಕೆ ನೀ ಗುರಿಯಾಗಿ ನಿಲ್ಲುತ್ತೀ || ೩ ||

## ೭೫. ಹಾ ಕೆಟ್ಟೆನು ಕೃಪೆಮಾಡು

ಮುಖಾರಿ ರಾಗ ಝಂಪೆತಾಳ

ಯಾಕೆನ್ನೊಳಿಂತು ಕೃಪೆಯಿಲ್ಲ ಹರಿಯೇ
ಕಾಕುಮಾಡದೆ ಕಾಯೊ ಭವದೊಳು ಬಳಲಿದೆನು || ಪ ||
ಕಂದರ್ಪಬಾಧೆಯಿಂ ಮಾನಿನಿರೊಶನಾಗಿ
ಮಂದಮತಿಯಿಂದ ಬಲು ಮರುಳಾದೆನು ||
ಸಂದಿತ್ತೆ ಯೌವ್ವನವು ಬುದ್ಧಿಬಂದಿತು ಈಗ
ಸಂದೇಹಪಡದೆ ನೀ ಕರುಣಿಸೈ ಎನ್ನ || ೧ ||
ಹೆಂಡತಿಯು ಕಡೆಗಣ್ಣಿನಿಂದ ನೋಡುವಳೀಗ
ಹಿಂಡುಮಕ್ಕಳು ಎನ್ನತಿನ್ನುತಿಹರು ||
ಮುಂಡ ಮೋಚಿದೆ ನಾನು ಇನ್ನಾರು ಗತಿಯೆನಗೆ
ಪುಂಡರೀಕಾಕ್ಷ ನೀ ಪಾಲಿಸೈ ತಂದೆ || ೨ ||
ಆಟ್ಟಮೇಲೊಲೆಯುರಿಯುವಂತೆ ಹರಿ ಎನಗೀಗ
ಕೆಟ್ಟ ಮೇಲೆ ಮತಿಯು ಬಂದಿತಯ್ಯ ||
ನೆಟ್ಟನೆ ಪುರಂದರ ವಿಠಲನೇ ಕೈಬಿಡದೆ
ದೃಷ್ಟಿಯಲಿ ನೋಡಿ ಪರಿಪಾಲಿಸೈ ಎನ್ನ || ೩ ||

## ೬೬. ನೀನೇ ಕಾಯಬೇಕು

ಬಿಲಹರಿರಾಗ ಅಟತಾಳ

ಯಾರಿಗೆ ಯಾರುಂಟು ಎರವಿನ ಸಂಸಾರ
ನೀರ ಮೇಲಣ ಗುಳ್ಳೆ ನಿಜವಲ್ಲ ಹರಿಯೆ ॥ ಪ ॥
ಬಾಯಾರಿತು ಎಂದು ಬಾವಿ ನೀರಿಗೆ ಪೋದೆ
ಬಾವಿಲಿ ಜಲಬತ್ತಿ ಬರಿದಾಯ್ತು ಹರಿಯೇ ॥ ೧ ॥
ಬಿಸಿಲು ಗಾಳಿಗಾಗಿ ಮರದ ನೆರಳಿಗೆ ಪೋದೆ
ಮರಬಗ್ಗಿ ಸಿರದಮೇಲೊರಗಿತು ಹರಿಯೇ ॥ ೨ ॥
ಅಡವಿಯೊಳ್ಮನೆ ಮಾಡಿ ಗಿಡಕೆ ತೊಟ್ಟಿಲ ಕಟ್ಟಿ
ತೊಟ್ಟಿಲಿನ ಶಿಶು ಮಾಯವಾಯಿತು ಹರಿಯೆ ॥ ೩ ॥
ತಂದೆ ಶ್ರೀ ಪುರಂದರ ವಿಠಲ ನಾರಾಯಣ
ನಾ ಸಾಹೊತ್ತಿಗೆ ನೀ ಕಾಯೊ ಹರಿಯೇ ॥ ೪ ॥

## ೬೭. ನನ್ನ ಕರ್ಮ ನನ್ನನ್ನು ಕಾಡುವದು

ರೇಗುಪ್ತಿರಾಗ ಅಟತಾಳ

ನಾ ಮಾಡಿದ ಕರ್ಮ ಬಲವಂತವಾದರೆ
ನೀ ಮಾಡುವದೇನೋ ದೇವಾ ॥ ಪ ॥
ಸಾಮಾನ್ಯವಲ್ಲವಿದು ಬ್ರಹ್ಮ ಬರೆದ ಬರಹ
ನೇಮದಿಂದಲಿ ಎನ್ನ ಫಣೆಯಲ್ಲಿ ಇಹುದಕೆ ॥ ಅ ಪ ॥
ಅಥಿತಿಗಳಿಗೆ ಅನ್ನ ಕೊಟ್ಟವನಲ್ಲ ಪರ
ಸತಿಯರ ಸಂಗ ಘಳಿಗೆ ಬಿಟ್ಟವನಲ್ಲ ॥
ಮತಿಹೀನನಾಗಿ ಮರುಳಾಗಿದ್ದೆನೊ ದೇವಾ
ಗತಿಯಾವುದೈ ಎನಗೆ ಗರುಡವಾಹನ ಕೃಷ್ಣಾ ॥ ೧ ॥
ಪಾನ ಅಶನಕೆ ನಾನಗ್ರಗಣ್ಯನು ಆಗಿ
ಸ್ನಾನ ಜಪವು ನಿತ್ಯ ಕರ್ಮಗಳನು ನೀಗಿ ॥
ದಾನವಾಂತಕ ನಿನ್ನ ಧ್ಯಾನವ ಮಾಡದೆ
ಶ್ವಾನನಂತೆ ಮನೆಮನೆ ತಿರುಗುತಲಿದ್ದೆ ॥ ೨ ॥

ಇನ್ನಾದರು ನಿನ್ನ ದಾಸರ ಸಂಗವಿತ್ತು
ಮನ್ನಿಸಿ ದಯಮಾಡೊ ಪರಮ ಪುರುಷ ಹರಿ ||
ಅನ್ಯರೊಬ್ಬರ ಕಾಣೆ ಆದರಿಸುವರಿಲ್ಲ
ಪನ್ನಂಗಶಯನ ಶ್ರೀ ಪುರಂದರ ವಿಠಲ

## ೬೮. ನೀನೇ ಗತಿ

ಕಾಂಬೋದಿ ರಾಗ ತ್ರಿಪುಟ ತಾಳ

ಎಂದೆಂದು ನಿನ್ನ ಪಾದವೆ ಗತಿ ಎನಗೆ | ಗೋ–
ವಿಂದ ಬಾರಯ್ಯ ಎನ್ನ ಹೃದಯ ಮಂದಿರಕೆ || ಪ ||
ಮೊದಲಿನಿಂದ ಬರಬಾರದೆ ನಾ ಬಂದೆ
ಇದರಿಂದ ಗೆದ್ದು ಪೋಗೊದು ಕಾಣೆ ಮುಂದೆ ||
ತುದಿ ಮೊದಲಿಲ್ಲದೆ ಪರರಿಂದ ನೊಂದೆ
ಪದುಮನಾಭನೆ ತಪ್ಪು ಕ್ಷಮೆ ಮಾಡೊ ತಂದೆ || ೧ ||
ಹೆಣ್ಣು ಹೊನ್ನು ಮಣ್ಣಿನಾಸೆಗೆ ಬಿದ್ದು
ಪುಣ್ಯಪಾಪವನು ನಾ ತಿಳಿಯದೆ ಇದ್ದು ||
ಅನ್ಯಾಯವಾಯಿತು ಇದಕೇನು ಮದ್ದು
ನಿನ್ನ ಧ್ಯಾನ ಎನ್ನ ಹೃದಯದೊಳಿದ್ದು || ೨ ||
ಹಿಂದೆ ನಾ ಮಾಡಿದ ಪಾಪವ ಕಳೆಯೊ
ಮುಂದೆನ್ನ ಜನ್ಮ ಸಫಲ ಮಾಡಿ ಪೊರೆಯೊ ||
ತಂದೆ ಶ್ರೀ ಪುರಂದರ ವಿಠಲ ನಿನ್ನ ನೆರೆಯೊ
ಎಂದೆಂದಿಗಾನಂದ ಸುಖವನ್ನೆ ಗರೆಯೊ || ೩ ||

# ೭. ವೈರಾಗ್ಯಭಾವ



ಜೀವನದಲ್ಲಿ ದುಃಖಪ್ರಸಂಗಗಳುಂಟಾಗಿ ಅವು ಬೇಡಾಗುವಷ್ಟು ಹೆಚ್ಚಾದವೆಂದರೆ, ಸಂಕಟದಲ್ಲಿ ವೆಂಕಟರಮಣನು ನೆನಪಾಗಿ, 'ಅವುಗಳನ್ನು ಹೋಗಲಾಡಿಸು ಸ್ವಾಮೀ,' ಎಂಬ ಆರ್ತಭಾವವು ಒಡಮೂಡಿ ಮನಸು ತಲ್ಲಣಗೊಳ್ಳುವದು. ಮುಂದೆ ಈ ವಿಷಯಗಳಲ್ಲಿಯ ರುಚಿಯೇ ಕಡಿಮೆಯಾಗಿ ಇವುಗಳಲ್ಲಿ ಸುಖವಿಲ್ಲ, ಇವುಗಳನ್ನು ಬಿಟ್ಟುಬಿಡಲಿಕ್ಕೆಬೇಕು, ಇವುಗಳಲ್ಲಿ ಅರ್ಥವಿಲ್ಲ, ಇವೆಲ್ಲ ಕ್ಷಣಿಕ, ಅಲ್ಪ, ದುಃಖ ಮೂಲಗಳಿವು ಎಂಬ ಭಾವವು ಉಂಟಾಗುವದು, ಇದೇ ವಿರಾಗವು. ಇಂದ್ರಿಯ ವಿಷಯಗಳಲ್ಲಿಯ ರಾಗವು, ಅನುರಾಗವು, ಪ್ರೀತಿಯು ಕಡಿಮೆಯಾಯಿತೆಂದರೆ ಅದೇ ವೈರಾಗ್ಯವು. ಈ ಭಾವವುಂಟಾದೊಡನೆ ವಿಷಯನಿಷೇಧವು ಪ್ರಾರಂಭವಾದರೂ ಇನ್ನೂ ನಿಜ ಸುಖದ ತೀವ್ರ ಇಚ್ಛೆಯುಂಟಾಗಿರುವದಿಲ್ಲ. ಅಂಥ ಇಚ್ಛೆಯುಂಟಾಯಿತೆಂದರೆ ಅದು ಮುಂದೆ ಮುಮುಕ್ಷುತ್ವವೆನಿಸುವದು

ಆರ್ತಭಾವವುಳ್ಳ ಮನುಷ್ಯನ ಮನಸಿನಲ್ಲಿ ತ್ರಿವಿಧತಾಪಗಳಿಂದ ಹುಟ್ಟಿದ ಉಪರತಿಯು ಅಥವಾ ಹೇಯಭಾವವು ವೈರಾಗ್ಯಭಾವದ ಮೂಲವು. ಮನುಷ್ಯನು ಸಾಮಾನ್ಯತಃ ಎಲ್ಲ ಇಂದ್ರಿಯ ವಿಷಯಗಳಲ್ಲಿ ಅನುರಾಗವುಳ್ಳವನು, ಪ್ರೀತಿಯುಳ್ಳವನು. ಆದರೆ ಅನುಭವದಿಂದ ಇಲ್ಲವೆ ಬುದ್ಧಿಯಿಂದ, ಈ ಇಂದ್ರಿಯಸುಖಗಳೆಲ್ಲ ನಶ್ವರವಿರುವವು, ದುಃಖಬೀಜಗಳಿರುವವು, ಇವುಗಳಿಂದ ತೊಂದರೆ ತೊಡಕುಗಳೇ ಉಂಟಾಗುವವು ಹೊರತು ನಿಜವಾದ ಸುಖವು ದೊರೆಯಲಾರದು, ಎಂಬ ಮನವರಿಕೆಯುಂಟಾಗಿ ಅದು ನೆಲೆಗೊಂಡಿತೆಂದರೆ ವೈರಾಗ್ಯಭಾವವು ಸ್ಥಿರವಾಯಿತೆನ್ನಬೇಕು.

ಸಿರಿಸಂಪತ್ತು, ಐಶ್ವರ್ಯ, ಅಧಿಕಾರ, ಸುಂದರ ಸ್ತ್ರೀಪುತ್ರಾದಿಗಳಿಂದ ಸುತ್ತುಗಟ್ಟಲ್ಪಟ್ಟರೂ ವಿರಾಗಿಯು ಅವುಗಳಿಂದ ಮೋಹಿತನಾಗದೆ, ಇವೆಲ್ಲ

ಕೇವಲ ಮೋಹಜಾಲಗಳು, ಇವುಗಳಲ್ಲಿ ತಾನು ಸಲುಕಬಾರದು, ಮುಖ್ಯ ಸಂಗತಿಯು ಅಥವಾ ನಿಜಸುಖಸಾಧನವು ಇದಲ್ಲ ಎಂಬುದನ್ನು ತಿಳಿದು ನಡೆಯುವನು. ಇವುಗಳನ್ನೆಲ್ಲ ತ್ಯಜಿಸಿ ಅವನೆಲ್ಲಿಯಾದರೂ ಓಡಿಹೋಗಬೇಕೆಂದರ್ಥವಲ್ಲ. ಹಾಗೆ ಬಿಟ್ಟುಹೋಗುವವರೂ ಹೋಗಬಹುದು. ಆದರೆ ಹಾಗೆ ಎಲ್ಲ ವಿರಾಗಿಗಳು ಬಿಟ್ಟುಹೋಗೇತೀರಬೇಕು, ಇಲ್ಲವೆ ಬಿಟ್ಟುಹೋದರೆ ಮಾತ್ರ ವಿರಾಗಿಗಳೆನಿಸುವರು ಎಂದು ದಾಸರು ಹೇಳುವದಿಲ್ಲ. ದಾಸರು ಜನಕರಾಜನ ಹೆಸರುಗೊಂಡು ವಿರಾಗದ ಉದಾಹರಣೆಯನ್ನು ಕೊಟ್ಟಿರುವರು. ದಾಸರಲ್ಲನೇಕರು ಸಂಸಾರದಲ್ಲಿಯೇ ಇದ್ದರು, ಆದರೆ ಪೂರ್ಣವಿರಾಗಿಗಳಿದ್ದರು. ಅವರ ವೈರಾಗ್ಯವು 'ಉದರ ವೈರಾಗ್ಯ'ವಿರಲಿಲ್ಲ, ನಿಜವಾದ ವೈರಾಗ್ಯವಿತ್ತು.

ನಿಜವಾದ ವೈರಾಗ್ಯವೆಂದರೆ ಅನಾಸಕ್ತಿ. ಯಾವದೊಂದು ವಿಷಯದ ಸೇವನೆಯಲ್ಲಿ ಆಸಕ್ತಿ ಇತ್ತೆಂದರೆ ಅದು ದುಃಖಮೂಲವಾಗುವದು. ವಿಷಯ ಸೇವನೆಯು ದುಃಖದ ಮೂಲವಲ್ಲ, ಆ ವಿಷಯದಲ್ಲಿಯ ಆಸಕ್ತಿ ಹಾಗೂ ಆ ಸೇವನಕರ್ಮದಲ್ಲಿಯ ಆಸಕ್ತಿ ಇವು ದುಃಖಮೂಲಗಳಿರುವವು. ಆಸಕ್ತಿ ಅಂದರೆಯೆ ರಾಗ ಅಥವಾ ಅನುರಾಗ ಅಥವಾ ಪ್ರೀತಿ. ಇಂದ್ರಿಯಗಳಿರುವವರೆಗೆ ವಿಷಯಗಳ ಸೇವನೆ ಬಿಟ್ಟದ್ದಲ್ಲ. ಆದರೆ ಅವುಗಳಲ್ಲಿರುವ ಆಸಕ್ತಿಯನ್ನು ಕಡಿಮೆಮಾಡುತ್ತಹೋದಂತೆ ವೈರಾಗ್ಯವು ನೆಲೆಗೊಂಡು ದುಃಖಬೀಜವು ಹುರಿದು ನಷ್ಟವಾಗಿಹೋಗುವದು. ಇತ್ತ ವಿಷಯಸುಖಗಳ ಬಗ್ಗೆ ವಿರಾಗವು ಹೆಚ್ಚುತ್ತಹೋದಂತೆ ನಿಜಸುಖದ ಬಗ್ಗೆ ಆಸ್ಥೆಯು ಹೆಚ್ಚಾಗುತ್ತ ನಡೆಯುವದು. ಅದೇ ಮುಮುಕ್ಷುಭಾವದ ಪ್ರಥಮ ಸೋಪಾನವು.

ಇಲ್ಲಿ ಪದ್ಯಗಳನ್ನು ಉದಹರಿಸುವಾಗ ಮುಖ್ಯವಾಗಿ ವೈರಾಗ್ಯಭಾವವೆ ಇದ್ದವುಗಳನ್ನು ಆರಿಸಿರುವೆವಾದರೂ ಹಲವುಗಳಲ್ಲಿ ಆರ್ತಭಾವದ ಇಲ್ಲವೆ ಮುಮುಕ್ಷುಭಾವದ ಛಾಯೆಯು ತಲೆದೋರಿದ್ದು ಕಂಡುಬರುವದು. ಅದು ಅನಿವಾರ್ಯವೇ ಸೈ.

ದೇಹ, ಸ್ತ್ರೀಪುತ್ರಾದಿಗಳು, ಸಿರಿ ಸಂಪತ್ತು, ವಿಷಯಗಳು ಇವೆಲ್ಲ ನಶ್ವರವಿರುವವು. ಇವು ಮೋಹಜಾಲಗಳಿರುವವು, ಇವಾವೂ ನಮ್ಮ ಸಂಗಡ ಬರಲಾರವು, ಮನುಷ್ಯನು ಬತ್ತಲೆ ಹುಟ್ಟಿ ಬತ್ತಲೆ ಸಾಯುವನು, ಆದುದರಿಂದ

ವಿಷಯಾದಿಗಳಿಂದ ಮೋಹಿತನಾಗದೆ ಮನುಷ್ಯನು ವರ್ತಿಸಬೇಕು ಎಂದು ಈ ಪದ್ಯಗಳಲ್ಲಿ ಬೋಧವಿದೆ. ಕೇವಲ ವಿಷಯಗಳ ಬೆನ್ನುಬಿದ್ದರೆ ಮನುಷ್ಯ ಜನ್ಮವು ವ್ಯರ್ಥ ಹೋಗುವದು, ಅನೇಕ ಅಪಮಾನಗಳನ್ನು ಸಹನಮಾಡ ಬೇಕಾಗುವದು, ಅನ್ಯರ ಋಣದಲ್ಲಿ ಸಾಯಬೇಕಾಗುವದು, ಆದುದರಿಂದ ವೈರಾಗ್ಯಭಾವದಿಂದ ವರ್ತಿಸಬೇಕು. ನಮ್ಮ ಸುತ್ತಲೂ ಇದ್ದವರೆಲ್ಲ ತಮ್ಮ ಸ್ವಾರ್ಥವನ್ನು ಸಾಧಿಸುವರು, ಹೆಚ್ಚಿನದೇನೂ ಇಲ್ಲ. ನಾವು ಎಚ್ಚರಿಕೆಯಿಂದ ಇದ್ದು ಪರಮಾರ್ಥವನ್ನು ಸಾಧಿಸಬೇಕೆಂದು ದಾಸರು ಹೇಳುವರು.

ಇಂಥ ಸ್ಥಿತಿಯಲ್ಲಿ ಅಪಮಾನ, ನಿಂದೆ ಇವು ಅಪಕಾರಕವಲ್ಲ, ಉಪಕಾರಕವೇ. ಯಾಕಂದರೆ ಅವು ನಮ್ಮನ್ನು ಅಂತರ್ಮುಖ ಮಾಡುವವು ಮತ್ತು ನಮ್ಮ ಅಂತಃಶುದ್ಧಿಗೆ ಕಾರಣವಾಗುವವು.

ಇಷ್ಟು ವೈರಾಗ್ಯವೆಂದರೆ 'ಉದರ ವೈರಾಗ್ಯ' ಮಾತ್ರ ಇರಕೂಡದು ! ನಿಜವಾದ ವೈರಾಗ್ಯ ಬೇಕೆಂದು ದಾಸರು ಬಹಳ ಮನೋಹರವಾಗಿ ಹೇಳಿರುವರು. ನಕಲಿ ವೈರಾಗ್ಯದಿಂದ ಭವರೋಗಪೀಡೆಯು ಹೆಚ್ಚಾಗುವದೇ ಹೊರತು ಕಡಿಮೆಯಾಗಲಾರದು. ವಿರಾಗಪೂರ್ಣರಾಗಿ, ಎಲ್ಲ ಚಿಂತೆಗಳನ್ನು ಬಿಟ್ಟು, ಪರಮಾತ್ಮಚಿಂತನವನ್ನು ಮಾಡಿದರೆ ನಾವು ನಿಜಸುಖವನ್ನು ಕಾಣುವೆವು ಹಾಗೂ ಜನಕರಾಜನು ವರ್ತಿಸಿದಂತೆ ವರ್ತಿಸಲು ಸಮರ್ಥರಾಗುವೆವು.

## ೬೯. ದೇಹವು ನಶ್ವರ

ಭೈರವಿರಾಗ ಅಟತಾಳ

ಹಿಗ್ಗುವಿ ಯಾಕೋ ಈ ದೇಹಕ್ಕೆ ಕುಗ್ಗುವಿ ಯಾಕೋ || ಪ ||
ಹಿಗ್ಗುವ ತಗ್ಗುವ ಮುಗ್ಗುವ ನೆಗ್ಗುವ
ಅಗ್ನಿಯೊಳಗೆ ಬಿದ್ದು ದಗ್ಧವಾಗುವ ದೇಹಕೆ || ಅ. ಪ. ||
ಸತಿ ಪುರುಷರು ಕೂಡಿ ರತಿ ಕ್ರೀಡೆಗಳನಾಡಿ
ಪತನವಾದಿಂದ್ರಿಯ ಪ್ರತಿಮೆಯ ದೇಹಕ್ಕೆ || ೧ ||
ಆಗ-ಭೋಗಗಳನ್ನು ಆಗುಮಾಡುತಲಿಪ್ಪ
ರೋಗಬಂದರೆ ಬಿದ್ದು ಹೋಗುವ ದೇಹಕ್ಕೆ || ೨ ||
ಪರರ ಸೇವೆಯ ಮಾಡಿ ನರಕಭಾಜನನಾಗಿ
ಮರಳಿಮರಳಿ ಬಿದ್ದು ಹೋಗುವ ದೇಹಕ್ಕೆ || ೩ ||

ಸೋರುವದೊಂಭತ್ತು ಬಾಗಿಲದಿಂ ಮಲ
ನೀರಿಲ್ಲದಿದ್ದರೆ ನಾರುವ ದೇಹಕ್ಕೆ || ೪ ||
ಪುರಂದರ ವಿಠ್ಠಲನ ಚರಣಕಮಲಕ್ಕೆ
ಎರಗದೆ ಇರುತಿಹ ಗುರುವಾದ ದೇಹಕ್ಕೆ || ೫ ||

## ೭೦. ಸಂಗಡ ಏನೂ ಬಾರದು

ಧನಾಸಿರಾಗ ಆದಿತಾಳ

ಏನು ಬರುವದೋ ಸಂಗ | ಡೇನು ಬರುವದೋ ||
ದಾನಧರ್ಮ ಮಾಡಿ ಬಹು ನಿ | ಧಾನಿ ಎನಿಸಿಕೊಳ್ಳೊ ಮನುಜಾ || ಪ ||
ಹೆಂಡರಿಲ್ಲ ಮಕ್ಕಳಿಲ್ಲ ಮಂಡೆ ತುಂಬ ಬಂಧುಬಳಗ |
ಕಂಡು ಬಿಡಿಸಿಕೊಂಬರಾರೊ ದಿಂಡ ಯಮನ ದೂತರೆಳೆಯೆ ||
ಬಂಡಿ ತುಂಬ ಇದ್ದ ಧನವು ಹಿಂದೆ ಉಳಿವದಲ್ಲೊ ನಿನ್ನ ಪೊಂದಿ |
ಕೊಂಡು ಬರುವ ವಸ್ತು ಕೀರ್ತಿ ಅಪಕೀರ್ತಿ ಎರಡೆ || ೧ ||
ಎನ್ನದೆಂದು ತನ್ನದೆಂದು ಹೊನ್ನು ಹೆಣ್ಣು ಮಣ್ಣಿಗಾಗಿ |
ಘನ್ನವಾಗಿ ಬಾಯಬಿಡುತ ಬಂದೆ ಮೋಹವಾ ||
ಸನ್ನುತದಲ್ಲಿ ಪರಹಿತಾರ್ಥ ಮಾಡಿ ಪುಣ್ಯಪಡೆ ಇನಿತು |
ಮುನ್ನೆ ಕಿರುಕುಳ ಕೂಪದಲ್ಲಿ ಕೆಡಲು ಬ್ಯಾಡ ಮನುಜ || ೨ ||
ಬತ್ತಲಿಂದ ಬರುತಿಹರು ಬತ್ತಲಿಂದ ಹೋಗುತಿಹರು |
ಕತ್ತಲೆ ಕಾಲ ಬೆಳಕುಮಾಡಿ ಹೊತ್ತು ಕಳೆದರು ||
ಪತ್ರರಿಲ್ಲ ಹೆತ್ತರಿಲ್ಲ ಹೊತ್ತುಕೊಂಡು ಹೋದರಲ್ಲೆ |
ಮತ್ತೆ ದೇಹ ಮಣ್ಣುಕೂಡಿದಂತೆ ಕೆಡಲು ಬ್ಯಾಡ ಮನುಜ || ೩ ||
ಕಟ್ಟಲಿಲ್ಲ ಬಿಚ್ಚಲಿಲ್ಲ ಕಷ್ಟಪಟ್ಟು ಬಾಳಲಿಲ್ಲ |
ಸುಟ್ಟು ಸುಟ್ಟು ಸುಣದ್ದರಳು ಆಯಿತೀ ಕಾಯ ||
ಬಿಟ್ಟು ಹೋಗುವಾಗ ಬೊಟ್ಟು ಬಟ್ಟೆ ನಿನಗೆ ಹೊಂದಲಿಲ್ಲ |
ದೃಷ್ಟಿನೋಟ ಕಟ್ಟಕಡೆಗೆ ಬಟ್ಟೆ ಬಯಲಾಗುತಿದೆ || ೪ ||
ಗರುವದೋರಿನಿಂದ ನೀನು ಬರಿದೆ ಕಾಲ ಕಳೆದೆ ಮುಂ |
ದರಿದು ನೋಡು ನರರ ತನುವು ದೊರಕಲರಿಯದು ||
ನೆರೆ ಮಹಾಮೂರ್ತಿ ಒಡೆಯ ಪರಮಗುರು ಚೆನ್ನಾದಿ ಕೇಶವ |
ಚರಣ ಭಜಿಸಿ ಚಂಚಲವಳಿದು ವರವ ಪಡೆದು ಹೊಂದು ಮುಕುತಿ || ೫ ||

## ೭೧. ಯಾರೂ ನಮ್ಮ ಹಿತದವರಲ್ಲ

ಮುಖಾರಿರಾಗ ಝಂಪೆತಾಳ

ಆರು ಹಿತವರು ನಿನಗೆ ಮೂವರೊಳಗೆ
ನಾರಿಯೋ ಧಾರುಣಿಯೊ ಬಲು ಧನದಸಿರಿಯೋ || ಪ ||
ಅನ್ಯರಲಿ ಜನಿಸಿರ್ದ ಅಂಗನೆಯು ಕರೆತಂದು
ನಿನ್ನ ಮನೆಗವಳ ಯಜಮಾನಿ ಎನಿಸಿ ||
ಭಿನ್ನವಿಲ್ಲದೆಯರ್ಧ ದೇಹವೆನಿಸುವ ಸತಿಯು
ಕಣ್ಣಲಿ ನೋಡಲಂಜುವಳು ಕಾಲವಶದಿ || ೧ ||
ಮುನ್ನ ಶತಕೋಟಿ ರಾಯರುಗಳಾಳಿದ ನೆಲವು
ತನ್ನದೆಂದೆನುತ ಶಾಸನವ ಬರೆಸೀ ||
ಬಿನ್ನಣದ ಮನೆಕಟ್ಟಿ ಕೋಟಿ ಕೊತ್ತಳವಿಕ್ಕಿ |
ಚನ್ನಿನವನಸುವಳಿಯೆ ಹೊರಗೆಹಾಕುವರು || ೨ ||
ಉದ್ಯೋಗವ್ಯವಹಾರ ನೃಪಸೇವೆಕುಶಲಗತಿ |
ಕ್ಷುದ್ರತನ ಕಳವು ಪರತಾಪದಿಂದ ||
ಬುದ್ಧಿಯಿಂದಲಿ ಗಳಿಸಿ ಇಟ್ಟಿದ್ದ ಅರ್ಥವನು
ಸದ್ಯದಲಿ ಅರುಂಬುವರು ಪೇಳೋ ಮನುಜಾ || ೩ ||
ಶೋಕಕ್ಕೆ ಅವರಿವರು ಸುಖವಿರಲು ಬಾಂಧವರು |
ಜೋಕೆ ತಪ್ಪಿದ ಬಳಿಕ ಅರ್ಥವ್ಯರ್ಥ ||
ಲೋಕದೊಳು ಸ್ಥಿರವಾದ ಕೀರ್ತಿ-ಅಪಕೀರ್ತಿಗಳು |
ಸಾಕಾರವಾಗಿ ಸಂಗಡ ಬಾಹೋವಲ್ಲದೆ || ೪ ||
ಅಸ್ಥಿರದ ದೇಹವನು ನೆಚ್ಚಿ ನಂಬಿರಬೇಡ |
ಸ್ವಸ್ಥದಲಿ ನೆನೆ ಕಂಡ್ಯ ಹರಿಪಾದವಾ ||
ಚಿತ್ತದೊಳು ಶುದ್ಧಿಯಿಂ ಪುರಂದರವಿಠ್ಠಲನ |
ನಿತ್ಯದಲ್ಲಿ ನೆನೆನೆನೆದು ಮುಕ್ತಿಪಡೆ ಮನುಜಾ || ೫ ||

## ೭೨. ಹೊಟ್ಟೆಯೆ ಎಲ್ಲರ ದೇವರು

ಸೌರಾಷ್ಟ್ರ ರಾಗ ಏಕತಾಳ

ಎಲ್ಲರು ಮಾಡುವದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ || ಪ ||
ನೆಲ್ಲುಗಳ ಕುಟ್ಟಿಕೊಂಡು ಬಿದ್ರುಗಳ ಹೊತ್ತುಕೊಂಡು |
ಕೂಲಿಗಳ ಮಾಡುವದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ || ೧ ||

ನಾಲ್ಕುವೇದ ಪುರಾಣಶಾಸ್ತ್ರ ಪಂಚಾಂಗಗಳ ಹೇಳಿ |
ಕಾಲ ಕಳೆಯೋದೆಲ್ಲ ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ || ೨ ||
ಬಡದು ಬಡದು ಕಬ್ಬಿಣವಕಾಸಿ ತುಬಾಕಿಮಾಡಿ |
ಗುಂಡು ಮದ್ದು ಮಾಡುವದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ || ೩ ||
ಮುಂದೆ ಮುಂದೆ ಬಂಟರೆಲ್ಲ ಕತ್ತಿ ಢಾಲನ್ನೆ ಪಿಡಿದು |
ಖಂಡ ಖಂಡ ಮಾಡುವದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ || ೪ ||
ದೊಡ್ಡ ದೊಡ್ಡ ಕುದುರೆ ಏರಿ ನ್ಯಾಜಹೊತ್ತು ರಾವುತರಾಗಿ |
ಹೊಡದಾಡಿ ಸಾಯುವದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ || ೫ ||
ತುಂಟತುರಗಿಯಾನೆ ಹೆಂಟೆ ಮಣ್ಣು ಹದಮಾಡಿ |
ಕಷ್ಟಮಾಡುವದು ತಮ್ಮ ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ || ೬ ||
ಕಂಟಕತನದಿಂದ ಕಳ್ಳತನವನ್ನೆ ಮಾಡಿ |
ಕಟ್ಟೆ ಹೊಡಿಸಿಕೊಂಬುವದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ || ೭ ||
ಸನ್ಯಾಸಿ ಜಂಗಂ ಜೋಗಿ ಜಟ್ಟಿ ಮೂಢ ಬೈರಾಗಿ |
ನಾನಾವೇಷವ ಕೊಂಬೋದೊಟ್ಟೆಗಾಗಿ ಗೇಣು ಬಟ್ಟೆಗಾಗಿ || ೮ ||
ಉನ್ನತ ಕಾ ಗಿ ನೆ ಲೆ ಯಾ ದಿ ಕೇ ಶ ವ ನ |
ಅನುದಿನ ನೆನೆವೋದು ಭಕ್ತಿಗಾಗಿ ಪರಮುಕ್ತಿಗಾಗಿ || ೯ ||

## ೭೩. ಅನುಗಾಲವು ಚಿಂತೆ

ವರಾಳಿರಾಗ ಝಂಪೆತಾಳ

ಎಂತಾದರು ಚಿಂತೆ ಬಿಡದು | ನಿ-
ಶ್ಚಿಂತರಾದವರಾನೊಬ್ಬರನು ಕಾಣೆ || ಪ ||
ಬ್ರಹ್ಮಗೆ ಶಿರಹೋಗಿ ಭಿನ್ನವಾದಾ ಚಿಂತೆ
ರಕ್ಕಸರ ಗುರುವಿಗೆ ಕಣ್ಣಿಲ್ಲದ ಚಿಂತೆ ||
ಮನ್ಮಥಗೆ ಶಿರವಳಿದು ಭಸ್ಮವಾದ ಚಿಂತೆ
ಮುಕ್ಕಣ್ಣ ಶಿವನಿಗೆ ತಿರಿದುಂಬೋ ಚಿಂತೆ || ೧ ||
ಕಾಮಧೇನುವಿಗೆ ಕರಕೊಳ್ಳುವರೆಂಬ ಚಿಂತೆ
ಕಾಮಿನಿಗೆ ಸತ್ಪುರುಷರು ಸಿಕ್ಕದ ಚಿಂತೆ ||
ರಾಜ್ಯವಾಳುವ ಧೊರೆಗೆ ಪರರಾಜ್ಯದ ಧೊರೆ ಚಿಂತೆ
ಶಾನಭೋಗನಿಗೆ ಲೆಕ್ಕವ ಬರೆವ ಚಿಂತೆ || ೨ ||

ಧರ್ಮನಿಷ್ಠರಿಗೆ ಸುಖದೋಳಿರುವ ಚಿಂತೆ
ದುಷ್ಕರ್ಮಿಗಳಿಗೆ ಪರರ ಕೆಡಿಸೋ ಚಿಂತೆ ||
ತಮ್ಮ ಅರ್ಜುನನಿಗೆ ವೈರಿಯ ಕೊಲ್ಲುವ ಚಿಂತೆ
ಅಣ್ಣ ಭೀಮನಿಗೆ ಅನ್ನ ಸಾಲದ ಚಿಂತೆ || ೩ ||

ಭಕ್ತರಿಗೆ ಗುರುವಿನಲಿ ಮುಕ್ತಿ ಪಡೆವೊ ಚಿಂತೆ
ಮುಕ್ತರಿಗೆ ಹರಿಯ ದರ್ಶನದ ಚಿಂತೆ ||
ಯುಕ್ತಿಬಲ್ಲವರಿಗೆ ವಿವೇಕವಾಡುವ ಚಿಂತೆ
ನಮ್ಮ ಪುರಂದರ ವಿಠಲಗೆ ನಮ್ಮೆಲ್ಲರ ಸಲಹೋ ಚಿಂತೆ || ೪ ||

## ೭೪. ಚಿಂತೆ ಬಿಟ್ಟಿದ್ದಲ್ಲ

ಪಂತುವರಾಳಿರಾಗ ಛಾಪು ತಾಳ

ಯಾವಾಗಲು ಚಿಂತೆ ಜೀವಕ್ಕೆ || ಪ ||
ಈ-ಜೀವ ಒಂದು ಪರಿಯಾಗೋ ತನಕಾ || ಅ. ಪ. ||
ಹೆಂಡತಿಲ್ಲದ ಚಿಂತೆ ಹೆಂಡತಿದ್ದರು ಚಿಂತೆ |
ಚೆಂಡಿ ಕುರೂಪಿಯಾದರೂ ಚಿಂತೆಯೋ ||
ಕೊಂಡನಾಗಿ ಪೊತ್ತು ತಿರುಗುವ ಚಿಂತೆ | ಭೂ-
ಮಂಡಲದೊಳಗೆಲ್ಲ ಚಿಂತೆ ಕಾಣಣ್ಣಾ || ೧ ||

ವಾಲಗಿಲ್ಲದ ಚಿಂತೆ ವಾಲಗಾದರು ಚಿಂತೆ |
ಮೇಲೆ ಸಂಬಳ ಬಾರದ ಚಿಂತೆಯು ||
ಸಾಲ ಕೊಡೋ ಚಿಂತೆ ಸಾಲ ತೆಗೆಯೊ ಚಿಂತೆ |
ಮೂಲೋಕದೊಳಗೆಲ್ಲ ಚಿಂತೆಯು ಕಾಣಣ್ಣ || ೨ ||

ಮನೆಯಿಲ್ಲದ ಚಿಂತೆ ಮನೆಯಾದರೂ ಚಿಂತೆ |
ಮನೆಯವಾರ್ತೆ ನಡೆಯುದ ಚಿಂತೆಯೂ ||
ಮನಸಿಜನಯ್ಯ ಶ್ರೀಘನ ಪುರಂದರ ವಿಠಲನ |
ನೆನೆದಾರೆ ಚಿಂತೆ ನಿಶ್ಚಿಂತೆ ಕಾಣಣ್ಣಾ || ೩ ||

## ೭೫. ಆಪತ್ತುಗಳು ಬರಲಿ

ಪಂತುವರಾಳಿರಾಗ ಅಟತಾಳ

ಇಂಥಿಂಥಾದ್ದೆಲ್ಲಾನೂ ಬರಲಿ । ನಿ-
ಶ್ಚಿಂತೆಂಬುದು ದೃಢವಾಗಿರಲಿ ॥ ಪಲ್ಲ ॥
ಬಡತನವೆಂಬುದು ಕಡೆತನಕಿರಲಿ
ಒಡವೆ ವಸ್ತುಗಳು ಹಾಳಾಗ್ಹೋಗಲಿ ॥
ನಡೆಯುವ ದಾರಿ ಎನ ಬಿಟ್ಹೋಗಲಿ
ಅಡವಿಲಿ ಗಿಡಗಳು ಸಿಗದ್ಹಾಂಗಾಗಲಿ ॥ ೧ ॥
ಉದ್ಯೋಗೆಂಬುದು ಮೊದಲೇ ಹೋಗಲಿ
ಬುದ್ಧಿಯು ಎನಗೆ ಮದಡಿಸಿ ಹೋಗಲಿ ॥
ಮುದ್ದುಹಾಕಿ ಎನ್ನನು ಕೊಲ್ಲಲಿ
ಹದ್ದುನಾಯಿ ಹರಕೊಂಡು ತಿನ್ನಲಿ ॥ ೨ ॥
ಗಂಡುಸುತನ ಎನಗಿರದ್ಹಾಂಗಾಗಲಿ
ಹೆಂಡರು ಮಕ್ಕಳು ಎನ್ನನು ಬಿಡಲಿ ॥
ಕುಂಡೆ ಮಂಡೆ ಮೇಲ್ ಸಾಲ್ಗಾರೊದೆಯಲಿ
ಬಂಡುಮಾಡಿ ಜನರೆಲ್ಲ ನಗಲಿ ॥ ೩ ॥
ಡಾಂಭಿಕ ಇವನೆಂತೆಲ್ಲರು ಅನ್ನಲಿ
ಅಂಬರ ಮುರಕೊಂಡು ಮೇಲೆ ಬೀಳಲಿ ॥
ನಂಬಿಕೆ ಎನ್ನಲ್ಲಿರಥಾಂಗ್ಹೋಗಲಿ
ಡೊಂಬಿ ಸೂಳೇ ಮಗನೆಂತೆನಲಿ ॥ ೪ ॥
ಆಶಾಪಂಥ ನಡೆಯದೆ ಹೋಗಲಿ
ಹಾಸ್ಯಮಾಡಿ ಜನರೆಲ್ಲ ನಗಲಿ ॥
ಶ್ರೀಶ ಪುರಂದರವಿಠಲನ ನಾಮ
ಶಾಶ್ವತ ಒಂದೇ ಮನದಲ್ಲಿರಲಿ ॥ ೫ ॥

## ೭೬. ನನ್ನ ಅಪಮಾನವಾಗಲಿ

ಪೂರ್ವಿಕಾಗ ಅಟತಾಳ

ಅಪಮಾನವಾದರೆ ಒಳ್ಳಿತು
ಅಪರೂಪ ಹರಿನಾಮ ಜಪಿಸುವ ಮನುಜಗೆ ॥ ಪ ॥

ಮಾನದಿಂದ ಅಭಿಮಾನ ಪುಟ್ಟುವದು
ಮಾನದಿಂದ ತಪದ ಹಾನಿಯಾಗುವದು ||
ಮಾನಿ ದುರ್ಯೋಧನಗೆ ಹಾನಿಯಾಯಿತು ಅನು-
ಮಾನವಿಲ್ಲ ಮಾನಾಪಮಾನಸಮನಿಗೆ || ೧ ||

ಅಪಮಾನದಿಂದಲಿ ತಪವೃದ್ಧಿಯಾಗೋದು
ಅಪಮಾನದಿಂದ ಪುಣ್ಯ ಸಫಲವಾಗೋದು ||
ಅಪಮಾನದಿಂದಲಿ ನೃಪ ಧ್ರುವರಾಯಗೆ
ಕಪಟನಾಟಕ ಕೃಷ್ಣ ಅಪರೋಕ್ಷನಾದಾ || ೨ ||

ನಾನೇನು ಮಾಡಲಿ ಯಾರಲ್ಲಿ ಪೋಗಲಿ
ಕಾನನಚರಾರಾಧ್ಯ ನೀನಿರಲು ||
ದೀನರಕ್ಷಕ ನಮ್ಮ ಪು ರಂ ದ ರ ವಿ ಠ್ಠ ಲ
ಏನು ಬೇಡೆನಗಪಮಾನವೇ ಇರಲಿ || ೩ ||

## ೭೭. ಮೋಸಹೋದೆನು

ಕೇದಾರಗೌಳ ರಾಗ ಆದಿತಾಳ

ಮೋಸಹೋದೆನಲ್ಲ | ಸಕಲವು
ವಾಸುದೇವ ಬಲ್ಲ || ಪ ||
ಭಾಸುರಾಂಗ ಶ್ರೀವಾಸುಕಿಶಯನನ
ಸಾಸಿರನಾಮವ ಲೇಸಾಗಿ ಪಠಿಸದೆ || ಅ. ಪ. ||
ದುಷ್ಟ ಜನರ ಕೂಡಿ | ನಾನತಿ
ಭ್ರಷ್ಟನಾದೆ ನೋಡಿ
ದೃಷ್ಟ್ಯಗೋಚರ ಮುರಮುಷ್ಟಿವೈರಿಯ
ದೃಷ್ಟಿಯಿಂದ ನಾ ದೃಷ್ಟಿಸಿ ನೋಡದೆ || ೧ ||
ಕಾಯವು ಸ್ಥಿರವಲ್ಲ | ಎನ್ನೊಳು
ಮಾಯೆ ತುಂಬಿತಲ್ಲ ||
ಪ್ರಾಯಮದದಿ ಪರಸ್ತ್ರೀಯರ ಕೂಡಾಡಿ
ಕಾಯಜ ಜನಕನ ಗಾಯನಮಾಡದೆ || ೨ ||

ಕಂಗಳಿಂದಲಿ ನೋಡೋ | ದೇವ ಎ-
ನ್ನಂಗಸಂಗವ ಮಾಡೋ ||
ಮಂಗಳಮೂರುತಿ ಶ್ರೀ ರಂ ಗ ವಿ ಠ್ಠ ಲ ಮುಂ-
ದಂಗಬಾರದಂತೆ ನೀ ದಯಮಾಡೋ || ೩ ||

## ೭೮. ಪಶ್ಚಾತ್ತಾಪ

ಕಾಂಬೋಧಿ ರಾಗ ಝಂಪೆತಾಳ

ದಾಸನೆಂತಾಗುವೆನು ಧರೆಯೊಳಗೆ ನಾನು || ಪ ||
ವಾಸುದೇವನಲ್ಲಿ ಲೇಶ ಭಕುತಿಯ ಕಾಣೆ || ಅ. ಪ. ||
ಗೂಟನಾಮವ ಹೊಡೆದು ಗುಂಡು ತಂಬಿಗೆ ಹಿಡಿದು
ಗೋಟಂಚು ಧೋತರ ಮಡಿಯನುಟ್ಟು ||
ದಾಟುಕಾಲಿಡುತ ನಾ ಧರೆಯೊಳಗೆ ಬರಲೆನ್ನ
ಬೂಟಕತನ ನೋಡಿ ಭ್ರಮಿಸಿದಿರಿ ಜನರೇ || ೧ ||
ಅರ್ಥದಲ್ಲೇ ಮನಸು ಆಸಕ್ತವಾಗಿದ್ದು
ವ್ಯರ್ಥವಾಯಿತು ಜನ್ಮ ವಸುಧೆಯೊಳಗೆ ||
ಅರ್ಥಿಯಿಂದಲಿ ಹರಿಯ ಅರ್ಚಿಸಿದ್ದಿಲ್ಲ ನಾ
ಸತ್ಯಶೌಚಗಳರಿಯೆ ಸಜ್ಜನರೆ ಕೇಳಿ || ೨ ||
ಇಂದಿರೇಶನ ಪೂಜೆ ಎಂದು ಮಾಡಿದ್ದಿಲ್ಲ
ಸಂಧ್ಯಾನ ಜಪತಪಗಳೊಂದನರಿಯೆ ||
ಒಂದು ಸಾಧನ ಕಾಣೆ ಪು ರಂ ದ ರ ವಿ ಠ್ಠ ಲ ನ
ದ್ವಂದ್ವ ಪಾದವನಂಬಿ ಅರಿತು ಭಜಿಸದಲೇ || ೩ ||

## ೭೯. ಉದರವೈರಾಗ್ಯ ಬೇಡ

ಪೂರ್ವಿರಾಗ ಮಟ್ಟೆತಾಳ

ಉದರವೈರಾಗ್ಯವಿದು ನಮ್ಮ
ಪದುಮನಾಭನಲ್ಲಿ ಲೇಶ ಭಕುತಿಯಿಲ್ಲ || ಪಲ್ಲ ||
ಉದಯಕಾಲದಲೆದ್ದು ಗಡಗಡ ನಡಗುತ
ನದಿಯೊಳು ಮಿಂದೆನೆಂದು ಹಿಗ್ಗುತಲಿ

ಮದ-ಮತ್ಸರ-ಕ್ರೋಧ ಒಳಗೆ ತುಂಬಿಟ್ಟುಕೊಂಡು
ಬದಿಯಲಿದ್ದವರಿಗಾಶ್ಚರ್ಯ ತೋರುವ-ದುದರ ॥ ೧ ॥
ಕಂಚುಗಾರರ ಬಿಡಾರದಂದದಲಿ
ಕಂಚು ಹಿತ್ತಾಳಿ ಪ್ರತಿಮೆ ನೆರಹಿ
ಮಿಂಚಲೆನುತ ಬಹು ಜ್ಯೋತಿಗಳನೆ ಹಚ್ಚಿ
ವಂಚನೆಯಲಿ ಘನ ಪೂಜೆ ಮಾಡುವ–ದುದರ ॥ ೨ ॥
ಕರದಲಿ ಜಪಮಣಿ ಬಾಯಲಿ ಮಂತ್ರವು
ಅರಿವೆಯ ಮುಸುಕು ಮೋರೆಗೆ ಹಾಕಿ
ಪರಸತಿಯರ ಗುಣ ಸ್ಮರಿಸುತ ಅನುದಿನ
ಪರಮವೈರಾಗ್ಯಶಾಲಿಯೆಂದೆನಿಸುವ–ದುದರ ॥ ೩ ॥
ಬೂಟಕತನದಲಿ ಬಹಳ ಭಕುತಿ ಮಾಡಿ
ದಿಟನೀತ ಸರಿಯಾರಿಲ್ಲೆನಿಸಿ
ನಾಟಕ ಸ್ತ್ರೀಯಂತೆ ಬಯಲ ಡಂಭವ ತೋರಿ
ಊಟದ ಮಾರ್ಗದ ಜ್ಞಾನವಿದಲ್ಲದೆ ॥ ೪ ॥
ನಾನು ಎಂಬುದ ಬಿಟ್ಟು ಜ್ಞಾನಿಗಳೊಡನಾಡಿ
ಏನಾದರೂ ಹರಿ ಪ್ರೇರಣೆಯೆಂದು
ಧ್ಯಾನಿಸಿ ಮೌನದಿ ಪುರಂದರ ವಿಠಲನ
ಕಾಣದೆ ಮಾಡಿದ ಕಾರ್ಯಗಳೆಲ್ಲವು ॥ ೫ ॥

## ೮೦. ನಿಜವೈರಾಗ್ಯ

### ವೈರಾಗ್ಯ ಸುಳಾದಿ

ವೈರಾಗ್ಯ ಮಾರ್ಗಕೇಳು ದಾರಿದ್ರ್ಯ ಮಾರ್ಗಕೀಳು
ಶ್ರೀರಮಣನ ಪಾದವಾರಾಧಿಸುವುದಕ್ಕೆ
ನಾರಿಯ ಧಾರುಣಿಯ ಧನವ ಬಿಟ್ಟರಾಯಿತೊ
ವೈರಾಗ್ಯವಲ್ಲ ಕಂಡ ಧೀರರಿಗೆ
ಶರೀರಕಾಪಾದ ಭಸ್ಮ ಧರಿಸಿಕೊಂಡು
ಚೀರವಸ್ತ್ರವನುಟ್ಟು ತಿರುಗಾಡುತ್ತಿರಲಾಗ
ಆರಾದರೂ ಅವನ ಅವಧೂತನೆಂತೆಂದು

ಸಾರಿಸಾರಿಗೆ ಇನ್ನು ಕರೆವರ್ಕೈಯು
ವೈರಾಗ್ಯವೆಂಬುವಂಥ ವಾರುತೆಯೊಂದಲ್ಲದೆ
ನಾರಾಯಣಗೆ ಇದು ಪ್ರಿಯುವಲ್ಲ
ನಾರಿ ಸುತರುಗಳು ಶರೀರ ಸಂಬಂಧಿ
ಗರು ಎಂತೆಂದಿರಬೇಕು
ನೀರಿನೊಳಗೆ ಇನ್ನು ಕಮಲವಿದ್ದಂತೆ
ಕಾರಣವಾಗಿ ಕಾರ್ಯವಿಲ್ಲದಿರಲಿ ಬೇಕು
ಮಾರಜನಕ ನಮ್ಮ ಗೋ ಪಾ ಲ ವಿ ಠ್ಠ ಲ ನು
ತೋರಿಕೊಟ್ಟ ವೈರಾಗ್ಯವನ್ನು ತೋರುವೆನು

## ೮೧. ಸಂಸಾರದ ಹಂಬಲ ಬೇಡ

ದೇಶಿರಾಗ ಛಾಪು ತಾಳ

ಬಿಟ್ಟು ಬನ್ನಿರೊ ಸಂಸಾರದ್ಹಂಬಲ || ಪ ||
ಸೃಷ್ಟಿಗೊಡೆಯನ್ನ ಸೇರಿ ಸುಖಿಸ ಬನ್ನಿರೊ || ಅ. ಪ. ||
ಹೆಂಡಿರು ಮಕ್ಕಳು ಎಂಬ ಹಂಬಲ ಬೇಡಿರೊ
ಕೊಂಡವರಲ್ಲ ಕೊಡುವರಲ್ಲ ಮುಂದಣ ಗತಿಯನು || ೧ ||
ಎಷ್ಟು ಮಾಡಿ ಗಳಿಸಿ ತಂದರು ಸಾಲದೆಂಬರು
ನಷ್ಟಮಾಡಿ ನಿಮ್ಮ ಬದುಕು ಎಲ್ಲ ತಿಂಬರು || ೨ ||
ನಡು ಬೀದಿಯಲ್ಲಿ ನಿಲಿಸಿ ಸೆಳೆದು ಸುಲಿವರೊ
ಕುಡಿಹುಬ್ಬು ಕಡೆಗಣ್ಣು ನೋಟದಿಂದಲಿ || ೩ ||
ಉಂಡು ಉಟ್ಟು ಗುಂಡಿನಂತೆ ಮನೆಯಲಿಹರೊ
ಚಂಡ ಯಮನ ದೂತರು ಬಂದು ಎಳೆದು ಒಯ್ವರೊ || ೪ ||
ಮುಟ್ಟಿ ಭಜಿಸಿರೊ ಹ ಯ ವ ದ ನ ನಂಘ್ರಿಯು
ನೆಟ್ಟನೆ ಮುಕ್ತಿಮಾರ್ಗ ತೋರಿಕೊಡುವನೊ || ೫ ||

---

# ೮. ಮುಮುಕ್ಷುಭಾವ

ಮುಕ್ತಿಯನ್ನಿಚ್ಛಿಸುವವನು ಮುಮುಕ್ಷುವು. ಮುಕ್ತನಾಗಲು ತೀವ್ರ ಇಚ್ಛೆಯುಂಟಾಗುವುದೆ ಮುಮುಕ್ಷುಭಾವವೆನಿಸುವದು, ಅನೇಕ ತಾಪಗಳಿಂದ ಆರ್ತನಾದ ಸಾಧಕನು, ವಿಷಯಗಳ ಬಗ್ಗೆ ವಿರಕ್ತನಾಗಿ, ದುಃಖಗಳಿಗೆ ಬೇಸತ್ತು, ಕ್ಷಣಿಕ ಭಂಗುರ ಸುಖಗಳ ಬಗ್ಗೆ ಹೇಯಭಾವವನ್ನು ತಾಳಿ ನಿತ್ಯ ನಿರಂತರ ಸುಖದತ್ತ ಸಾಗಲಿಚ್ಛಿಸಿದನೆಂದರೆ ಅವನಲ್ಲಿ ಮುಮುಕ್ಷುಭಾವವು ಮನೆಮಾಡಿತೆಂದು ತಿಳಿಯಬೇಕು. ಇಂಥವನಿಗೆ ವಿಷಯದಲ್ಲಿ ಅರುಚಿ, ಅನಾಸಕ್ತಿಹುಟ್ಟುವುದಲ್ಲದೆ ಆತ್ಮಾನಂದದಲ್ಲಿ ರುಚಿ ಹಾಗೂ ಆಸಕ್ತಿಯುಂಟಾಗುವದು.

ಚಿತ್ತವೃತ್ತಿಯು ಈ ಪರಿಯಲ್ಲಿ ಮೋಕ್ಷದತ್ತ ಹರಿಯಲಾರಂಭಿಸಿತೆಂದರೆ ಸ್ವಾಭಾವಿಕವಾಗಿಯೇ ಅದು ಪರಮಾತ್ಮನಲ್ಲಿ ತಲ್ಲೀನವಾಗಲು ಹವಣಿಸುವದು. ಜೀವವು ತನ್ನ ಪೂರ್ವದ ಎಲ್ಲ ಕರ್ಮಗಳನ್ನು ನೆನಪುಗೊಂಡು ಪಶ್ಚಾತ್ತಾಪಬಟ್ಟು ದೇವರಿಗೆ ಮೊರೆ ಇಡುವದು. 'ಉಳಿದ ಯಾವ ವಿಷಯಗಳಲ್ಲಿಯೂ ನನಗೆ ಸುಖವಿಲ್ಲ, ದೇವರೇ ನಿನ್ನಲ್ಲಿ ನನಗೆ ಎಡೆಕೊಡು' ಎಂದು ಅತ್ಯಂತ ಅಂತಃಕರಣಪೂರ್ವಕವಾಗಿ ಭಕ್ತನು ದೇವರನ್ನು ಬೇಡಿಕೊಳ್ಳಲಾರಂಭಿಸುವನು. ದೇವರಲ್ಲಿ ಹೆಚ್ಚಿನ ಶ್ರದ್ಧೆ ಭಕ್ತಿಗಳು ಉಂಟಾಗುವವು. ಪರಮಾತ್ಮಸಾಧನಗಳಾವು ಎಂಬ ಬಗ್ಗೆ ಕುತೂಹಲ, ಆ ಸಾಧನಗಳನ್ನು ಎಡೆಬಿಡದೆ ಮಾಡುವ ನಿಷ್ಠೆ ಇವು ಉಂಟಾಗುವವು. ಮುಕ್ತಿಗೆ ಅಡ್ಡಬರುವ ಎಲ್ಲ ಅಡಚಣಿಗಳನ್ನು ದೂರೀಕರಿಸಿ, 'ನನ್ನನ್ನು ಬದಿಗೆ ಕರಕೊಳ್ಳು ದೇವಾ' ಎಂದು ಭಕ್ತನು ಹೇಳಿಕೊಳ್ಳುವನು.

ಮುಮುಕ್ಷುವು ಹೇಗೆ ಇರಬೇಕು ಎಂಬದನ್ನು ಪುರಂದರದಾಸರು ಬಹಳ ಮಾರ್ಮಿಕವಾಗಿ ವರ್ಣಿಸಿರುವರು. ಕೇವಲ ಬಾಹ್ಯ ಆಚಾರವ್ರತಾದಿ

ಗಳು ನಮ್ಮನ್ನು ಪಾರುಮಾಡಲಾರವು. ನಿಜವಾದ ಚಿತ್ತೈಕಾಗ್ರ್ಯ, ಸಂಯಮ, ನಿಷ್ಠೆ, ತನ್ಮಯತೆ ಮುಂತಾದವುಗಳು ಬೇಕು ಎಂದು ಬೇರೆ ಬೇರೆ ದಾಸಶ್ರೇಷ್ಠರು ಹೇಳಿರುವರು.

ತಾನು ಮಾಡುತ್ತಿರುವ ಸಾಧನಗಳಿಂದ ಅತ್ಯಂತ ಶ್ರೇಷ್ಠವಾದ ಲಾಭವು ತನಗೆ ಆಗುವುದೆಂಬ ಆತ್ಮವಿಶ್ವಾಸವು ಮುಮುಕ್ಷುವಿನಲ್ಲಿ ಕ್ರಮೇಣ ಉಂಟಾಗುವದು. ಅವನ ತೀವ್ರ ಮನೋಭಾವವೆ ಅವನನ್ನು ತನ್ನ ಧ್ಯೇಯದತ್ತ ದಿನೇದಿನೇ ಒಯ್ಯುವದು.

ಮುಮುಕ್ಷುಭಕ್ತನು ಅತ್ಯಂತ ವ್ಯಾಕುಲಚಿತ್ತನಾಗುವದುಂಟು. ಆ ಭಾವವನ್ನು ಪ್ರತ್ಯೇಕವಾಗಿ 'ವ್ಯಾಕುಲಭಾವ'ವೆಂಬ ಪ್ರಕರಣದಲ್ಲಿ ಕೊಡುವುದು ಯೋಗ್ಯಕಂಡದ್ದರಿಂದ ಆ ಬಗ್ಗೆ ಪ್ರತ್ಯೇಕ ಪ್ರಕರಣವು ಕಾದಿಡಲ್ಪಟ್ಟಿದೆ.

## ೮೨. ನೀನೆ ಎನ್ನ ಗತಿ

ಕಾಂಬೋಧಿರಾಗ ಝಂಪೆತಾಳ

ಯಾಕೆನ್ನ ರಾಜ್ಯಕ್ಕೆಳತಂದೆ ಹರಿಯೇ
ಸಾಕಲಾರದೆ ಎನ್ನ ಯಾಕೆ ಪುಟ್ಟಿಸಿದಿ ॥ ಪ ॥
ಎನ್ನ ಕುಲದವರಿಲ್ಲ ಎನಗೊಬ್ಬ ಹಿತರಿಲ್ಲ
ಮನ್ನಿಸುವ ಧೊರೆಯಿಲ್ಲ ಮನಕೆ ಜಯವಿಲ್ಲ ॥
ಹೊನ್ನು ರನ್ನಗಳಿಲ್ಲ ಒಲಿಸಿಕೊಂಬುವರಿಲ್ಲ
ಇನ್ನಿಲ್ಲಿ ಥರವಲ್ಲ ಇಂದಿರೇಶನೆ ಬಲ್ಲ ॥ ೧ ॥
ದೇಶ ಪರಿಚಯವಿಲ್ಲ ದೇಹದೊಳು ಬಲವಿಲ್ಲ
ವಾಸಿ ಪಂಥಗಳೆಂಬೊ ಒಲಿವೆ ಎನಗಿಲ್ಲ ॥
ಬೇಸರೆಯೆ ಕರೆವರಿಲ್ಲ ಬೇರೆ ಹಿತ ಜನರಿಲ್ಲ
ವಾಸುದೇವನೆ ಬಲ್ಲ ಈ ರಾಜ್ಯವೆಲ್ಲ ॥ ೨ ॥
ಕರೆದು ಕೊಡುವರಿಲ್ಲ ಕರುಣತೋರುವರಿಲ್ಲ
ಪರಮಾತ್ಮನಲ್ಲದೆ ಪರಗತಿಯು ಇಲ್ಲ ॥
ಹರಣದಲಿ ಹುರುಡಿಲ್ಲ ಕರುಣದಲಿ ದೃಢವಿಲ್ಲ
ಧೊರೆ ಪುರಂದರ ವಿಠಲ ತಾನೆಲ್ಲ ಬಲ್ಲ ॥ ೩ ॥

## ೮೩. ನಿನ್ನಲ್ಲಿ ಮನ ನಿಲ್ಲಿಸಿ ಕಾಯೋ ದೇವಾ

ಆನಂದಭೈರವಿ ರಾಗ ಆದಿತಾಳ

ಎನ್ನ ಮನ ಕಂಡಕಡೆಗೆ । ಎರಗುತಿದೆ
ನಿನ್ನಲ್ಲಿ ಇರಿಸಿ ಕಾಯೋ ॥ ಪ ॥
ಚಕ್ಷುರಿಂದ್ರಿಯಗಳಿಂದ । ಚದುರೆಯರ
ನೀಕ್ಷಿಸಿ ನೊಂದೆನಯ್ಯ ॥
ಶಿಕ್ಷಕನು ನೀನೆ ಎನಗೆ । ಸಿರಿವೊಗವ
ಸಾಕ್ಷಾತ್ತುವಾಗಿ ತೋರೋ, ॥ ೧ ॥
ಘ್ರಾಣೇಂದ್ರಿಯಗಳಿಂದ । ದುರ್ಗಂಧ
ಘ್ರಾಣಿಸಿ ನೊಂದೆನಯ್ಯ ॥
ಪ್ರಾಣೇಶ ನಿನಗರ್ಪಿತ । ನಿರ್ಮಾಲ್ಯವಾ
ಘ್ರಾಣಿಸುವಂತೆ ಮಾಡೋ ॥ ೨ ॥
ರಸನೇಂದ್ರಿಯದಿಂದ । ಪದಾರ್ಥ
ಹಸಿವರಿತು ಉಂಬುವೆನಯ್ಯ ॥
ವಸುಧೀಶ ನಿನಗರ್ಪಿತ । ನೈವೇದ್ಯ
ರಸ ಸವಿಯುವಂತೆ ಮಾಡೊ ॥ ೩ ॥
ಶ್ರೋತ್ರೇಂದ್ರಿಯಗಳಿಂದ । ಸತತದು-
ರ್ವಾತೆಯ ಕೇಳಿ ನೊಂದೆ ॥
ಕರ್ತನಿಗೆ ಕರ್ತೃ ಸರ್ವತ್ರ । ಶ್ರೀಹರಿ
ಕಥೆಯ ಕಿವಿಯೊಳಿರಿಸೊ ॥ ೪ ॥
ತ್ವಕ್ಕು ಇಂದ್ರಿಯದಿಂದ । ಕಾಮದಿ
ಸೊಕ್ಕಿ ನಾ ನೊಂದೆನಯ್ಯಾ ॥
ಕಾಕುಮಾಡದೆ ಎನ್ನನು । ಸಲಹಯ್ಯ
ಸಾಕಾರ ಶ್ರೀ ಕೃಷ್ಣನೇ ॥ ೫ ॥

## ೮೪. ನನ್ನನ್ನು ಮುಕ್ತಮಾಡು

ದ್ವಿಜಾವಂತಿರಾಗ ಆದಿತಾಳ

ದಾಸ ದಾಸ ದಾಸರ ದಾಸ್ಯವ ಕೊಡು
ದೋಷರಾಶಿಗಳನಳಿದು ॥ ಪ ॥

ಶ್ರೀಶಾಧೀಶ ಸುರೇಶ ಸರ್ವೇಶ್ವರ
ಭಾಸುರ ಗುಣಗಣ ಭವ್ಯಚರಿತ ಹರೇ || ಅ. ಪ ||
ಚಿತ್ತ ನಿನ್ನಯ ಚಿಂತೆಯೊಳಿರಲಿ ಚಿಂತೆಯಿತರ ಬಿಡಲಿ |
ಅಂತರಂಗದಲ್ಲಾನಂದಿರಲಿ ಅಹಂಕೃತಿಯನು ಬಿಡಲಿ ||
ಸಂತತ ನಿನ್ನ ಪಾದಾಕ್ರಾಂತನಾಗಿರುವಂತೆ |
ಪಂಥವ ಪಾಲಿಸೊ ಪರಮ ಪುರುಷ ಹರೇ || ೧ ||
ಅರಿಷಡ್ವರ್ಗದ ಅಡವಿಯ ಖಂಡಿಸೊ ಆನಂದದಲಿರಿಸೊ |
ದುರುಳರ ಸಂಘವ ಹೊರ ಓಡಿಸೊ ದುರ್ಮತಿಯನೆ ಬಿಡಿಸೊ ||
ಸರಸ ಸಂಭ್ರಮ ಸಜ್ಜನರೊಳಗೆನ್ನ |
ನಿರುತವು ನಿಲ್ಲಿಸೊ ನೀರಜಾಕ್ಷ ಹರೇ || ೨ ||
ತ್ರಿಜಗನ್ ಮೋಹನಾ ಕಾರಣ ತ್ರಿಗುಣಾತೀತ ತೀರ್ಥಪಾದಾ |
ಭಜಕಪಾವನಾ ಭವನುತಚರಣಾ ಖುಜುಗಣನುತ ಭರಣಾ ||
ವಿ ಜ ಯ ವಿ ಠ ಲ ವಿಶ್ವಸುರೇಶ್ವರ |
ಕುಜನವಿದಾರಣ ಕೋವಿದನುತಹರೇ || ೩ ||

## ೮೫. ನೀನೇ ಬೇಗ ಕಾಯಬೇಕು

ಆನಂದಭೈರವಿ ರಾಗ ಅಟತಾಳ

ನೀನೇ ದಯಾಳೊ ನಿರ್ಮಲಚಿತ್ತ ಗೋವಿಂದ
ನಿಗಮಗೋಚರ ಮುಕುಂದ || ಪ ||
ಜ್ಞಾನಿಗಳರಸ ನೀನಲ್ಲದೆ ಜಗದಿನ್ನು
ಮಾನದಿಂದಲಿ ಕಾಯ್ವ ದೊರೆಗಳ ನಾ ಕಾಣೆ || ಅ. ಪ. ||
ದಾನವಾಂತಕ ದೀನಜನಮಂದಾರನೆ
ಧ್ಯಾನಿಪರ ಮನದಿ ಆ ವಾಸನೆ (ಸಂಚಾರನೆ) ||
ಮೌನವಾದೆನು ನಿನ್ನ ಧ್ಯಾನಾನಂದದಿ ಎನ್ನ
ಸಾನುರಾಗದಿ ಕಾಯೋ ಸನಕಾದಿವಂದ್ಯನೇ || ೧ ||
ಬಗೆಬಗೆಯಲಿ ನಿನ್ನ ತುತಿಪೆನೊ ನಗಧರ
ಖಗಪತಿವಾಹನನೇ ||
ಮಗುವಿನ ಮಾತಿದು ನಗುತ ಕೇಳಿ ನೀನು
ಬೇಗದಿಂದಲಿ ಕಾಯೊ ಸಾಗರಶಯನನೇ || ೨ ||

ಮಂದರಧರ ಅರವಿಂದಲೋಚನ ನಿನ್ನ
ಕಂದನೆಂದೆಣಿಸೊ ಎನ್ನ ||
ಸಂದೇಹವ್ಯಾಕಿನ್ನು ಸ್ವಾಮಿ ಮುಕುಂದನೆ
ಬಂದೆನ್ನ ಕಾಯೊ ಶ್ರೀ ಪು ರಂ ದ ರ ವಿ ಠ್ಠ ಲ ನೆ || ೩ ||

## ೮೬. ದಾರಿಗಾಣದು, ಇನ್ನು ಪಾದಗಳನ್ನು ತೋರು

ಭೈರವಿ ರಾಗ ತ್ರಿಪುಟತಾಳ

ಇಂದು ಎನಗೆ ಗೋವಿಂದ ನಿನ್ನ ಪಾದಾರ-
ವಿಂದವ ತೋರೊ ಮುಕುಂದ–ಇಂದಿರೆರಮಣ || ಪ ||
ಸುಂದರವದನನೆ ನಂದಗೋಪನ ಕಂದ
ಮಂದರೋದ್ಧರ ಆನಂದ ಇಂದಿರೆರಮಣ || ಅ. ಪ. ||
ನೊಂದೆನಯ್ಯ ಭವಬಂಧನದೊಳು ಸಿಲುಕಿ
ಮುಂದೆ ದಾರಿಗಾಣದೆ ಕುಂದಿದೆ ಜಗದೊಳು ||
ಕಂದನೆಂತೆಂದೆನ್ನ ಕುಂದುಗಳೆಣಿಸದೆ
ತಂದೆ ಕಾಯೋ ಕೃಷ್ಣ ಕಂದರ್ಪ ಜನಕನೆ || ೧ ||
ಮೂಢತನದಿ ಬಲು ಹೇ (ಖೋ)ಡಿ ಜೀವ ನಾನಾಗಿ
ದೃಢಭಕುತಿಯನು ಮಾಡಲಿಲ್ಲವೊ ಹರಿಯೆ ||
ನೋಡಲಿಲ್ಲವೊ ನಿನ್ನ ಪಾಡಲಿಲ್ಲವೊ ಮಹಿಮೆ
ಗಾಡಿಕಾರ ಕೃಷ್ಣ ಬೇಡಿಕೊಂಬೆನೊ ನಿನ್ನ || ೨ ||
ಧಾರುಣಿಯೊಳು ಭೂಭಾರ ಜೀವ ನಾನಾಗಿ
ದಾರಿ ತಪ್ಪಿ ನಡೆದೆ ಸೇರಿದೆ ಕುಜನರ ||
ಆರು ಕಾಯುವರಿಲ್ಲ ಸೇರಿದೆ ನಿನಗಯ್ಯ
ಧೀರ ವೇ ಣು ಗೋ ಪಾ ಲ ಪಾರಗಾಣಿಸೊ ಭವ || ೩ ||

## ೮೭. ಎನ್ನ ಕೈಬಿಡಬೇಡ

ಕಾಂಬೋಧಿ ರಾಗ ಝಂಪೆತಾಳ

ಕಂಡು ಕಂಡೂ ಎನ್ನ ಕೈ ಬಿಡುವರೆ
ಪುಂಡರೀಕಾಕ್ಷ ಶ್ರೀ ಪುರುಷೋತ್ತಮಹರೇ || ಪ ||



೧೦-೧೪೧೧

ಬಂಧುಗಳು ಎನಗಿಲ್ಲ ಬದುಕಿನಲಿ ಸುಖವಿಲ್ಲ
ನಿಂದೆಯಲಿ ನೊಂದೆನಯ್ಯ ನೀರಜಾಕ್ಷ ||
ಬಂಧು ಬಳಗವು ನೀನೇ ತಂದೆತಾಯಿಯು ನೀನೇ
ಎಂದೆಂದಿಗೂ ನಿನ್ನ ನಂಬಿದೆನೋ ಕೃಷ್ಣ || ೧ ||
ಕ್ಷಣವೊಂದು ಯುಗವಾಗಿ ತೃಣಕಿಂತ ಕಡೆಯಾಗಿ
ಎಣಿಸಲಳವಲ್ಲ ಈ ಭವದ ವ್ಯಥೆಯಾ ||
ಸನಕಾದಿ ಮುನಿವಂದ್ಯ ವನಜಸಂಭವ ಜನಕ
ಫಣಿರಾಯ ಪ್ರಲ್ಹಾದಗೊಲಿದ ಶ್ರೀಕೃಷ್ಣ || ೨ ||
ಭಕ್ತವತ್ಸಲನೆಂಬ ಬಿರಿದು ಪ್ರೊತ್ತಿಹಮೇಲೆ
ಭಕ್ತರಾಧೀನನಾಗಿರಬೇಡವೇ ||
ಮುಕ್ತಿದಾಯಕ ನೀನು ಹೊನ್ನೂರಪುರವಾಸ
ಶಕ್ತ ಗು ರು ಪು ರಂ ದ ರ ವಿ ಠ್ಠ ಲ ಶ್ರೀಕೃಷ್ಣ || ೩ ||

## ೮೮. ದೇವರನ್ನು ನಂಬು

ದ್ವಿಜಾವಂತಿರಾಗ ಆದಿತಾಳ

ಯಾಕೆ ಜೀವವೆ ನೀ ಶ್ರೀಕಾಂತನ ಮರೆವಿ | ವಿ-
ವೇಕವೆ ನಿನಗೆ ಇದು || ಪ ||
ಜೋಕೆಯಿಂದಲಿ ನಿನ್ನ ಸಾಕುವ ಶ್ರೀಹರಿಯು
ಬೇಕಾದ ವರವೀವ ಭಕ್ತವತ್ಸಲ ಧೊರೆಯಾ || ಅ. ಪ. ||
ಲೇಸಾದರು ವಿಷಯದಾಸೆಯು ಬಿಡಲೊಲ್ಲಿ
ಏಸು ಜನುಮಂಗಳಾದರು |
ಕಾಸುಬಾಳದ ಸಂಸಾರದೊಳು ತೊಳಲುವಿ
ಹೇಸಿಕಿಲ್ಲವೇ ನಿನಗೆ |
ಈ ಶರೀರವು ಎನ್ನದೆಂದು ತಿಳಿದು ನೀ
ಸೋಸಿಲಿ ಇರುವೇ ಬಿಡದೆ ||
ದೋಷರಹಿತ ಶ್ರೀನಿವಾಸನ ಸ್ತುತಿಸಿ ನೀ
ದೋಷವ ಕಳೆದೆನ್ನ ಪೋಷಿಸೆನ್ನದಲೇ || ೧ ||
ಸತಿ ಸುತರನು ಹ್ಯಾಂಗ ಸಾಕೇನೆಂದು
ವೃಥಾ ಅತಿ ಚಿಂತೆ ನಿನಗ್ಯಾತಕೊ |

ಕ್ಷಿತಿಪತಿ ಲೋಕವನೆಲ್ಲ ಪೊರೆವನಿರಲು
ಗತಿ ನೀನವರಿಗೇನೋ ।
ಗತಿನಿನಗಾಗುವ ಹಿತಚಿಂತನೆ ಮಾಡೊ
ಮತಿಹೀನನಾಗದಲೆ ॥
ರತಿಪತಿಪಿತ ಲಕ್ಷ್ಮೀಪತಿ ನೀನೆ ಗತಿಯೆಂದು
ಪ್ರತಿಪ್ರತಿಕ್ಷಣ ಹರಿಕಥೆ ಕೇಳದಲೆ ॥ ೨ ॥
ಹೊಟ್ಟೆಗೋಸುಗ ಕ್ರಿಯಾಭ್ರಷ್ಟರ ಸ್ತುತಿಸಿ
ಕಷ್ಟಪಡುವದ್ಯಾತಕೊ ।
ಪುಟ್ಟಿಸಿದವ ಗೇಣು ಹೊಟ್ಟೆಗೆ ಕೊಡನೇನೊ
ಸೃಷ್ಟ್ಯಾದೃಷ್ಟ ಕರ್ತನು
ಕೆಟ್ಟುಹೋಗದೆ ನೀನು ಶಿಷ್ಟರ ಸೇವಿಸೊ
ದುಷ್ಟಗುಣಗಳಳಿಯೊ ॥
ಎಷ್ಟು ಹೇಳಲಿ ಮನೋಭೀಷ್ಟ ಪೂರೈಸುವ
ಸೃಷ್ಟೀಶ ಗುರು ಶ್ರೀ ಶ ವಿ ಠ್ಠ ಲ ನ್ನ ನೆರೆನಂಬೊ ॥ ೩ ॥

## ೪೯. ನೆನೆದು ಸುಖಿಯಾಗು

ಮುಖಾರಿರಾಗ ಝಂಪೆತಾಳ

ಎಲೊ ಎಲೊ ಜೀವಾತ್ಮ ನೀ ।
ಸುಲಲಿತಾತ್ಮನ ನೆನೆದು ಸುಖಿಯಾಗೋ ಮನವೆ ॥ ಪ ॥
ಇಕ್ಷುದಂಡ ಕೈಯೊಳಿರೆ ಇಂಧನವ ಮೆಲಲ್ಯಾಕೆ
ಅಕ್ಷಯಪಾತ್ರೆ ಇರಲು ಹಸಿದು ಇರಲ್ಯಾಕೆ ॥
ನಿಕ್ಷೇಪ ನಿಧಿಯಿರಲು ನಿರುತ ದಾರಿದ್ರ್ಯವ್ಯಾಕೆ
ಪಕ್ಷಿವಾಹನನಿರಲು ಪರದೈವವ್ಯಾಕೆ ॥ ೧ ॥
ಸುರಧೇನು ಕೈಸೇರಿ ಸುಖವಿಲ್ಲದಿರಲ್ಯಾಕೆ
ಗರುಡ ಮಂತ್ರವ ಜಪಿಸೆ ಗರಳ ಭಯವ್ಯಾಕೆ ॥
ತರಣಿ ಮೊದಲುದಯಿಸಲು ಹಲವು ಜ್ಯೋತಿಗಳ್ಯಾಕೆ
ಮುರಹರನ ಪೂಜಿಸದೆ ಮುಂದುಗೆಡಲ್ಯಾಕೆ ॥ ೨ ॥
ಭಾವಶುದ್ಧಿಯಿಲ್ಲದಿಹ ಬಯಲ ಡಂಭಕವ್ಯಾಕೆ
ದೇವತಾಂಕಿತವಿರದ ದೇಹ ತಾನ್ಯಾಕೆ ॥

ಆವಾಗ ಹರಿಯಿರಲು ಅನ್ಯ ಚಿಂತೆಗಳ್ಯಾಕೆ
ಕಾವ ಪುರಂದರವಿಠ್ಠಲನ ಭಜಿಸದೆ ಕೆಡಲ್ಯಾಕೆ ॥ ೩ ॥

## ೯೦. ನಂಬಿದವನನ್ನು ಕಾಯಬೇಕು

ಶಂಕರಾಭರಣ ರಾಗ ಆದಿತಾಳ

ನಾರಾಯಣ ನಿನ್ನ ನಂಬಿದೆ । ನಿನ್
ಹೊರತು ಪೊರೆವ ದೈವವೆಲ್ಲಿದೆ ॥ ಪ ॥
ನಾ, ಮೀರಿ ದುಷ್ಕರ್ಮವ ಮಾಡಿದೆ ।
ಅ-ಪಾರ ಮಹಿಮನೆ ದಯಾನಿಧೆ ॥ ಅ. ಪ. ॥
ನಾನಾ ಯೋನಿಗಳಲ್ಲಿ ಬಂದೆನೊ
ಮನ ತಾಳಲಾರದೆ ಬಲು ನೊಂದೆನೊ ॥
ದೀನರಕ್ಷಕ ಎನ್ನಗತಿ ಮುಂದೇನೊ
ಮಾನದಿ ಪಾಲಿಪ ಧೊರೆ ನೀನೋ ॥ ೧ ॥
ದಾಸರ ಮನ ಉಲ್ಲಾಸನೆ, ಶ್ರೀಶ
ಆಶ್ರಿತ ಜನರನು ಪೋಷಿಪನೆ ॥
ಸಾಸಿರದಾನಂತ ರೂಪನೆ, ಕ್ಲೇಶ
ನಾಶಮಾಡಿಸೊ ಶ್ರೀನಿವಾಸನೆ ॥ ೨ ॥
ರಂಗನಗರ ಉತ್ತುಂಗನೆ, ಉ-
ತ್ತುಂಗಗುಣಗಳ ಅಂತರಂಗನೆ ॥
ವಿ-ಹಂಗ ಗರುಡಗಮನನೆ
ಅ-ನಂಗಪಿತ ರಂಗವಿಠ್ಠಲನೆ ॥ ೩ ॥

## ೯೧. ಮುಮುಕ್ಷುವು ಹೇಗೆ ಇರಬೇಕು

ಆನಂದಭೈರವಿ ರಾಗ ಅಟತಾಳ

ಸುಮ್ಮನೆ ಬರುವದೆ ಮುಕ್ತಿ (ಭಕ್ತಿ) ॥ ಪ ॥
ನಮ್ಮ ಅಚ್ಯುತಾನಂತನ್ನ ನೆನೆಯದೆ ಭಕ್ತಿ (ಮುಕ್ತಿ) ॥ ಅ. ಪ. ॥
ಮನದಲ್ಲಿ ದೃಢವಿರಬೇಕು, ಪಾಪಿ
ಜನರ ಸಂಸರ್ಗವ ನೀಗಲು ಬೇಕು ॥

ಅನುಮಾನವನು ಬಿಡಬೇಕು, ತನ್ನ
ಮನವ ಶ್ರೀಹರಿಗೆ ಒಪ್ಪಿಸಿಕೊಡಬೇಕು || ೧ ||

ಕಾಮಕ್ರೋಧವ ಬಿಡಬೇಕು, ಹರಿ
ನಾಮ ಸಂಕೀರ್ತನೆಗಳ ಮಾಡಬೇಕು ||
ಹೇಮದಾಸೆಯ ಬಿಡಬೇಕು, ನಮ್ಮ
ಕಮಲನಾಭನ ನೆರೆ ನಂಬಲುಬೇಕು || ೨ ||

ಮಂದಮತಿಯ ಬಿಡಬೇಕು, ದೇಹ
ಬಂಧುಬಾಂಧವರ ಸ್ನೇಹವ ಬಿಡಬೇಕು ||
ನಿಂದಿಸಿದರೆ ಹಿಗ್ಗಬೇಕು, ಕೋಪ
ಬಂದಾಗ ಸೈರಣೆ ಬಿಡದಿರಬೇಕು || ೩ ||

ಹರಿಯೇ ಗುರುವೆನ್ನಬೇಕು, ಅಂಥ
ಗುರುವೇ ಪರದೈವವೆಂತೆನ್ನಬೇಕು ||
ಪರವಸ್ತು ಒಲ್ಲೆನ್ನಬೇಕು, ದೇಹ
ಸ್ಥಿರವಲ್ಲವೆಂತೆಂದು ತಿಳಿಯಲುಬೇಕು || ೪ ||

ವ್ಯಾಪಾರವನು ಬಿಡಬೇಕು, ನಮ್ಮ
ಶ್ರೀಪತಿ ಪುರಂದರವಿಠಲೆನ್ನಬೇಕು ||
ಪಾಪರಹಿತನಾಗಬೇಕು, ಜ್ಞಾನ
ದೀಪದ ಬೆಳಕಿಲಿ ಓಡ್ಯಾಡಬೇಕು || ೫ ||

## ೯೨. ಅನುಭವದಿಂದ ಮುಕ್ತಿ

ನಾದನಾಮಕ್ರಿಯೆರಾಗ ಝಾಪುತಾಳ

ಅನುಭವದಡುಗೆಯ ಮಾಡಿ, ಅದ–
ಕ್ಕನುಭವಿಗಳು ಬಂದು ನೀವೆಲ್ಲ ಕೂಡಿ || ಪ ||
ತನುವೆಂಬ ಭಾಂಡವ ತೊಳೆದು, ಕೆಟ್ಟ
ಮನದ ಚಂಚಲವೆಂಬ ಮುಸುರೆಯ ಕಳೆದು ||
ಘನವಾಗಿ ಮನೆಯನ್ನು ಬಳಿದು, ಅಲ್ಲಿ
ಮಿನುಗುವ ತ್ರಿಗುಣದ ಒಲೆಗುಂಡು ನೆಡೆದು || ೧ ||

ವಿರಕ್ತಿಯೆಂಬುವ ಮಡಿಯುಟ್ಟು, ಪೂರ್ಣ
ಹರಿಭಕ್ತಿಯೆಂಬ ನೀರನ್ನೆ ಸರಿಟ್ಟು ||
ಅರಿವೆಂಬ ಬೆಂಕಿಯು ಕೊಟ್ಟು, ಮಾಯಾ
ಮರವೆಂಬ ಕಾಷ್ಟವ ಮುದದಿಂದ ಸುಟ್ಟು || ೨ ||
ಕರುಣೆಂಬೊ ಸಾಮಗ್ರಿ ಹೂಡಿ, ಮೋಕ್ಷ
ಪರಿಕರವಾದಂಥ ಪಾಕವ ಮಾಡಿ ||
ಗುರು ಶರಣರು ಸವಿದಾಡಿ, ನಮ್ಮ
ಪುರಂದರವಿಠಲನ ಬಿಡದೆ ಕೊಂಡಾಡಿ || ೩ ||

## ೯೩. ನಿಜಸಾಧನ

ಕಾಂಬೋಧಿರಾಗ ಅಟತಾಳ

ಏನು ವ್ರತವೇನು ಸಾಧನಗಳೇನೊ || ಪ ||
ಸ್ವಾನುಭವದ ಜ್ಞಾನ ಹೀನ ಮಾನವನೇ || ಅ. ಪ. ||
ಶಾಕವ್ರತವೆನುತ ಫಲ ಶಾಕಗಳ ಬಿಡುವಂತೆ
ಬೇಕಾದ ಆಕಾಂಕ್ಷೆ ಬಿಡಬಾರದೇ ||
ಸಾಕೆನಿಸದೆ ರತಿಗೆ ಸತತ ಮನಕೊಡುವಂತೆ
ಶ್ರೀಕಾಂತನೊಳು ಮನವನಿಡಬಾರದೇ || ೧ ||
ನೇಮಗಳಮಾಡಿ ಪರಪಾಕವನು ಬಿಡುವಂತೆ
ಕಾಮಕ್ರೋಧಂಗಳನು ಬಿಡಬಾರದೆ ||
ತಾಮಸ ಕಣ್ಣಿಂದ ನೋಡೆನೆಂಬುವ ನಿಷ್ಠೆ
ನೇಮವನು ಪರಸತಿಯೊಳಿಡಬಾರದೇ || ೨ ||
ಹೇಸಿ ದುರ್ಗಂಧಗಳಿಗೋಸರಿಸುವಂದದಲಿ
ಆಶೆಪಾಶಾದಿಗಳ ಬಿಡಬಾರದೇ ||
ಈಶ ಶ್ರೀ ಪುರಂದರವಿಠ್ಠಲನ ಸೇವೆಯೋ
ಲೇಸೆನುತ ಸಂತೋಷಿಸಲು ಬಾರದೇ || ೩ ||
ಹರಿಸ್ಮರಣೆಗೆ ಪೋಪ ದೋಷ, ನಾನಾ
ಪರಿಪರಿ ವ್ರತಧರ್ಮ ಮಾಡಲು ಲೇಶ ||
ಸರಿಯವು ತರುವಾಯ ಮೋಸ, ದಿಂದ
ತಿರುತಿರಿಗಿ ಪುಟ್ಟಿ ಪಡುವರು ಕ್ಲೇಶ || ೪ ||

ಒಬ್ಬರ ಸರಿಗಟ್ಟದಿರೊ, ನಿನಗೆ
ಲಭಿಸಿದಷ್ಟೆ ಭಾಗ್ಯ ಸುಖವನೆ ಸಾರೋ ||
ಉಬ್ಬಲದಾಟಸುವರ್ಯಾರೋ, ಅಲ್ಲ
ಲ್ಹಬ್ಬದ ವಿ ಜ ಯ ವಿ ಠ ಲ ನಂ ಘ್ರಿ ಸಾರೋ || ೫ ||

## ೯೪. ಒಳಗಣ್ಣಿನಿಂದ ನೋಡು

ಕಾಪಿ ರಾಗ ಛಾಪುತಾಳ

ಕಣ್ಣಿನೊಳಗೆ ನೋಡೊ ಹರಿಯ, ಒಳ
ಗಣ್ಣಿನಿಂದಲಿ ನೋಡೊ ಮೂಜಗಧೊರೆಯ || ಪ ||
ಆಧಾರ ಮೊದಲಾದ ಆರು, ಚಕ್ರ
ಶೋಧಿಸಿಬಿಡಬೇಕು ಈಕ್ಷಣ ಮೂರು ||
ಸಾಧಿಸಿ ಸುಷುಮ್ನ ಏರು, ಅಲ್ಲಿ
ಭೇದಿಸಿ ನೀ ಪರಬ್ರಹ್ಮನ ಸೇರು || ೧ ||
ಎವೆಹಾಕದ ಮೇಲೆ ನೋಡಿ, ಬ್ಯಾಗ
ಪವನದಿಂದಲಿ ವಾಯುಬಂಧನಮಾಡಿ ||
ಕವಿದು ನಾದವ ಪಾಕಮಾಡಿ, ಅಲ್ಲಿ
ನವವಿಧ ಭಕ್ತಿಲಿ ನಲಿನಲಿದಾಡಿ || ೨ ||
ಅಂಡದೊಳಗೆ ಆಡುತಾನೆ, ಭಾನು
ಮಂಡಲ.ನಾರಾಯಣನೆಂಬುವನೇ ||
ಕುಂಡಲಿ ತುದಿಯೊಳಿದ್ದಾನೆ, ನಮ್ಮ
ಪು ರಂ ದ ರ ವಿ ಠ ಲ ನು ಪಾಲಿಸುತಾನೆ || ೩ ||

## ೯೫. ಯೋಗಸಾಧನ

ನಾದನಾಮಕ್ರಿಯೆ ರಾಗ ಛಾಪುತಾಳ

ಊರ ದೇವರ ಮಾಡಬೇಕಣ್ಣ, ತನ್ನೊಳಗೆ ತಾನೆ || ಪ ||
ಊರ ದೇವರ ಮಾಡಿರೆಂದು ಸಾರುತಿವೆ ಶ್ರುತೀಸ್ಮೃತಿಗಳು
ದ್ವಾರಗಳೊಂಬತ್ತು ಮುಟ್ಟಿ ನಿಲ್ಲಿಸಿ ಭ್ರೂಮಧ್ಯದಲ್ಲಿ || ಅ. ಪ. ||
ಎಷ್ಟು ಯುಗಗಳು ತೀರಿ ಹೋಯ್ತಣ್ಣ, ದೇವರ ಮಾಡದೆ

ಕಷ್ಟದಿಂದ ನೊಂದೆ ಕಾಣಣ್ಣ ||
ಅಷ್ಟದಳವ ಕಂಭ ನಿಲ್ಲಿಸಿ ನಷ್ಟ ಬರುವ ಕಾಲದಲ್ಲಿ
ಕೆಟ್ಟ ದೈವಕಾಗಿ ನೀನು ದುಷ್ಟಕೋಣನ ಶಿರವ ತರಿದು || ೧ ||

'ನಾನೆ' ಎಂಬೊ ಮೇಕೆಹೋತಣ್ಣ, ಅದಕೆ ತಕ್ಕ
ಜ್ಞಾನವೆಂಬೊ ಪೋತರಾಜಣ್ಣ ||
ಮಾನವೆಂಬ ಭಾಟಿಹೊಡೆದು ಹೀನ ಹೋತನ ಸೀಳಿಬಿಸುಟಿ
ಧ್ಯಾನಗುಡಿಸಲು ಸೂರೆಗೊಂಡು ತಾನೆ ಬೆಳಗುವ ಜ್ಯೋತಿನಿಲ್ಲಿಸಿ || ೨ ||

ಕಷ್ಟ ತರ್ಕವೆಂಬ ಕುರಿಯಣ್ಣ, ಅದನು ತಂದು
ಕಟ್ಟ ತಲೆಯನು ಹೊಡೆಯಬೇಕಣ್ಣ ||
ಅಷ್ಟಮದದ ಕುರಿಗಳನ್ನು ಕಟ್ಟ ತಲೆಯನು ಚಂಡನಾಡಿ
ಅಟ್ಟ ತಿರುಗುವ ಕೋಳಿಯನ್ನು ಕುಟ್ಟ ಸೂರೆಹಾಕುತಲಿ || ೩ ||

ನಾಳೆ ನೋಡೋಣೆನ್ನ ಬ್ಯಾಡಣ್ಣ, ಕೇಳಣ್ಣ ನಿನ್ನ
ಬಾಳು ಅಸ್ಥಿರವೆಂದು ತಿಳಿಯಣ್ಣ ||
ಪಾಳ್ಯಗಾರನಂತೆ ಬರನು ಬಾಳುವ ಕಾಲದಿ ಯಮನು
ಕೋಳಿಪಿಳ್ಳೆ ಆಡುವಾಗ ಹಳೇಹದ್ದು ಒಯ್ಯುವಂತೆ || ೪ ||

ಹೆಂಡರು ಮಕ್ಕಳು ಸುಳ್ಳಣ್ಣ, ಕೇಳಣ್ಣ ನಿನ್ನ
ಮಂಡೆ ತುಂಬ ಬಳಗ ಕಾಣಣ್ಣ ||
ಕುಂಡಗೋಲ ಯಮನು ಬಂದು ಮಂಡೆಮೇಲೆ ಹೊಯ್ಯುವಾಗ
ಹೆಂಡಿರು ಮಕ್ಕಳು ನಿನ್ನ ಕಂಡು ಭಂಗಬಿಡಿಸಬಲ್ಲರೆ || ೫ ||

ಮತ್ತೆ ಹೆಣ್ಣಿನ ನೋಡುವಿಯಲ್ಲೊ, ನೀ ಗಳಿಸಿದಂಥ
ಬುತ್ತಿನೋಡಿ ಉಬ್ಬುವೀಯಲ್ಲೊ ||
ಮೃತ್ಯುವಿನ ಬಾಯಿಗೆ ನೀನು ತುತ್ತು ಆಗಿ ಹೋಗಬೇಡ
ತೊತ್ತು ಆಗಿ ಗುರುವಿಗೆ ನೀ ಉತ್ತಮ ಸೇವೆಯನು ಮಾಡು || ೬ ||

ಮುಂದೆ ಇಂಥ ಜನ್ಮ ಬರದಣ್ಣ, ನೋಡಣ್ಣ ನಿನಗೆ
ಮಂದಮತಿಯು ಆಗಬೇಡಣ್ಣ ||
ಹಿಂದಿನ ಕಷ್ಟವ ಮರೆದು ಮುಂದಿನ ಹಮ್ಮನ್ನು ತೊರೆದು
ತಂದೆ ಪು ರಂ ದ ರ ವಿ ಠ್ಠ ಲ ನ್ನ ಹೊಂದಲು ನೀ ಮುಕ್ತನಣ್ಣ || ೭ ||

## ೯೬. ಸಾಧನದಿಂದ ಶ್ರೇಷ್ಠಲಾಭ

ಸೌರಾಷ್ಟ್ರರಾಗ ಅಟತಾಳ

ಲಾಭ ಸಾಲದೆ ಇಂಥ ಲಾಭ ಸಾಲದೆ || ಪ ||
ಲಾಭವಿದೆ ಮಿಕ್ಕದೊಂದು ಲಾಭವು ಲೆಖ್ಖವು ಹೇಳಾ || ಅ. ಪ. ||
ನರಹರಿದಾಸರ ಚರಣಸೇವೆಯು ಎಂಬ
ಹರಿಚಂದನಕೆ ಸಾಕಿದ ಮಾರನಂತಿಪ್ಪದೊಂದು || ೧ ||
ಹರಿಚರಿತಾಮೃತ ಸವಿಗೆ ಕಿವಿ ನೆಚ್ಚಿ
ಪರಿಮಳಕೆರಗುವ ಮರಿದುಂಬಿಯಂತಿಪ್ಪ || ೨ ||
ಜಲಜನಾಭನ ಚೆಲುವಿನ ಜಲನಿಧಿ-
ಯೊಳಗೆ ಎನ್ನ ಕಂಗಳು ಮೀನಂತೆ ಲೋಲಾಡುವ || ೩ ||
ನಳಿನಾಕ್ಷನ ಮೂರ್ತಿಗೆ ಮನಮೆಚ್ಚಿ ಮರೆಯದೆ
ಎಳೆಗರು ತನ್ನ ತಾಯ ಹಲಬುವ ಪರಿಯಪ್ಪ || ೪ ||
ಶ್ರೀ ಕೃಷ್ಣ ಭಕುತಿ ಸುಧೆ ಸವಿಗೆ ಮುಕ್ತಿಯು
ಸರಿಯಲ್ಲ ಸಾರವೆಂದು ಹರಿಗೆ ಮರುಳಾಗಿಪ್ಪ || ೫ ||

## ೯೭. ನನ್ನಲ್ಲಿ ಬಂದು ಇರು

ಆರಭಿರಾಗ ಅಟತಾಳ

ಬಾರೋ ಮನೆಗೆ ಗೋವಿಂದ, ನಿನ್ನಂಘ್ರಿಕಮಲವ
ತೋರೋ ಎನಗೆ ಮುಕುಂದ || ಪ ||
ನಲಿದಾಡು ಮನದಲಿ ಮಾರಪಿತ ಆನಂದ ||
ಚಾರುತರ ಶರೀರ ಕರುಣಾವಾರಿನಿಧಿ ಭವಘೋರನಾಶನ
ವಾರಿಜಾಸನವಂದ್ಯ ನೀರಜ ಸಾರಸದ್ಗುಣ ಹೇ ರಮಾಪತೇ || ಅ. ಪ. ||
ನೋಡು ದಯದಿಂದೆನ್ನ, ಕರಪದುಮ ಶಿರದಲಿ
ನೀಡು ಭಕ್ತ ಪ್ರಸನ್ನ, ನಲಿದಾಡು ಮನದಲಿ
ಬೇಡಿಕೊಂಬುವೆನೋ ನಿನ್ನ, ಆನಂದಘನ್ನ ||
ಮಾಡದಿರು ಅನುಮಾನವ ಕೊಂ-ಡಾಡುವೆನು ತವ ಮಹಿಮೆಗಳನು
ಜೋಡಿಸುವೆ ಕರಗಳನು ಚರಣಕೆ, ಕೂಡಿಸೋ ತವ
ದಾಸಜನರೊಳು || ೧ ||



೧೧—೧೪೧೧

ಹೇಸಿ ವಿಷಯಗಳಲ್ಲಿ, ತೊಳಲಾಡಿ ನಾ ಬಲು
ಕ್ಲೇಶಪಡುವದು ಬಲ್ಲಿ, ಧನ ಯುವತಿಗಳ ಸುಖ
ಲೇಶವೆಂಬುವದಕೊಲ್ಲಿ, ಆಸೆ ಬಿಡಿಸಿಲ್ಲಿ ||
ಏಸು ಜನ್ಮದ ದೋಷದಿಂದಲಿ, ಈಸುವೆನು ಇದರೊಳಗೆ ಇಂದಿಗೆ
ಮೋಸವಾಯಿತು ಆದುದಾಗಲಿ, ಶ್ರೀಶ ನೀ ಕೈಪಿಡಿದು ರಕ್ಷಿಸು || ೨ ||
ನೀನೇ ಗತಿಯು ಎನಗಿಂದು, ಉದ್ಧರಿಸೊ ಬೇಗನೆ
ದೀನ ಜನರಿಗೆ ಬಂಧೋ, ನಾ ನಿನ್ನ ಸೇವಕ
ಶ್ರೀನಿವಾಸ ಎಂದೆಂದು, ಕಾರುಣ್ಯಸಿಂಧೋ ||
ಪ್ರಾಣಪತಿ ಹೃದಯಾಬ್ಜ ಮಂಟಪ ಸ್ಥಾನದೊಳಗಭಿವ್ಯಾಪ್ತ ಚಿನುಮಯ
ಧ್ಯಾನಗೋಚರನಾಗು ಕಣ್ಣಿಗೆ, ಕಾಣುವೆನು ಶ್ರೀ ರಂಗ ವಿ ಠ ಲ || ೩ ||

## ೯೮. ನನ್ನ ಹೃದಯವಾಸಿಯಾಗು

ಪಂತುವರಾಳಿ ರಾಗ ಆದಿತಾಳ

ಸದಾ ಎನ್ನ ಹೃದಯದಲ್ಲಿ ವಾಸಮಾಡೊ ಶ್ರೀಹರಿ || ಪ ||
ನಾದಮೂರ್ತಿ ನಿನ್ನ ಪಾದ ಮೋದದಿಂದ ಭಜಿಸುವೆ || ಅ. ಪ ||

ಜ್ಞಾನವೆಂಬೋ ನವರತ್ನದ ಮಂಟಪದ ಮಧ್ಯದಲ್ಲಿ
ಗಾನಲೋಲನ ಕುಳ್ಳಿರಿಸಿ ಧ್ಯಾನದಿಂದ ಭಜಿಸುವೆ || ೧ ||

ಭಕ್ತಿರಸವೆಂಬ ಮುತ್ತು ಮಾಣಿಕ್ಯದ ಹರಿವಾಣದಿ
ಯುಕ್ತನಾಗಬೇಕು ಎಂದು ಮುತ್ತಿನಾರತಿ ಎತ್ತುವೆ || ೨ ||

ನಿನ್ನ ನಾನು ಬಿಡುವನಲ್ಲ ಎನ್ನ ನೀನು ಬಿಡಲು ಸಲ್ಲ
ಘನ್ನ ಮಹಿಮೆ ವಿ ಜ ಯ ವಿ ಠ್ಠ ಲ ನಿನ್ನ ಭಕ್ತರ ಕೇಳೊ ಸೊಲ್ಲ || ೩ ||

## ೯. ವ್ಯಾಕುಲಭಾವ

ಭಕ್ತನು ತದೇಕ ಚಿತ್ತನಾಗಿ ಪರಮಾತ್ಮನ ಧ್ಯಾನದಿಂದಲೆ ಹಣ್ಣಾದ ನೆಂದರೆ ಅದು ವ್ಯಾಕುಲಭಾವ, ವಿಕಲಾವಸ್ಥೆ, ಅಥವಾ ವಿರಹಭಾವ ಎಂದೆನಿಸು ವದು. ಈ ಸ್ಥಿತಿಯಲ್ಲಿ ಭಕ್ತನಿಗೆ ಪರಮಾತ್ಮನ ವಿರಹವು ಅತ್ಯಂತ ಅಸಹ್ಯ ವಾಗುವದು. ಕರುವು ತಾಯಿಯನ್ನು ನೆನೆಸಿ ಬಳಲುವಂತೆ, ತಾಯಿ ತನ್ನ ಕೂಸನ್ನು ಕಳಕೊಂಡು ಹಂಬಲಿಸುವಂತೆ, ಭಕ್ತನು ಪರಮಾತ್ಮನನ್ನು ಕುರಿತು ಕಳವಳಿಸಲಾರಂಭಿದನೆಂದರೆ ಅದು ವ್ಯಾಕುಲಭಾವವು. ಭಕ್ತನಿಗೆ ಆಗ ಎರಡನೆ ಯದೇನೂ ಬೇಕಾಗುವುದಿಲ್ಲ, ಯಾವ ಆಲೋಚನೆಯೂ ಬರುವುದಿಲ್ಲ ಹಾಗೂ ಅವನು ಅತ್ಯಂತ ವಿಹ್ವಲ ಹಾಗೂ ದೀನಸ್ಥಿತಿಯಲ್ಲಿರುತ್ತಾನೆ. ವಿರಹಿ ವಿರಹಿಣಿ ಯರು ಅಗಲಿಕೆಯಿಂದ ಬಳಲುತ್ತಿರುವ ಸ್ಥಿತಿಯೆ ವಿಕಳಾವಸ್ಥೆಯೆನಿಸುವದು.

ಆರ್ತಭಾವ ಹಾಗೂ ವ್ಯಾಕುಲಭಾವ ಇವು ಒಂದೇ ಎಂದು ಹಲವರು ತಿಳಿಯುವ ಸಂಭವವಿದೆ. ಆದರೆ ಹಾಗಿಲ್ಲ. ಆರ್ತಭಾವದಲ್ಲಿ ಮನುಷ್ಯನು ದುಃಖದಿಂದ ಪೀಡಿತನಾಗಿ ತನ್ನ ದುಃಖದ ಮೂಲಕ ದೇವರಿಗೆ ಮೊರೆ ಇಡು ವನು. ಆದರೆ ಈ ಭಾವದಲ್ಲಿ ಭಕ್ತನು ವಿರಹದ ಮೂಲಕ, ದೇವರು ತನಗೆ ಬೇಗ ದೊರೆಯಲೊಲ್ಲ ಎಂದು ಮೊರೆ ಇಡುವನು. ಅಲ್ಲಿ ದುಃಖಗಳ ಭಯದಿಂದ ಭಕ್ತನು ದೇವರೆಡೆಗೆ ಹೋಗುವನು, ಇಲ್ಲಿ ಪ್ರೇಮಾತಿಶಯದ ಮೂಲಕ ವಿರಹ ಪಟ್ಟು ಹಂಬಲಿಸುವನು.

### ೯೯. ನಿನ್ನನ್ನು ಬಿಟ್ಟು ಇರಲಾರೆ

ಮುಖಾರಿ ರಾಗ ಏಕತಾಳ

**ತೊರೆದು ಜೀವಿಸಬಹುದೆ ಹರಿ ನಿನ್ನ ಚರಣಗಳ || ಪ ||**
**ಬರಿದೆ ಮಾತ್ಯಾಕಿನ್ನು ಅರಿದು ಪೇಳುವೆನಯ್ಯ || ಅ. ಪ. ||**
**ತಾಯಿತಂದೆಯ ಬಿಟ್ಟು ತಪವ ಮಾಡಲುಬಹುದು**
**ದಾಯಾದಿ ಬಂಧುಗಳ ಬಿಡಲುಬಹುದು ||**

ರಾಯಮುನಿದರೆ ಮತ್ತೆ ರಾಜ್ಯವಬಿಡಬಹುದು
ಕಾಯಜಪಿತ ನಿನ್ನಡಿಯ ಬಿಡಲಾಗದು || ೧ ||
ಒಡಲುಹಸಿದರೆ ಇನ್ನು ಅನ್ನವಬಿಡಬಹುದು
ಪಡೆದ ಕ್ಷೇತ್ರವಬಿಟ್ಟು ಹೊರಡಬಹುದು ||
ಮಡದಿಮಕ್ಕಳ ಬಿಟ್ಟು ಅಡವಿಸೇರಲುಬಹುದು
ಕಡಲೊಡೆಯ ನಿಮ್ಮಡಿಯ ಘಳಿಗೆಬಿಡಲಾಗದು || ೨ ||
ಪ್ರಾಣವ ಪರರಿಗೆ ಬೇಡಿದರೆ ಕೊಡಬಹುದು
ಮಾನಾಭಿಮಾನವ ತಗ್ಗಿಸಲುಬಹುದು ||
ಪ್ರಾಣನಾಯಕನಾದ ಆ ದಿ ಕೇ ಶ ವ ರಾಯ
ಜಾಣ ಶ್ರೀಕೃಷ್ಣ ನಿಮ್ಮಡಿಯ ಬಿಡಲಾಗದು || ೩ ||

## ೧೦೦. ಇಷ್ಟೇಕೆ ತಾತ್ಸಾರ ಮಾಡುವೆ

ರೇಗುಪ್ತಿ ರಾಗ ಅಟತಾಳ

ಯಾಕೆ ಕಡೆಗಣ್ಣಿಂದ ನೋಡುವೆ, ಕೃಷ್ಣ ನೀ ಕರುಣಾಕರನಲ್ಲವೆ || ಪ ||
ಭಕ್ತವತ್ಸಲ ನೀನಲ್ಲವೆ ಕೃಷ್ಣ | ಚಿತ್ಸುಖದಾತ ನೀನಲ್ಲವೆ
ಅತ್ಯಂತ ಅಪರಾಧಿ ನಾನಾದಡೇನಯ್ಯ | ಇತ್ತಿತ್ತ ಬಾ
ಎನ್ನಬಾರದೆ ರಂಗ || ೧ ||
ಇಂದಿರೆಯರಸ ನೀನಲ್ಲವೆ, ಬಹು | ಸೌಂದರ್ಯನಿಧಿ ನೀನಲ್ಲವೆ
ಮಂದಮತಿ ನಾನಾದಡೇನು ಕೃಪಾ | ಸಿಂಧು ನೀ
ರಕ್ಷಿಸಬಾರದೆ ರಂಗ || ೨ ||
ದೋಷಿಯು ನಾನಾದಡೇನಯ್ಯ, ಸರ್ವ | ದೋಷರಹಿತ ನೀನಲ್ಲವೆ
ಘಾಸಿಯಾತಕೆ ನಿನ್ನ ನಂಬಿದೆ ಸಲಹಯ್ಯ
ಶೇಷಶಾಯಿ ಶ್ರೀ ಪು ರಂ ದ ರ ವಿ ಠ ಲ || ೩ ||

## ೧೦೧. ಅಂತ್ಯಕಾಲಕ್ಕೆ ನೀನೇ ಒದಗಬೇಕು

ಶಂಕರಾಭರಣ ರಾಗ ಅಟತಾಳ

ಬರಬೇಕೊ ರಂಗಯ್ಯ ನೀ ಬರಬೇಕೊ || ಪ ||
ಬರಬೇಕೊ ಬಂದು ಒದಗಬೇಕೊ ಮುಮುಗುರು
ನರಹರಿ ನಾರಾಯಣ ನೀನಾ ಆ ಸಮಯಕ್ಕೆ || ಅ. ಪ. ||

ಕಂಠಕ್ಕೆ ಪ್ರಾಣಬಂದಾಗ, ಎನ್ನ ನಂಟರಿಷ್ಟರು ಬಂದಳುವಾಗ
ಗಂಟುಹುಬ್ಬಿನ ಕುಲಬಂಟರು ಕವಿದೆನ್ನ
ಗಂಟುತಾಕುವಾಗ ವೈಕುಂಠನಾರಾಯಣ ॥ ೧ ॥

ನಾರಿಯು ಪುತ್ರಮಿತ್ರರು, ಬಂಧುಗ | ಳಾರೆನ್ನ ಸಂಗಡ ಬಾರರು
ಆರಿಗಾರಿಲ್ಲವುನಾರ್ಭಟಿಕೆ, ಅಸು
ಹಾರಿ ಮೈಮರೆವಾಗ ನೀರೇರುಹನಾಭ ॥ ೨ ॥

ಕರಿ ಪ್ರಲ್ಹಾದಾದಿ ಭಕ್ತರ, ಸತಿ | ಕರಿಸಲು ಒದಗಿದೆ ಶ್ರೀಧರ
ನೆರೆಹೀನನೆನ್ನ ಉದ್ಧರಿಸಿ ಅಚ್ಯುತ ನಿನ್ನ
ಚರಣದೊಳಿಂಬಿಡೊ ಪು ರಂ ದ ರ ವಿ ಠ ಲ ॥ ೩ ॥

## ೧೦೨. ಇನ್ನೂ ದಯೆಬಾರದೇ

### ಕಲ್ಯಾಣಿ ರಾಗ ಅಟತಾಳ

ಇನ್ನೂ ದಯೆಬಾರದೆ ದಾಸನ ಮೇಲೆ ॥ ಪ ॥
ಪನ್ನಗಶಯನ ಪಾಲ್ಗಡಲೊಡೆಯನೆ ಕೃಷ್ಣ ॥ ಅ. ಪ ॥

ನಾನಾದೇಶಗಳಲ್ಲಿ ನಾನಾಕಾಲಗಳಲ್ಲಿ
ನಾನಾ ಯೋನಿಗಳಲ್ಲಿ ಅಳಿದು ಪುಟ್ಟಿ
ನಾನು ನನ್ನದೆಂಬ ನರಕದೊಳಗೆ ಬಿದ್ದು
ನೀನೇ ಗತಿಯೆಂದು ನಂಬಿದ ದಾಸನ ಮೇಲೆ ॥ ೧ ॥

ಕಾಮಾದಿ ಷಡ್ವರ್ಗ ಗೂಢಾಂಧಕಾರದಿ
ಪಾಮರನಾಗಿದ್ದ ಪಾತಕನು
ಶ್ರೀಮನೋಹರನೆ ಚಿತ್ರಜಜನಕನ
ನಾಮಮುದ್ರಿಕೆಯಿಂದ ನಂಬಿದ ದಾಸನ ಮೇಲೆ ॥ ೨ ॥

ಮಾನಸವಾಚ ಕಾಯದಿ ಮಾಳ್ಪ ಕರ್ಮವು
ದಾನವಾಂತಕ ನಿನ್ನಾಧೀನವಿತ್ತೆ
ಏನು ಮಾಡಿದರೇನು ಪ್ರಾಣನಿನ್ನದು ದೇವ
ಶ್ರೀನಾಥ ಪು ರ ಂ ದ ರ ವಿ ಠ ಲ ದಾಸನ ಮೇಲೆ ॥ ೩ ॥

## ೧೦೩. ನಾನು ಇನ್ನೆಂದು ನಿನ್ನ ಪಡೆಯಬೇಕು

ಕಾಂಬೋಧಿರಾಗ ಝಂಪೆತಾಳ

ಎಂದಿಗೆ ನಾನಿನ್ನು ಧನ್ಯನಾಹೆ || ಪಲ್ಲ ||
ಎಂದಿಗೆ ನಿನ್ನ ಚಿತ್ತಕೆ ಬಾಹೆ || ಅ. ಪ. ||

ಫಲಮರಗಿಡಬಳ್ಳಿ ಕುಲದಲಿಪ್ಪತ್ತು ಲಕ್ಷ
ಜಲಜೀವದೊಳಗೆ ಒಂಭತ್ತು ಲಕ್ಷ
ಅಳಲಿ ಏಕಾದಶ ಲಕ್ಷ ಕ್ರಿಮಿಗಳಲ್ಲಿ
ತೊಳಲಿ ಬಳಲಿದೆನಂಡಜದೊಳು ದಶಲಕ್ಷ || ೧ ||

ಚರಣ ನಾಲ್ಕರಲಿ ಮೂವತ್ತು ಲಕ್ಷ ಜೀವಿಸಿ
ನರನಾಗಿ ಸೇರಿದೆ ನಾಲ್ಕು ಲಕ್ಷ
ಪರಿಪರಿಭವದೊಳಗೆ ನೊಂದೆನಯ್ಯ ನಿನ್ನ
ಸರಸಿಜ ಸಂಭವನ ಕಲ್ಪದಲ್ಲಿ || ೨ ||

ಎಂಬತ್ತು ನಾಲಕು ಲಕ್ಷ ಯೋನಿಗಳಲ್ಲಿ
ಅಂಬುಜನಾಭ ನಿನ್ನ ಲೀಲೆಗಾಗಿ
ಕುಂಭಿಣಿಯಲ್ಲಿ ಬಂದು ನೊಂದೆನಯ್ಯ ಸ್ವಾಮಿ
ಕಂಭುಕಂದರ ಸಿರಿ ಪುರಂದರ ವಿಠಲ || ೩ ||

# ೧೦. ಶಾಂತಭಾವ



ಭಕ್ತನು ಯಾವ ರೀತಿಯಿಂದ ಪರಮಾತ್ಮನನ್ನು ಹೊಗಳಿದರೂ ಅದರಲ್ಲಿ ಪ್ರೇಮವೆಂಬ ಮೂಲ ಭಾವವಂತೂ ಇದ್ದೇ ತೀರಬೇಕು. ಆದರೆ ಭಕ್ತನು ಬೇರೆಬೇರೆ ಅವಸ್ಥೆಗಳಲ್ಲಿರುವಾಗ ಅವನ ಪ್ರೇಮಭಾವವು ಕೂಡ ವಿವಿಧ ರೂಪಗಳನ್ನು ತಾಳುವದು. ಭಕ್ತನು ವಿಹ್ವಲತೆ ಮುಂತಾದ ತೀವ್ರ ಸ್ಥಿತಿಗಳನ್ನು ದಾಟಿದನೆಂದರೆ ಅವನು ಶಾಂತಭಾವದಿಂದ ಪ್ರೇರಿತನಾಗುವನು. ಶಾಂತಭಾವವು ಪ್ರೇಮ ಮೂಲಕವಿದ್ದು ಜ್ಞಾನಯುಕ್ತವಿರುವದು. ಪರಮಾತ್ಮನ ಸರ್ವವ್ಯಾಪಿತ್ವ, ಸರ್ವಶಕ್ತಿಮತ್ವ, ಅಚಿಂತ್ಯತ್ವ, ಐಶ್ವರ್ಯಾದಿಗಳ ಆಕಲನದಿಂದ ಭಕ್ತನು ಸಮಾಧಾನ ಹೊಂದಿ ಒಂದು ಬಗೆಯ ಗಂಭೀರ ಭಾವದಿಂದ ದೇವರನ್ನು ಕೊಂಡಾಡುವನು. ಅದೇ ಶಾಂತಭಾವವೆನಿಸುವದು.

ಈ ಭಾವದಲ್ಲಿರುವಾಗ ಭಕ್ತನು ದೇವರೊಡನೆ ದಾಸ್ಯಸಖ್ಯಾದಿ ಯಾವ ಸಂಬಂಧಗಳನ್ನು ತರದೇ ಅವನನ್ನು ಆರಾಧಿಸುವನು. ಯಾವುದೊಂದೇ ವಿಶಿಷ್ಟ ಸಂಬಂಧಕಿಂತ ಇಲ್ಲಿ ತಾನು ಜೀವಾತ್ಮಾ ಅವನು ಪರಮಾತ್ಮಾ ಎಂಬ ಸಂಬಂಧವನ್ನೆ ಭಕ್ತನು ತನ್ನ ಮುಂದಿಟ್ಟುಕೊಂಡು ದೇವರತ್ತ ಸಾಗುವನು. ಭಕ್ತನು ಈ ಭಾವದಲ್ಲಿರುವಾಗ ಅವನು ಪರಮಾತ್ಮ ಸಾಮರ್ಥ್ಯದ ಬಗ್ಗೆ ಅಚ್ಚರಿ, ಪೂಜ್ಯಭಾವ, ವಿಸ್ಮಯ ಇತ್ಯಾದಿಗಳಿಂದ ತುಂಬಿರುವನು. ಚಾಂಚಲ್ಯ, ತೀವ್ರತೆ ಇವು ಕಡಿಮೆ ಕಂಡರೂ ಈ ಭಾವದಲ್ಲಿ ಗಂಭೀರತೆ ಹೆಚ್ಚಾಗಿರುವದು. ಯಾವಪ್ರಕಾರವಾಗಿ ಹೊಳೆಯು ಬೈಲಿನಲ್ಲಿ ಹರಿಯುವಾಗ ಖಳಖಳ ಸಪ್ಪಳ ಮಾಡುತ್ತ ಹರಿಯುವದೊ ಹಾಗೆ ಭಕ್ತನ ಪ್ರೇಮ ಪ್ರವಾಹವು ಮಿಕ್ಕ ಭಾವಗಳಲ್ಲಿ ಹೆಚ್ಚು ಪ್ರಕಟ ರೀತಿಯಿಂದ ಹರಿಯುತ್ತಿರುವುದು ಕಾಣುವುದು. ಆದರೆ ಅದೇ ಹೊಳೆಯು ಒಂದು ಆಳವಾದ ಕಣಿವೆಯೊಳಗಿಂದ ಹರಿಯುವಾಗ, ಶಾಂತವಾಗಿ, ಗಂಭೀರವಾಗಿ ಹರಿಯುವದು. ಹಾಗೆ ಶಾಂತಭಾವದಲ್ಲಿ ಹರಿಪ್ರೇಮವು ಆಳವಾಗಿ, ಜ್ಞಾನಪೂರ್ವಕವಾಗಿ, ತೆರೆ ನೊರೆಗಳಿಗೆ ಆಸ್ಪದಕೊಡದೆ ಗಂಭೀರ

ವಾಗಿ ಹರಿಯುವದು. ವಿಶಾಲತೆ, ನಿಸ್ಸೀಮತೆ, ಅಪಾರತೆ ಇತ್ಯಾದಿ ಗುಣ ಗಳು ಇಲ್ಲಿ ದೃಗ್ಗೋಚರವಾಗುವವು.

## ೧೦೪. ನೀನು ಸರ್ವವ್ಯಾಪಿ

ಕಾಂಬೋಧಿ ರಾಗ ಅಟತಾಳ

ಸಿರಿಯಲ್ಲಿಯು ನೀನೆ ಪರಮೇಷ್ಠಿಯಲ್ಲಿಯು ನೀನೆ || ಪ ||
ಮರುತವಾಣಿ ಭಾರತಿ ಎಲ್ಲರಲ್ಲಿಯು ನೀನೇ || ಅ. ಪ. ||
ಉರಗನಲ್ಲಿಯು ನೀನೆ ಗರುಡನಲ್ಲಿಯು ನೀನೆ
ಗಿರಿಜಾಪತಿಯಲ್ಲಿಯು ಸುರಪತಿಯಲ್ಲಿಯು ನೀನೆ || ೧ ||
ನಾರದ ತುಂಬುರ ಗಂಧರ್ವರಲ್ಲಿಯು ನೀನೆ
ಕಿನ್ನರರು ಸಿದ್ಧಸಾಧ್ಯರಲ್ಲಿಯು ನೀನೇ || ೨ ||
ಗಿರಿಗುಹೆಗಳಲ್ಲಿ ಒಳಗೆ ಹೊರಗೆ ಎಲ್ಲ
ಕರೆದರೆ ಓ ಎಂಬೊ ಪ್ರತಿಶಬ್ದವು ನೀನೇ || ೩ ||
ಪರಶುರಾಮನಾಗಿ ಪಾವಕನಲಿ ನೀನೆ
ಬಹಿರಂತರ್ದಶ ದಿಕ್ಕುಗಳು ನೀನೆ || ೪ ||
ನೋಡಲು ಗಜಸಿಂಹ ಶಾರ್ದೂಲ ಮೊದಲಾದ
ಕಾಡ ಜೀವರಲ್ಲಿ ಪರಿಪೂರ್ಣನು ನೀನೆ || ೫ ||
ಮರಮೃಗ ಮೊದಲಾದ ಅಖಿಳರಲ್ಲಿಯು ನೀನೆ
ಕರಮಾನುಸಾರವಾದ ದುಷ್ಕರಂತಕ ನೀನೆ || ೬ ||
ದೂರವಿಕ್ರಮ ನಮ್ಮ ಗೋ ಪಾ ಲ ವಿ ಠ ಲ
ದೂರ ದೂರ ಅತಿ ದೂರತರನು ನೀನೇ || ೭ ||

## ೧೦೫. ನಿನ್ನಲ್ಲಿ ಎಲ್ಲವೂ ಇದೆ

ಶಂಕರಾಭರಣರಾಗ ತ್ರಿಪುಟತಾಳ

ಹ್ಯಾಗೆ ಮೆಚ್ಚಿಸಲಿ ಅರ್ಚಿಸಲಿ ನಿನ್ನ
ನಾಗಶಯನನೆ ನಾರದವಂದಿತನೆ ದೇವಾ || ಪ ||
ಮಂಗಳಾಭಿಷೇಕಕೆ ಉದಕ ತರುವೆನೆನೆ
ಗಂಗೆ ಅಂಗುಷ್ಠದಿ ಪಡೆದಿರುವೇ ||

ಸಂಗೀತ ಕೀರ್ತನೆ ಪಾಡುವೆನೆಂದರೆ
ತುಂಬುರರು ನಾರದರು ಪಾಡುತಿಹರೊ ದೇವಾ || ೧ ||

ಪುಷ್ಪವ ತಂದು ನಿನಗರ್ಪಿಸುವೆನೆಂದರೆ
ಪುಷ್ಪ ಪಲ್ಲವಿಸಿದೆ ಹೊಕ್ಕಳಲ್ಲಿ ||
ಇಪ್ಪ ತೆತ್ತೀಸಕೋಟಿ ದೇವರ್ಕಳರು
ತೃಪ್ತನಾಗುವಿ ಸೂಕ್ಷ್ಮನೈವೇದ್ಯವಿಡಲು || ೨ ||

ಕೋಟಿ ಸೂರ್ಯರ ಪ್ರಭೆ ಮಿಗಿಲಾದಾತನಿಗೊಂದು
ದೀಪವನು ಹಚ್ಚಿದರೆ ಬೆಳಕಹುದೇ ||
ಸಾಟಿಗಾಣದೆ ಲಕ್ಷ್ಮಿ ಉರಸ್ಥಳವಾಗಿರೆ
ಲೋಷ್ಠಕಾಸು ಎಂತು ಕಾಣಿಕೆ ನೀಡಲೋ || ೩ ||

ಹಾಸಿಗೆಯನು ತಂದು ಹಾಸುವೆನೆಂದರೆ
ಶೇಷನ ಮೇಲೆ ನೀ ಪವಡಿಸಿರ್ಪೆ ||
ಬೀಸಣಿಗೆಯ ತಂದು ಬೀಸುವೆನೆಂದರೆ
ಬೀಸುತಿಹನು ಖಗ ತನ್ನ ಪಕ್ಕದಲಿ || ೪ ||

ನಿತ್ಯಗುಣಾರ್ಣವ ನಿಜಗುಣಪರಿಪೂರ್ಣ
ಸತ್‌ಚಿದಾನಂದ ಸನಕಾದಿವಂದ್ಯಾ ||
ಮುಕ್ತಿದಾಯಕ ನಮ್ಮ ಪು ರ ಂ ದ ರ ವಿ ಠ ಲಾ
ಭಕ್ತಿದಾಯಕನೆಂದು ಸ್ತುತಿಸಿಕೊಂಡಾಡುವೆನೊ || ೫ ||

## ೧೦೬. ಎಲ್ಲೆಲ್ಲಿಯೂ ಇರುವಿ

ಕಾಂಬೋಧಿ ರಾಗ ಝಂಪೆತಾಳ

ನಿನ್ನ ದರುಶನಕೆ ಬಂದವನಲ್ಲವೊ ಮಹಾ || ಪ ||
ಪುಣ್ಯವಂತರ ದಿವ್ಯಚರಣ ನೋಡಲು ಬಂದೆ || ಅ. ಪ. ||
ಎಲ್ಲಿ ನೋಡಲು ನೀನೆ ವ್ಯಾಪ್ತನಾಗಿರಲಿಕ್ಕೆ
ಇಲ್ಲಿಗೇ ಬಾಹ ಕಾರಣವಾವುದೊ
ಸೊಲ್ಲಿಗೆ ಕಂಭದೊಳು ತೋರಿದ ಮಹಾಮಹಿಮ
ಅಲ್ಲಿ ಇಲ್ಲೇನಯ್ಯ ಬಲ್ಲಭಕುತರಿಗೆ || ೧ ||



೧೨-೧೪೧೧

ಕರೆವಾಗಲೇ ಓಡಿ ಬಂದೊದಗುವ್ವೋ ದೇವ
ಮರಳಿ ಗಾವುದವೆಣಿಸಿ ಬರಲ್ಯಾತಕೋ
ನೆರೆನಂಬಿದವರಿಗಾವಲ್ಲಿಯಾದರೆ ಏನೊ
ಅರಿತವರ ಮನದಲ್ಲಿ ನಿಂದಾಡುವ ಚೆಲ್ವ ॥ ೨ ॥
ಧ್ಯಾನಕ್ಕೆ ಸಿಲ್ಕುವೆ ನಿನ್ನ ಕಾಣಲಿಬಹುದೊ
ಜ್ಞಾನಿಗಳು ಎನಿತು ಬರುವರೋ ಅಲ್ಲಿಗೆ
ಅನಂತ ಜನುಮದಲ್ಲಿ ಜಪತಪ ವ್ರತಹೋಮ
ಏನುಮಾಡಿದರಿಷ್ಟು ಜನ ಕೂಡುವುದೊ ದೇವ ॥ ೩ ॥
ಕಠಿಣವೊ ನಿನ್ನ ಭಕ್ತರ ದರುಶನಲಾಭ
ಸಟೆಯಲ್ಲ ವೇದಗಳು ಸಾರುತಿದಕೋ
ವಟುವೆ ಮೊದಲಾದ ವೈಷ್ಣವರಂಘ್ರಿಗಳು ಲವ
ತೃಟಿಯಾದರೂ ಸೋಂಕಲದು ಗತಿಗೆ ದಾರಿ ॥ ೪ ॥
ನೀನಿದ್ದ ಸ್ಥಾನದಲ್ಲಿ ಸರ್ವ ಪುಣ್ಯಕ್ಷೇತ್ರ
ನೀನಿದ್ದ ಸ್ಥಾನದಲಿ ಸಕಲ ತೀರ್ಥ
ನೀನಿದ್ದ ಸ್ಥಾನದಲಿ ಸಮಸ್ತ ತಾತ್ವಿಕರು
ನಾನಿತ್ತ ಬಂದಿದ್ದು ನಿನಗೆ ತಿಳಿಯದೆ ಪ್ರಭುವೆ ॥ ೫ ॥
ಇದನು ಲಾಲಿಸು ಜೀಯ ನಿನ್ನದೊಂದೇ ಮೂರ್ತಿ
ನಿದರುಶನವಲ್ಲದೆ ಮಿಗಿಲಾವುದೋ
ಪದೆಪದೆಗೆ ಮಧ್ವಮತ ಪೊಂದಿದ ಸುಜನರ
ಹೃದಯದಲಿ ಒಂದೊಂದು ಪರಿ ನಿನ್ನ ರೂಪಗಳು ॥ ೬ ॥
ಭಳಿರೆ ತಿರುಮಲರಾಯ ನಿನ್ನ ಕರುಣಾರಸಕೆ
ನೆಲೆಗಾಣೆ ನೆಲೆಗಾಣೆ ನೆರೆಹೊರೆಯಲಿ
ಒಲಿದು ಭಕ್ತರಿಗಾಗಿ ಮದುವೆ ಹವಣಿಸಿಕೊಂಡೆ
ಸುಲಭ ದೇವರ ದೇವ ವಿಜಯವಿಠ್ಠಲರೇಯ ॥ ೭ ॥

## ೧೦೭. ನಿನ್ನ ಐಶ್ವರ್ಯ

ಮುಖಾರಿ ರಾಗ ಝಂಪೆತಾಳ

ಜಗದಂತರ್ಯಾಮಿಯೆಂದೆಂದು ನಿಮ್ಮ
ನಿಗಮ ಸಾರುವ ಮಾತು ಪುಸಿಯೆ ರಂಗ ॥ ಪಲ್ಲ ॥

ಭೇದವಿಲ್ಲದೆ ಸಕಲ ಜೀವರನು ಪೊರೆಯುತಿಹಳು
ಭೂದೇವಿಯೆಂಬಾಕೆ ನಿಮ್ಮ ಅರ್ಧಾಂಗಿಯು
ಸಾಧನವು ಸಿರಿಯು ಸಂಪತ್ತು ಭಾಗ್ಯವನೀವ
ಆ ದಯಾನಿಧಿ ಲಕ್ಷ್ಮಿ ನಿಮ್ಮ ಸತಿ ದೇವ || ೧ ||

ಎಂಬತ್ತುನಾಲ್ಕು ಲಕ್ಷ ಜೀವರಾಶಿಗಳನ್ನು
ಬೊಂಬೆಗಳ ಮಾಡಿ ಭವದಿಂದಲಿ
ತುಂಬಿ ಕಲೆಗಳನೊತ್ತಿ ನೊಸಲ ಬರೆಹವ ಬರೆವ
ಅಂಬುಜೋದ್ಭವ ನಿಮ್ಮ ಹೆಮ್ಮಗನು ದೇವ || ೨ ||

ಸಕಲ ಜೀವರಾಶಿಗಳ ಕಲ್ಪಿಸುವ ಬೀಜ
ಸುಖದಿಂದ ಮಾಯಾಂಗನೆಯುರೊಡಲೊಳು
ಅಕ್ಕರದಿ ಪಿಂಡಾಂಡಗಳ ಕಟ್ಟಿ ಬಲಿಸುವ
ಮಕರಾಂಕನೆಂಬುವನು ನಿಮ್ಮ ಕಿರಿಮಗ ದೇವ || ೩ ||

ಜಂಗಮಸ್ಥಾವರಕ್ಕಾಧಾರವಾಗಿಹಳು
ಭಂಗಪಡುವ ಜನರ ಕರ್ಮವ ಕಳೆವಳು
ಹಿಂಗದೆ ಜಗವ ಪಾವನ ಮಾಡುವ ಪುಣ್ಯ
ಗಂಗೆಯೆಂಬುವಳು ನಿಮ್ಮ ಮಗಳು ದೇವ || ೪ ||

ಇಂತು ಅಣುರೇಣು ತೃಣಕಾಷ್ಟದೊಳಗೆಲ್ಲ
ಸಂತೋಷವಾಗಿಹುದು ನಿಮ್ಮ ಸ್ಮರಣೆ
ಯಂತ್ರವಾಹಕನೆಂಬ ಬಿರುದು ಸಲ್ವುದು ನಿಮಗೆ
ಚಿಂತಾಯಕನೆ ಕಾಗಿನೆಲೆಯಾದಿಕೇಶವನೆ || ೫ ||

## ೧೦೮. ದೇವರ ಸ್ವರೂಪ

ಪೂರ್ವಿರಾಗ ಆದಿತಾಳ

ದಾಸೋಹಂ ತವ ದಾಸೋಹಂ || ಪ ||
ವಾಸುದೇವ ವಿಗತಾಘಸಂಘ ತವ ದಾಸೋಹಂ || ಅ. ಪ ||
ಜೀವಾಂತರ್ಗತ ಜೀವನಿಯಾಮಕ
ಜೀವವಿಲಕ್ಷಣ ಜೀವನದ ||

ಜೀವಾಧಾರಕ ಜೀವರೂಪ ರಾ-
ಜೀವಭವಜನಕ ಜೀವೇಶ್ವರ ತವ || ೧ ||
ಕಾಲಾಂತರ್ಗತ ಕಾಲ ನಿಯಾಮಕ
ಕಾಲಾತೀತ ತ್ರಿಕಾಲಜ್ಞ ||
ಕಾಲಪ್ರವರ್ತಕ ಕಾಲನಿವರ್ತಕ
ಕಾಲೋತ್ಪಾದಕ ಕಾಲಮೂರ್ತಿ ತವ || ೨ ||
ಕರ್ಮಕರ್ಮ ಕೃತಕರ್ಮ ಕೃತಾಗಮ
ಕರ್ಮಫಲಪ್ರದ ಕರ್ಮಜಿತ ||
ಕರ್ಮಬಂಧ ಮಹಕರ್ಮವಿಮೋಚಕ
ಕರ್ಮನಿಗ್ರಹ ಕರ್ಮಸಾಕ್ಷಿ ತವ || ೩ ||
ಧರ್ಮಯೂಪ ಮಹಧರ್ಮವಿವರ್ಧನ
ಧರ್ಮವಿದೋತ್ತಮ ಧರ್ಮನಿಧೆ ||
ಧರ್ಮ ಸೂಕ್ಷ್ಮ ಮಹಧರ್ಮ ಸಂರಕ್ಷಕ
ಧರ್ಮಸಾಕ್ಷಿ ಯಮಧರ್ಮ ಪುತ್ರ ತವ || ೪ ||
ಮಂತ್ರಯಂತ್ರಮಹ ಮಂತ್ರಬೀಜಮಹ
ಮಂತ್ರರಾಜ ಗುರು ಮಂತ್ರ ಧೃತಿ |
ಮಂತ್ರಮೇಯ ಮಹಮಂತ್ರಗಮ್ಯ ವರ
ಮಂತ್ರದೇವ ಜಗನ್ನಾಥ ವಿಠಲ ತವ || ೫ ||

## ೧೦೯. ಸರ್ವ ಸುಂದರ

ಕಾಂಬೋಧಿರಾಗ ಝಂಪೆತಾಳ

ಈ ಪರಿಯ ಸೊಬಗಾವ ದೇವರಲಿ ಕಾಣೆ || ಪ ||
ಗೋಪೀಜನಪ್ರಿಯ ಗೋಪಾಲಗಲ್ಲದೆ || ಅ. ಪ. ||
ಧೊರೆತನದಿ ಈಕ್ಷಿಸಲು ಧರಣಿದೇವಿಯ ರಮಣ
ಸಿರಿತನದಿ ನೋಡೆ ಲಕ್ಷ್ಮೀಕಾಂತನು ||
ಹಿರಿತನದಿ ನೋಡೆ ಕಮಲ ಸಂಭವನಯ್ಯ
ಗುರುತನದಲೀಕ್ಷಿಸಲು ಗುರು ಮಧ್ವಜನಕ || ೧ ||
ಪಾವನತೆಯಲಿ ನೋಡೆ ಅಮರಗಂಗಾಜನಕ
ದೇವತ್ವದಲಿ ನೋಡೆ ದಿವಿಜರೊಡೆಯಾ ||

ಲಾವಣ್ಯದಲಿ ನೋಡೆ ಲೋಕಮೋಹನ ಪಿತನು
ಆವ ಧೈರ್ಯದಿ ನೋಡೆ ಅಸುರಾಂತಕಾ || ೨ ||
ಗಗನದಲಿ ಸಂಚರಿಪ ಗರುಡದೇವನೆ ತುರುಗ
ಜಗವ ಧರಿಸಿದ ಅಹಿಯು ಪರಿಯಂಕವು
ನಿಗಮಗೋಚರ ಪುರಂದರವಿಠಲಗಲ್ಲದೆ
ಮಿಗಿಲಾದ ದೈವಗಳಿಗೀ ಭಾಗ್ಯವುಂಟೇ || ೩ ||

## ೧೧೦. ನೀನೇ ಸೂತ್ರದಾರ

ಪಿಲೂ ರಾಗ ಅಟತಾಳ

ಅಪರಾಧಿ ನಾನಲ್ಲ ಅಪರಾಧ ಎನಗಿಲ್ಲ
ಕಪಟನಾಟಕ ಸೂತ್ರಧಾರೀ ನೀನೆ || ಪ ||

ನೀನು ಆಡಿಸದಿರಲು ಜಡ ಒನಿಕೆಯ ಬೊಂಬೆ
ಏನು ಮಾಡಲು ಬಲ್ಲದು ತಾನೆ ಬ್ಯಾರೆ ||
ನೀನಿಟ್ಟ ಸೂತ್ರದಿಂ ಚಲಿಪವು ಕೈಕಾಲುಗಳು
ನೀನೇ ಮುಗ್ಗಿಸಲು ಮುಗ್ಗುವ ದೇಹದವನು || ೧ ||
ಒಂದೆಂಟು ಬಾಗಿಲುಗಳುಳ್ಳ ಪಟ್ಟಣಕೆ ತನ್ನ-
ದೆಂದು ಇಪ್ಪತ್ತಾರು ಮನೆಯಾಳ್ಗಳಾ ||
ತಂದು ಕಾವಲು ನಿಲಿಸಿ ಎನ್ನ ನೀ ಒಳಗಿಟ್ಟು
ಮುಂದೆ ಭವದಲಿ ಭವಣೆಪುದು ನಿನ್ನದನ್ಯಾಯ || ೨ ||
ಯಂತ್ರವಾಹಕ ನೀನೇ ಒಳಗಿದ್ದು ಎನ್ನ ಸ್ವ-
ತಂತ್ರನೆಂದೆನಿಸಿ ಕೊಲಿಸುವರೆ ಹೇಳೊ ||
ಕಂತುಪಿತ ಲಕ್ಷ್ಮೀಶ ಎಂತಾದಡಂತಹುದಾ-
ನಂತ ಮೂರುತಿ ನಮ್ಮ ಪುರಂದರವಿಠಲಾ || ೩ ||

## ೧೧೧. ಹರಿಸಂಕಲ್ಪದಂತೆ ಆಗುವದು

ಪೂರ್ವಿಕಲ್ಯಾಣಿ ರಾಗ ಅಟತಾಳ

ಹರಿ ಚಿತ್ತ ಸತ್ಯ ಹರಿಚಿತ್ತ || ಪಲ್ಲ ||
ನರಚಿತ್ತಕೆ ಬಂದದ್ದು ಲವಲೇಶ ನಡೆಯದು || ಅ. ಪ. ||

ಸುದತಿ ಮಕ್ಕಳ ಭಾಗ್ಯ ಬಯಸೋದು ನರಚಿತ್ತ
ಮದುವ್ಯಾಗದಿರುವದು ಹರಿಚಿತ್ತವು ||
ಕುದುರೆ ಅಂದಣ ಆನೆ ಬಯಸೋದು ನರಚಿತ್ತ
ಪದಚಾರಿಯಾಗೋದು ಹರಿಚಿತ್ತವಯ್ಯ || ೧ ||

ವಿಧವಿಧ ಯಾತ್ರೆಯ ಬಯಸೋದು ನರಚಿತ್ತ
ಒದಗಿ ಬರುವ ರೋಗ ಹರಿಚಿತ್ತವು ||
ಸದಾ ಅನ್ನದಾನವ ಬಯಸೋದು ನರಚಿತ್ತ
ಉದರಕ್ಕೆ ಅಳುವದು ಹರಿಚಿತ್ತವಯ್ಯ || ೨ ||

ಧರಣಿಯನಾಳಬೇಕೆಂಬೋದು ನರಚಿತ್ತ
ಪರರ ಸೇವಿಸುವದು ಹರಿಚಿತ್ತವು
ಪು ರಂ ದ ರ ವಿ ಠ ಲ ನ ಬಯಸೋದು ನರಚಿತ್ತ
ದುರಿತವ ಕಳೆವದೆ ಹರಿಚಿತ್ತವಯ್ಯ || ೩ ||

## ೧೧೨. ದೇವರು ಸುಲಭನು

ಪೂರ್ವಿರಾಗ ಅಟತಾಳ

ದೂರಕೆ ದೂರನೆಂದು ಹೊರಸಾರಲು ಬೇಡಿ || ಪ ||
ಸಾರರ ಸಾರಿ ನಮ್ಮ ಕೃಷ್ಣನ ಸಾರಿರಯ್ಯ || ಅ. ಪ ||

ಅನಂತ ರೂಪದೊಳು ಒಂದು ರೂಪವ
ಅನಂತ ಗುಣದೊಳು ಒಂದು ಗುಣವ ||
ಅನಂತ ನಾಮದೊಳೊಂದೇ ನಾಮವ
ಮನಸಿಲಿ ನೆನೆದರೆ ಬೆನ್ಹತ್ತಿ ಬಿಡನಯ್ಯ || ೧ ||

ಅನಂತ ಜೀವರೊಳಾವನಾದರು ಒಮ್ಮೆ
ಅನಂತ ಜನ್ಮದೊಳೊಂದೆ ಜನ್ಮವಾ ||
ಅನಂತ ಕ್ಷಣದೊಳೊಂದೆ ಕ್ಷಣವಾ
ಕನಸಿಲಿ ನೆನೆದರೆ ಋಣಿಯಾಗಿಪ್ಪನಯ್ಯ || ೨ ||

ಒಂದೆ ಹೂವು ಒಂದೆ ಫಲ ಒಂದೆ ಒಂದು ಜಲ
ಒಂದೇ ತುಳಸಿದಳ ಒಂದೆ ಪಧಾನೆ

ಒಂದೆ ಪ್ರದಕ್ಷಣೆ ಅವಗರ್ಪಿಸಿದರೆ
ಎಂದೆಂದು ಕುಂದದ ಆನಂದ ಜೀವನಯ್ಯ || ೩ ||
ಹರಿಚಿಹ್ನಾಂಕಿತ ಹರಿದಿನ ಉಪವಾಸ
ಹರಿಯೂರ್ಧ್ವಪುಂಡ್ರ ತುಳಸಿ ಮಾಲಿಕೆ ||
ಹರಿ ಉತ್ಸವ ಸೇವೆ ಹರಿದಾಸರ ಸಂಗ
ದುರಿತ ಅಬ್ಧಿಗೆ ಕುಂಭ ಸಂಭವನಲ್ಲವೆ ಕೃಷ್ಣ || ೪ ||
ಹರಿಪಾದತೀರ್ಥ ಹರಿನೈವೇದ್ಯ
ಹರಿಯಾರತಿ ಧೂಪ ಶ್ರೀಷ್ಠಾಂಗಾರ ||
ಹರಿ ನಿರ್ಮಾಲ್ಯ ಪ್ರತ್ಯೇಕ ಶಂಖೋದಕ
ದುರಿತ ರಾಶಿಗಳ ಸೋಲಿಸಿ ಸುಡುವುದಯ್ಯ || ೫ ||
ಒಮ್ಮನೆ ನಡೆದಡೆ ಒಮ್ಮನೆ ಕರೆದಡೆ
ಒಮ್ಮೆ ಪಾಡಿದಡೆ ಒಮ್ಮೆ ಪೊಗಳಿದಡೆ ||
ಒಮ್ಮೆ ನೋಡಿದಡೆ ಒಮ್ಮೆ ನೆನಸಿದಡೆ
ಒಮ್ಮೆ ಎಂದೆಂದು ಕುಂದದಾನಂದ ಜೀವನಯ್ಯ || ೬ ||
ತನ್ನಲಿಪ್ಪನಾಗಿ ದೂರನೆಂತೆನಬೇಡ
ಹೊನ್ನು ಹಣವು ಬೇಡ ಶ್ರೀಲಕ್ಷ್ಮೀಪತಿಗೆ ||
ಅನ್ಯವೇತಕೆ ಪೂರ್ಣ ಆನಂದನಿಗೆ
ಸನ್ನವನೆಂದರೆ ತನ್ನನೀವ ಕೃಷ್ಣ || ೭ ||

## ೧೧೩. ವಿರಾಟ ಪೂಜೆ

ಕಾಂಬೋಧಿ ರಾಗ ಝಂಪೆತಾಳ

ಅರಿತವರಿಗತಿ ಸುಲಭ ಹರಿಯ ಪೂಜೆ
ಅರಿಯದವ ನಿರ್ಭಾಗ್ಯತರ ಲೋಕದೊಳಗೆ || ಪ ||
ಬ್ರಹ್ಮಾಂಡ ಮಂಟಪವು ಭೂಮಂಡಲವೆ ಪೀಠ
ಸೋಮಸೂರ್ಯರೇ ದೀಪ, ಭೂರುಹಗಳು ||
ಚಾಮರಗಳತಿವಿಮಲ ವ್ಯೋಮಮಂಡಲ ಛತ್ರ,
ಯಾಮಾಷ್ಟಕಗಳಷ್ಟ ದಳ ಪದ್ಮವು, ಎಂದು || ೧ ||
ಮಳೆಯೆ ಮಜ್ಜನವು ದಿಗ್ವಲಯಂಗಳ್ವಸನ
ಮಲಯಜಾನಿಲವೆ ಶ್ರೀ ಗಂಧಧೂಪ ||

ಇಳೆಯೊಳಗೆ ಬೆಳೆದ ಧಾನ್ಯಗಳೆಲ್ಲ ನೈವೇದ್ಯ,
ಥಳಥಳಿಪ ಮಿಂಚು ಕರ್ಪುರದಾರತಿಯೆಂದು || ೨ ||
ನಕ್ಷತ್ರಮಂಡಲವೆ ಲಕ್ಷದೀಪಾವಳಿಯು
ದಕ್ಷಿಣೋತ್ತರ ಅಯನಗ-ಳೆರಡು ಬನಗಳು ||
ವೃಕ್ಷವಲ್ಲಿಜ ಸುಫಲಪುಷ್ಪಗಳೊಳಗೆ
ಲಕ್ಷ್ಮೀವಕ್ಷವ್ಯಾಪಕನಾಗಿ ತಾನೆ ಭೋಗಿಪನೆಂಬ || ೩ ||
ಗುಡುಗು ಸಪ್ತಸಮುದ್ರ ಸಿಡಿಲ ಘೋಷವೇ ವಾದ್ಯ
ಪೊಡವಿಪರಿಗೀವ ಕಪ್ಪವೆ ಕಾಣಿಕೆ ||
ಉಡುಪಭಾಸ್ಕರರ ಮಂಡಲಗಳಾದರ್ಶಗಳು
ನಡೆಯುವ ನಡೆಗಳೇ ಬಿಡದೆ ನರ್ತನವೆಂದು || ೪ ||
ಯುಗಚತುಷ್ಟಯವೆ ಪರಿಯಂಕ ಪಾದಗಳಬ್ದ
ಬಿಗಿವ ಪಟ್ಟಿಗಳೆರಡು ಕಂದಾಯ ಕಶಿಪು ||
ಗಗನ ಮೇಲ್ಗಟ್ಟು ಸಂಕ್ರಮಣಗಳೆ ಬಡವುಗಳು
ಭಗವಂತಗುಪಬರ್ಹಣಗಳು ಷಡೃತುಗಳೆಂದೂ || ೫ ||
ನಾಗವಲ್ಲಿಗಳೆ ದಿವಸಗಳು ಕರಣವೇ ಕ್ರಮುಕ
ಯೋಗಗಳೆ ಚೂರ್ಣ ರಾತ್ರಿಯೆ ಕಾಂಶುಕ ||
ಭೋಗವತಿ ಜಲವೆ ಗಂಡೂಷಣೋದಕ
ಶುದ್ಧಸಾಗರವೆ ಪಾದೋದಕವು ವಿರಾಡ್ರೂಪಗೆ || ೬ ||
ಶಾತಕುಂಭೋದರಾಂಡಾಂತಸ್ಥರೂಪ ಸಂ-
ಪ್ರೀತಿಯಿಂದಲಿ ಯಜಿಸಿ ಮೋದಿಪರನಾ ||
ವೀತಶೋಕರ ಮಾಡಿ ಸಂತೈಸುತಿಹ ಜಗ-
ನ್ನಾಥವಿಠ್ಠಲ ಒಲಿದು ಸರ್ವಕಾಲದಲೀ || ೭ ||

## ೧೧೪. ಪರಮಾತ್ಮನ ಅಚಿಂತ್ಯಶಕ್ತಿ

ಸುಳಾದಿ ರಾಗ ಧ್ರುವತಾಳ

ಅಣುವಾಗಬಲ್ಲ ಮಹತ್ತಾಗಬಲ್ಲ
ಅಣುಮಹತ್ತೆರಡೊಂದಾಗಬಲ್ಲ
ರೂಪವಾಗಬಲ್ಲ ಅರೂಪವಾಗಬಲ್ಲ
ರೂಪ ಅರೂಪ ಎರಡೊಂದಾಗಬಲ್ಲ

ವ್ಯಕ್ತನಾಗಬಲ್ಲ ಅವ್ಯಕ್ತನಾಗಬಲ್ಲ । ವ್ಯಕ್ತ ಅವ್ಯಕ್ತ ಎರಡೊಂದಾಗಬಲ್ಲ
ಸಗುಣನಾಗಬಲ್ಲ ನಿರ್ಗುಣನಾಗಬಲ್ಲ।ಸಗುಣ ನಿರ್ಗುಣ ಎರಡೊಂದಾಗಬಲ್ಲ
ಅಘುಟನಾಘುಟನ ಶಕ್ತಾಚಿಂತ್ಯಾದ್ಭುತಮಹಿಮ
ಸ್ವಗತಭೇದವಿವರ್ಜಿತ ಪುರಂದರವಿಠಲ

## ೧೧೫. ನೀನು ಅವರ್ಣನೀಯನು

ಕಾಂಬೋಧಿ ರಾಗ ಝಂಪೆತಾಳ

ನೀ ಮಾಯೆಯೊಳಗೊ ನಿನ್ನೊಳು ಮಾಯೆಯೋ ॥ ಪ ॥
ನೀ ದೇಹದೊಳಗೊ ನಿನ್ನೊಳು ದೇಹವೊ ॥ ಅ. ಪ. ॥
ಬಯಲೊಳಗೆ ಆಲಯವೊ ಆಲಯದೊಳಗೆ ಬಯಲೊ
ಬಯಲು ಆಲಯವೆರಡು ನಯನದೊಳಗೊ ॥
ನಯನಬುದ್ಧಿಯ ಒಳಗೊ ಬುದ್ಧಿ ನಯನದ ಒಳಗೊ
ನಯನಬುದ್ಧಿಗಳೆರಡು ನಿನ್ನೊಳಗೊ ಹರಿಯೇ ॥ ೧ ॥
ಸವಿಯು ಸಕ್ಕರೆಯೊಳಗೊ ಸಕ್ಕರೆಯು ಸವಿಯೊಳಗೊ
ಸವಿಯು ಸಕ್ಕರೆಯೆರಡು ಜಿಹ್ವೆಯೊಳಗೊ ॥
ಜಿಹ್ವೆ ಬುದ್ಧಿಯ ಒಳಗೊ ಬುದ್ಧಿ ಜಿಹ್ವೆಯ ಒಳಗೊ
ಜಿಹ್ವೆ ಬುದ್ಧಿಗಳೆರಡು ನಿನ್ನೊಳಗೊ ಹರಿಯೇ ॥ ೨ ॥
ಕುಸುಮದೊಳು ಗಂಧವೊ ಗಂಧದೊಳು ಕುಸುಮವೊ
ಕುಸುಮಗಂಧಗಳೆರಡು ಘ್ರಾಣದೊಳಗೊ ॥
ಅಸಮಭವ ಕಾಗಿನೆಲೆಯಾದಿಕೇಶವ ನಿನ್ನ
ಉಸುರೆಲೆನ್ನೊಳವೆ ಸರ್ವವು ನಿನ್ನೊಳ್ಹರಿಯೆ ॥ ೩ ॥

# ೧೧. ದಾಸ್ಯಭಾವ

ಭಕ್ತರು ತಾವು ಪರಮಾತ್ಮನ ದಾಸರು, ಡಿಂಗರಿಗರು, ಆಳುಗಳು, ಸೇವಕರು, ಕಿಂಕರರು ಎಂದು ಒಳ್ಳೆ ಅಭಿಮಾನದಿಂದ ಹೇಳಿಕೊಳ್ಳುವದುಂಟು. ಹೀಗೆ ಹೇಳಿ ಆ ಭಾವದಿಂದ ಮಾಡಿದ ಭಕ್ತಿಯೇ ದಾಸ್ಯಭಕ್ತಿಯು. ಕರ್ನಾಟಕದಲ್ಲಿ ಮಧ್ವಮತಾನುಯಾಯಿಗಳಾದ ವೈಷ್ಣವಭಕ್ತರೆಲ್ಲರೂ ತಾವು ಹರಿದಾಸರೆಂದೂ ದಾಸಕೂಟದವರೆಂದೂ ಹರಿದಾಸರ ಸಂಗವು ಸತ್ಸಂಗ ವೆಂದೂ ಹೇಳುತ್ತ ಬಂದುದನ್ನು ನಾವು ಇಲ್ಲಿ ಲಕ್ಷಿಸಬೇಕು. 'ದಾಸೋಹಂ ಎಂತೆಂಬ ರಹಸ್ಯವನರುಹಿದರು' ಎಂದು ಪುರಂದರದಾಸರು ಇದರ ಮಹತ್ವ ವನ್ನು ಹೇಳಿರುವರು.

ಭಕ್ತಿಮಾರ್ಗದಲ್ಲಿ ಸಗುಣ ಪರಮಾತ್ಮನನ್ನೆ ಭಜಿಸುವುದು ವಿಶೇಷವು. ಇಷ್ಟೇ ಅಲ್ಲದೆ ಪರಮಾತ್ಮನೊಡನೆ ಮಾನವೀಸಂಬಂಧಗಳನ್ನು ಕಲ್ಪಿಸಿ ತದ್ವಾರಾ ತಮ್ಮ ಭಕ್ತಿಯನ್ನು ವ್ಯಕ್ತಪಡಿಸುವ ಭಕ್ತರೇ ಬಹಳ. ದಾಸ್ಯ, ಸಖ್ಯ, ವಾತ್ಸಲ್ಯ, ಮತ್ತು ಮಧುರ ಈ ಭಾವಗಳಲ್ಲಿ ಭಕ್ತರು ಇಂಥ ಮಾನವೀ ಸಂಬಂಧಗಳನ್ನು ಕಲ್ಪಿಸಿಯೇ ತಮ್ಮ ಮನೋಭಾವಗಳನ್ನು ವ್ಯಕ್ತಮಾಡಿದುದು ಕಂಡುಬರುವದು. ಇಂಥ ಸಂಬಂಧಗಳು ಎಲ್ಲರ ಅನುಭವದೊಳಗಿನವಿರು ವುದರಿಂದ ಭಕ್ತರು ಈ ರೀತಿ ಭಾವವನ್ನು ವ್ಯಕ್ತಮಾಡಿದ್ದು ಜನಸಾಮಾನ್ಯರಿ ಗೆಲ್ಲರಿಗೂ ಚನ್ನಾಗಿ ಹೃದಯಂಗಮವಾಗುವುದು.

ಸ್ವಾಮಿ ಸೇವಕ, ಒಡೆಯ ಆಳು ಇವರ ಸಂಬಂಧಗಳನ್ನು ಅರಿಯ ದವರಾರು? ಒಳ್ಳೆ ಸ್ವಾಮಿಯು ಹೇಗಿರುವನು, ಒಳ್ಳೆ ಸೇವಕನು ಯಾವ ರೀತಿ ಸೇವೆ ಮಾಡುವನು ಎಂಬುದನ್ನು ವ್ಯವಹಾರದಲ್ಲಿ ಎಲ್ಲರೂ ಬಲ್ಲರು. ಸ್ವಾಮಿಯು ಕರುಣಾಳುವಿರಬೇಕು, ಸೇವಕನು ಪ್ರಾಮಾಣಿಕನೂ ಆಜ್ಞಾ ಧಾರಕನೂ ಸ್ವಾಮಿ ಇಚ್ಛೆಯೇ ತನ್ನ ಇಚ್ಛೆ ಎಂದು ತಿಳಿಯುವವನೂ

ಇರಬೇಕೆಂಬುದನ್ನು ಎಲ್ಲರೂ ಬಲ್ಲರು. ಪರಮಾತ್ಮನು ಸ್ವಾಮಿಯು ತಾನು ಸೇವಕನು ಎಂಬ ಭಾವದಿಂದ ಭಕ್ತನು ಸಾಗುವನು.

ನಮ್ಮಲ್ಲಿ ಅವತಾರಕಲ್ಪನೆಯ ಮೂಲಕ ಪರಮಾತ್ಮನೊಡನೆ ಈ ಪರಿಯ ಮಾನವೀಸಂಬಂಧಗಳನ್ನು ಕಲ್ಪಿಸಲು ಮತ್ತಿಷ್ಟು ಅನುಕೂಲವಾಗಿದೆ. ಶ್ರೀರಾಮಚಂದ್ರನ ಸೇವಕನಾದ ಹನುಮಂತನು ದಾಸ್ಯಭಕ್ತಿಯು ಪರಮಾವಧಿಯನ್ನು ಮುಟ್ಟಿದವನೆಂದು ಹೇಳಬಹುದು. ಸೇವ್ಯ ಸೇವಕ ಸಂಬಂಧವೆಂಬುದು ನಿತ್ಯವ್ಯವಹಾರಗಳಲ್ಲಿಯದೊಂದು ಇರುವುದರಿಂದ ಹಾಗೂ ಎಲ್ಲರ ಅನುಭವದ್ದಿರುವುದರಿಂದ ಅತ್ಯಂತ ನಿಕಟವಾದ ಹಾಗೂ ಹೃದಯಸ್ಪರ್ಶಿಯಾದ ಭಾವಗಳನ್ನು ವ್ಯಕ್ತಮಾಡಲು ಹಾಗೂ ಅವುಗಳನ್ನು ತಿಳಿದುಕೊಳ್ಳಲು ಬಹಳ ಅನುಕೂಲವಿರುವದು.

ಸಖ್ಯ, ವಾತ್ಸಲ್ಯ, ಹಾಗೂ ಮಧುರಭಾವಗಳ ಮಾತಾದರೂ ಹೀಗೆಯೇ ಇರುವದು.

## ೧೧೬. ನನ್ನನ್ನು ದಾಸನನ್ನಾಗಿಮಾಡು

ನಾದನಾಮಕ್ರಿಯಾ ರಾಗ ಅಟತಾಳ

ದಾಸನ್ನ ಮಾಡಿಕೊ ಎನ್ನ, ಸ್ವಾಮಿ
ಸಾಸಿರನಾಮದ ವೆಂಕಟರಮಣ || ಪ ||
ದುರುಳ ಬುದ್ಧಿಗಳೆಲ್ಲ ಬಿಡಿಸೊ, ನಿನ್ನ
ಕರುಣಕವಚ ಎನ್ನ ಹರಣಕ್ಕೆ ತೊಡಿಸೊ ||
ಚರಣಸೇವೆ ಎನಗೆ ಕೊಡಿಸೊ, ಅಭಯ
ಕರಪುಷ್ಪ ಎನ್ನಯ ಶಿರದೊಳು ಮುಡಿಸೊ || ೧ ||
ದೃಢಭಕ್ತಿ ನಿನ್ನಲ್ಲಿ ಬೇಡಿ, ನಾ-
ನಡಿಗೆರಗುವೆನಯ್ಯ ಅನುದಿನ ಪಾಡಿ ||
ಕಡೆಗಣ್ಣಲೇಕೆನ್ನ ನೋಡಿ, ಬಿಡುವೆ
ಕೊಡು ನಿನ್ನ ಧ್ಯಾನವ ಮನಶುಚಿ ಮಾಡಿ || ೨ ||
ಮೊರೆ ಹೊಕ್ಕವರ ಕಾವ ಬಿರಿದು, ನೀ
ಮರೆಯದೆ ರಕ್ಷಣೆ ಮಾಡೆನ್ನ ಪೊರೆದು ||
ದುರಿತಗಳೆಲ್ಲವ ತರಿದು, ಸಿರಿ
ಪುರಂದರವಿಠ್ಠಲ ಕರುಣದಿ ಕರೆದು || ೩ ||

## ೧೧೭. ನಾನು ನಿನ್ನ ಸೇವಕ

ಮಧ್ಯಮಾವತಿ ರಾಗ ತ್ರಿಪುಟತಾಳ

ಸೇವಕನೆಲೊ ನಾನು ನಿನ್ನಯ ಪಾದ । ಸೇವೆ ನೀಡೆಲೊ ನೀನು ॥ ಪ ॥
ಸೇವಕನೆಲೊ ನಾನು ಸೇವೆ ನೀಡೆಲೊ ನೀನು
ಕಾವುದೆನ್ನೆಲೊ ಶ್ರೀವಧೂವರ । ರಾವಣಾಂತಕ ರಕ್ಷಿಸೆನ್ನನು
ಗೋವರ್ಧನ ಗಿರಿಧರ ದೇವ । ಗೋವುಗಳ ಕಾವ
ಶ್ರೀಮಹಾನುಭಾವ । ವರಗಳನೀವ ದೇವ
ಶ್ರೀವಲ್ಲಭ ದಯಮಾಡೆನ್ನನು ।
ಈ ವೇಳೆಗೆ ಇಂದಿರೆರಮಣ ॥ ಅ. ಪ. ॥

ರಾಮ ದಶರಥನಂದನ ರಘುಕುಲಾಬ್ಧಿ । ಸೋಮ ಸುಂದರವದನ
ವಾಮನ ಪರಿಪೂರ್ಣಕಾಮ ಕೌಸಲ್ಯರಾಮ
ಸ್ವಾಮಿ ಶ್ರೀರಂಗಧಾಮ ದೈತ್ಯವಿ । ರಾಮ ಶ್ರೀಮದನಂತ ನಾಮ
ಧೀಮ ಮುನಿಜನಸ್ತೋಮ । ರಮ್ಯಗುಣಧಾಮ
ರಣರಂಗ ಭೀಮ । ಕೋಮಲ ಶ್ಯಾಮ
ಸಾಮಜವರದಾ ನೀನನುದಿನ । ಕಾಮಿತಫಲ ಕರುಣಿಸು ಕಾಯೊ ॥ ೧ ॥

ಶಂಕರ ಸುರಸೇವಿತ ಶೇಷ-ಗರುಡಾಲಂಕಾರ ಮಣಿಶೋಭಿತಾ
ಪಂಕಜನಯನ ಮೀನಾಂಕಜನಿತ ಪಾದ
ಪಂಕಜಾಸನ ವಿನುತ ತಿರುಪತಿ
ವೆಂಕಟ ಬಿರುದಾಂಕ ಜಯ ಜಯ । ಶಂಖ ಚಕ್ರಗದೆ ಪಂಕ
ಜಧರ ಅಕಳಂಕ । ಚರಿತ ತಾಟಂಕಗೊಲಿದ ನಿಶ್ಯಂಕ
ಲಂಕಾಧಿಪ ಲಾಲಿತ ರಘುಪತಿ । ಕಿಂಕರರಿಗೆ ಕಿಂಕರನಾನೆಲೊ ॥ ೨ ॥

ಮಂದರೋದ್ಧರ ಮಾಧವ ಮಧುಸೂದನ । ನಂದ ಮಂಗಳ ವಿಗ್ರಹ
ಬಿಂದುಮಾಧವ ಶ್ರೀಗೋವಿಂದ ಗೋಕುಲಾನಂದ
ವಂದಿತಾಮರವೃಂದ ಶ್ರುತಿಗಳತಂದ । ತುರಗವನೇರಿ ಬಂದ
ವೃಂದಾವನದೊಳಗಿಂದ । ಯಶೋದೆಯ ಕಂದ
ಹರಿಗೋವಿಂದ । ಶೇಷಗಿರಿಯಲ್ಲಿ ನಿಂದ
ಮಂದಾಕಿನಿ ಪಡೆದನೆ ಧ್ರುವಗೊಲಿ । ದಂದದಿ ಎನಗೊಲಿ ಹಯವದನ ॥ ೩ ॥

## ೧೧೮. ನಿನ್ನ ದಾಸ್ಯವ ಸ್ವೀಕರಿಸಿರುವೆ

ಪಂತುವರಾಳಿ ರಾಗ ಅಟತಾಳ

ವ್ಯಾಪಾರ ನಮಗಾಯಿತು
ಶ್ರೀಪತಿ ಪಾದಾರವಿಂದ ಸೇವೆಯೆಂಬೊ || ಪ ||
ಹರಿಕರುಣವೆ ಅಂಗಿ ಗುರುಕರುಣ ಮುಂಡಾಸ
ಹರಿದಾಸರ ದಯವೆಂಬೊ ವಲ್ಲೀ ||
ಪರಮ ಪಾಪಿ ಕಲಿಯೆಂಬೊ ಪಾಪಾಸು ಮೆಟ್ಟ
ದುರಾತ್ಮರಾದವ ಎದೆಮೇಲೆ ನಡೆವಂಥ || ೧ ||
ಬಿಳಿಯ ಕಾಗದ ಹೃದಯ ಬಾಯಿ ಕಲಮುದಾನಿ
ನಾಲಿಗೆ ಯೆಂಬೋದೆ ಲೆಕ್ಕಣಿಕೆಯು ||
ಶ್ರೀಲೋಲನ ಕಥೆ ದಿವ್ಯ ನಾಮಂಗಳ
ಶೀಲ ಮನದಿ ಬರೆದು ಹರಿಗೆ ಒಪ್ಪಿಸುವಂಥ || ೨ ||
ಮುಂದಣ ಆಗಮ ಸಂಸಾರದ ಬಾಧೆ
ಎಂದೆಂದಿಗು ಅದರ ಭಯ ಬಿಟ್ಟಿತು ||
ಹಿಂದಣ ಸಂಚಿತ ಸಾಲ ಭಾರಕ್ಕೆಲ್ಲ
ಸಂದಾಯವನು ಮಾಡಿ ಕತಬಿ ಹರಸಿ ಬಿಟ್ಟ || ೩ ||
ನುಡಿ ನುಡಿಗಾನಂದ ಬಾಷ್ಪರೋಮಾಂಚನೆ
ಮುಡಿಪಿನೊಳಗೆ ಇಟ್ಟ ಕೈಜಿತವು ||
ಕಡೆಯ ಸಂಬಳಕೆಲ್ಲ ಮುಕುತಿ ಸಾಧನವನ್ನು
ಕೊಡುವಂತೆ ತಿರುಗದ ಚೀಟಿ ಬರೆಸಿಕೊಟ್ಟ || ೪ ||
ಕಂಡಕಂಡವರಿಗೆ ಕಾರ್ಪಣ್ಯವ ಬಟ್ಟು
ಮಂಡೆ ಅಡ್ಡಾಗಿ ನಾ ಬಳಲಲಿಲ್ಲ ||
ಪುಂಡರಿಕಾಕ್ಷ ಶ್ರೀ ಪು ರಂ ದ ರ ವಿ ಠ ಲ ನು
ದಂಡಿಸಿ ವೀಳ್ಯವಕೊಟ್ಟು ಸೇವೆಯೊಳಿಟ್ಟ || ೫ ||

## ೧೧೯. ಶಾಶ್ವತ ದಾಸ್ಯವಿರಲಿ

ನಾದನಾಮ ಕ್ರಿಯೆ ರಾಗ ಅಟತಾಳ

ಇಂಥಿಂಥಾದ್ದೆಲ್ಲಾನೂ ಬರಲಿ ನಿ
ಶ್ಚಿಂತೆಂಬುದು ದೃಢವಾಗಿರಲಿ || ಪಲ್ಲ ||

ಬಡತನವೆಂಬುದು ಕಡೆತನಕಿರಲಿ
ಒಡವೆವಸ್ತುಗಳು ಹಾಳಾಗ್ಹೋಗಲಿ
ನಡೆಯುವ ಹಾದಿಯು ಹಿಡಿಯದೆ ಹೋಗಲಿ
ಅಡವಿಲಿ ಗಿಡಗಳು ಸಿಗದ್ಹಾಂಗಾಗಲಿ ॥ ೧ ॥
ಗಂಡಸುತನ ನನಗಿಲ್ಧಾಂಗಾಗಲಿ
ಹೆಂಡಿರು ಮಕ್ಕಳು ನನಬಿಟ್ಹೋಗಲಿ
ಕುಂಡೆ ಮಂಡೆ ಮೇಲ್ಸಾಲ್ಗಾರರೊದೆಯಲಿ
ಭಂಡು ಸೂಳೇಮಗನೆಂದೆನಲಿ ॥ ೨ ॥
ವಾಸಿಪಂಥಗಳು ನಡೆಯದೆ ಹೋಗಲಿ
ಹಾಸ್ಯ ಮಾಡಿ ಜನರೆಲ್ಲ ನಗಲಿ
ಶ್ರೀಶ ಪು ರಂ ದ ರ ವಿ ಠ್ಠ ಲ ರಾಯನ
ದಾಸತ್ವವು ಶಾಶ್ವತವಾಗಿರಲಿ ॥ ೩ ॥

---

# ೧೨. ಸಖ್ಯಭಾವ

ಪರಮಾತ್ಮನು ತನ್ನ ಗೆಳೆಯನು, ತನ್ನ ಸಮನು, ಒಡನಾಡಿಗನು ಎಂಬ ಭಾವದಿಂದ ಭಕ್ತನು ಅವನನ್ನು ಆರಾಧಿಸುವುದೆ ಸಖ್ಯ ಭಕ್ತಿ ಎನಿಸುವದು. ನವವಿಧ ಭಕ್ತಿಯಲ್ಲಿ ಇದೂ ಒಂದು. ಭಕ್ತನು ಎಷ್ಟೇ ನಾಲಿಗೆಯಿಂದ ಹಾಗೂ ನಿಕಟಸಂಬಂಧವಿದ್ದವನಂತೆ ನಡಕೊಂಡರೂ ಪರಮಾತ್ಮನ ಬಗ್ಗೆ ತನ್ನಲ್ಲಿದ್ದ ಪ್ರೇಮಾದರಗಳನ್ನು ಯಾವದೇ ರೀತಿಯಿಂದ ಅವನು ಕಡಿಮೆಯಾಗಗೊಡುವುದಿಲ್ಲ. ಪರಮಾತ್ಮನು ಸರ್ವವ್ಯಾಪಿಯು. ಸರ್ವ ಶಕ್ತಿವಂತನು, ಸರ್ವತಂತ್ರ ಸ್ವತಂತ್ರನು ಎಂಬುದನ್ನು ಭಕ್ತನು ಎಂದೂ ಮರೆಯುವುದಿಲ್ಲ. ಆದರೆ ಪರಮಾತ್ಮನು ತನಗೆ ಅತ್ಯಂತ ಸಮೀಪದವನೆನಿಸಬೇಕು. ಹಾಗೂ ಅವನೊಡನೆ ಸಲಿಗೆಯಿಂದ ನಡಕೊಳ್ಳಲು ತನಗೆ ಬರಬೇಕೆಂಬ ಇಚ್ಛೆಯಿಂದ ಭಕ್ತನು ಸಖ್ಯಭಾವದಿಂದ ಆರಾಧಿಸುವನು.

ಪುರಾಣಗಳಲ್ಲಿಯ ಅರ್ಜುನ, ಉದ್ಧಾವಮದಿ ಭಕ್ತರು ಸಖ್ಯಭಾವದಿಂದ ನಡಕೊಂಡರೆಂದು ಹೇಳಬಹುದು. ದೇವರು ತಮ್ಮ ಗೆಳೆಯನೆಂದು ತಿಳಿದ ಬಳಿಕ ಸ್ವಾಭಾವಿಕವಾಗಿಯೇ ಭಕ್ತರು ಕೋಪ, ಚೇಷ್ಟೆ, ಸಮಭಾವ, ಸತ್ಯೆ, ಮುಂತಾದವುಗಳನ್ನು ತಮ್ಮ ಗೀತಗಳಲ್ಲಿ ವ್ಯಕ್ತಮಾಡುವರು. ಜೀವಾತ್ಮ ಪರಮಾತ್ಮರ ಗಂಭೀರ ಸಂಬಂಧವನ್ನು ಕ್ಷಣಹೊತ್ತಾದರೂ ಮರೆಮಾಡದೆ ಭಕ್ತರು ಸಖ್ಯಭಾವದಿಂದ ಹೇಗೆ ಹಾಡುವರು ಎಂಬುದನ್ನು ನೋಡಬೇಕಾದರೆ ಈ ಪದ್ಯಗಳನ್ನು ನೋಡಬಹುದು. ಭಕ್ತನು ಯಾವ ಭಾವದಲ್ಲಿದ್ದರೂ ಪ್ರತಿ ಕ್ಷಣವೂ ಅವನು ಪರಮಾತ್ಮನ ಬಳಿಗೆ ಹೋಗಲು ಹವಣಿಸುತ್ತಿರುವ ಸಾಧಕನೇ ಇರುವನು. ಆದುದರಿಂದ ಇದೊಂದು ಭಕ್ತಿಯ ರೀತಿ. ಹಲವು ಭಕ್ತರು ಈ ರೀತಿಯನ್ನು ಪ್ರೀತಿಸುವರು ಹಾಗೂ ತಮ್ಮ ಪ್ರೇಮ ಪ್ರವಾಹವನ್ನು ಈ ಮಾರ್ಗದಿಂದಲೆ ಹರಿಬಿಟ್ಟು ಹರಿಪದಗಳನ್ನು ಪಡೆಯುವರು.

## ೧೨೦. ನನಗೆ ನಿನಗೆ ಅಂತರ

ಕಲ್ಯಾಣಿ ರಾಗ ಝಂಪೆತಾಳ

ಏನೆಂದು ಕೊಂಡಾಡಿ ಸ್ತುತಿಸಲೊ ದೇವಾ
ನಾನೇನು ಬಲ್ಲೆ ನಿಮ್ಮ ಮಹಿಮೆಗಳ ಮಾಧವಾ || ಪ ||
ಹರಿ ಮುಕುಂದನು ನೀನು ನರಜನ್ಮ ಹುಳ ನಾನು
ಪರಮಾತ್ಮ ನೀನು ಪಾಮರನು ನಾನೂ ||
ಗರುಡಗಮನನು ನೀನು ಮರುಳ ಪಾಪಿಯು ನಾನು
ಪರಂಜ್ಯೋತಿಯು ನೀನು ತಿರುಕನು ನಾನೂ || ೧ ||
ವಾರಿಧಿಶಯನಾದ ಕಾರುಣ್ಯಪತಿ ನೀನು
ಘೋರದಿಂದಿಹ ಕಾಮಿ ಕ್ರೋಧಿ ನಾನೂ ||
ಈರೇಳು ಭುವನದೊಳು ಇರುವ ಮೂರುತಿ ನೀನು
ದೂರಿ ನಿಮ್ಮನು ಬೈವ ದುಷ್ಟ ನಾನೂ || ೨ ||
ಅಣುರೇಣು ತೃಣಗಳಲಿ ಪರಿಪೂರ್ಣನು ನೀನು
ಕ್ಷಣಕ್ಷಣಕೆ ಅವಗುಣದ ಕರ್ಮಿ ನಾನು ||
ವಾಣಿಯರಸನ ಪೆತ್ತ ವೈಕುಂಠಪತಿ ನೀನು
ತನು ನಿತ್ಯವಲ್ಲದ ಗೊಂಬೆ ನಾನೂ || ೩ ||
ಕಂಬದಲಿ ಬಂದ ಆನಂದ ಮೂರುತಿ ನೀನು
ನಂಬಿಕಿಲ್ಲದ ಪ್ರಪಂಚಿಗನು ನಾನೂ ||
ಅಂಬರೀಷಗೆ ಒಲಿದ ಅಕ್ರೂರಸಖ ನೀನು
ಡಂಭಕರ್ಮಿಯು ನಾನು ನಿರ್ಜಿತನು ನೀನೂ || ೪ ||
ತಿರುಪತಿಯವಾಸ ಶ್ರೀವೆಂಕಟೇಶನು ನೀನು
ಸ್ಮರಿಸಿ ನಿನ್ನಯ ನಾಮ ಬದುಕುವವ ನಾನೂ ||
ಬಿರದುಳ್ಳವನು ನೀನು ಮರೆಹೊಕ್ಕವನು ನಾನು
ಸಿರಿ ಕಾಗಿನೆಲೆ ಯಾ ದಿ ಕೇ ಶ ವ ನೆ ನೀನೂ || ೫ ||

## ೧೨೧. ನೀನು ಪರದೇಶಿ ದೇವಾ

ಕಾಂಬೋದಿ ರಾಗ ಝಂಪೆತಾಳ

ಪರದೇಶಿ ನೀನು ಸ್ವದೇಶಿ ನಾನು || ಪಲ್ಲ ||
ಪರಮ ಭಾಗವತರ ಬಾ ಹೋಗಿ ಕೇಳೋಣ || ಅ. ಪ. ||

ಎನಗೆ ಜನಕನು ನೀನು ನಿನಗಾವ ಜನಕನೊ
ಜನನಿ ಇಂದಿರೆ ದೇವಿ ನಿನಗಾವಳೊ
ವನಜಪೀಠನು ಭ್ರಾತ ನಿನಗಾವ ಭ್ರಾತನೊ
ಇನಸೋಮ ಮಾತುಳರು ನಿನಗಾವ ಮಾತುಳನೊ ॥ ೧ ॥
ಸುರನದೀ ಅಗ್ರಜಳು ನಿನಗೆ ಅಗ್ರಜಳಾರು
ಶರನಿಧಿ ಭಾವ ನಿನಗಾರೊ ಭಾವ
ಸ್ಮರನು ಕಿರಿಸಹಭವನು ನಿನಗೆ ಸಹಭವನಾರೊ
ಸುರರು ಬಂಧುಗಳೆನಗೆ ನಿನಗಾರು ಬಾಂಧವರೊ ॥ ೨ ॥
ವರ ಇಳಾ ಸಾಮಾತೆ ನಿನಗೆ ಸಾಮಾತೆ ಯಾರೊ
ಮರುತದೇವರು ಗುರು ನಿನಗಾರು ಗುರುವೊ
ಸಿರಿಯುರಸ ವಿಜಯ ವಿಠ್ಠಲರಾಯನೆ ನಿನ್ನ
ಚರಣ ಸೇವಕ ನಾನು ನೀನಾರ ಸೇವಕನೊ ॥ ೩ ॥

## ೧೨೨. ದಂಡಿಸಿದವರೆ ನಿನಗೆ ಪ್ರಿಯ

ಸುಳಾದಿ. ಧ್ರುವತಾಳ

ಗೋಪಿ ದೇವಿಯಂತೆ ಒರಳಿಗೆ ಕಟ್ಟದೆ
ಬರಿದೆ ದೈನ್ಯವ ಪಡುವೆ ನಾನು ।
ಭೃಗು ಮುನಿಯಂತೆ ನಿನ್ನ ಎದೆಯ ಮೇಲೊದೆಯದೆ
ಬರಿದೆ ದೈನ್ಯವ ಪಡುವೆ ನಾನು ।
ಭೀಷ್ಮನಂತೆ ನಿನ್ನ ಹಣೆಯ ನೊಡೆಯದೆ
ಬರಿದೆ ದೈನ್ಯವ ಪಡುವೆ ನಾನು ।
ಹಿಡಿಹಿಡಿ ಎಲೊ ದೈವ ಒರಳ ತೋರೆಂಬಂತೆ
ಬರಿದೆ ಎನ್ನನು ಬಳಲಿಸಿ ಕಾಡುವೆ ।
ಕೊಂಕಣೇರೆಮ್ಮೆಗೆ ಕೊರಡೇ ಮದ್ದೆಂಬಂತೆ
ಅವರೇ ನಿನಗೆ ಮುದ್ದು (ಮುದ್ದು) ಪುರಂದರವಿಠಲ ॥

## ೧೨೩. ನಿನ್ನಲ್ಲಿ ಏನೂ ಇಲ್ಲ

ಕಾಂಬೋದಿ ರಾಗ ಝಂಪೆತಾಳ

ಏನ ಬೇಡಲೊ ನಿನ್ನ ದೇವಾದಿ ದೇವ ॥ ಪಲ್ಲ ॥
ಏನಹುದೊ ನಿನ್ನೊಳಗೆ ಮಹಾನುಭಾವ ॥ ಅ. ಪ. ॥

ಮನೆಯ ಬೇಡಲಿ ವನಧಿ, ಹಾಸಿಗೆಯು ವಟಪತ್ರ
ವನಿತೆಯರ ಬೇಡಲಿ ಬ್ರಹ್ಮಚಾರಿ
ಘನ ಸಖ್ಯವನು ಬಯಸೆ ನೆನೆಯುವರ ಮನದಲಿಹೆ
ತಿನುವುದಕೆ ಕೇಳುವೆನೆ ನವನೀತ ಚೋರ ॥ ೧ ॥
ಒಡವೆಗಳ ಬಯಸೆ ಶಿಖಿಪಿಂಛ ತುಳಸಿಪತ್ರ
ಕಡು ಸೈನ್ಯವನೆ ಬಯಸೆ ಗೋಪಾಲನು
ಬಿಡದೆ ರೂಪವ ಬಯಸೆ ನೀಲಮೇಘಶ್ಯಾಮ
ಉಡುವುದಕೆ ಕೇಳುವೆನೆ ಸ್ತ್ರೀವಸನ ಚೋರ ॥ ೨ ॥
ಶಕ್ತಿಯನು ಗೋಪಿಕಾ ಸ್ತ್ರೀಯರಲಿ ವ್ಯಯಗೈದೆ
ಭಕ್ತಿಯನು ಸತ್ಯವಂತರಿಗಿತ್ತಿಹೆ
ಭಕ್ತರನು ವಂಚಿಸುತ ನೀನು ಬಚ್ಚಿಟ್ಟಿರುವ
ಮುಕ್ತಿಕಾಂತೆಯ ಕೊಡು ಸುಖಿಪೆನೋ ಶ್ರೀ ಕೃಷ್ಣ ॥ ೩ ॥

## ೧೨೪. ಪಂಚಾಯುತಿಯಿಂದ ನಮ್ಮ ಜಗಳ ತೀರಬೇಕು

ನಾಟಕುರವಂಜಿ ರಾಗ ಮಟ್ಟಿತಾಳ

ನಡೆದು ಬಾ ನಾಲ್ವರೆಡೆಗೆನ್ನಯ್ಯನೆ, ನಮ್ಮ ನಿಮ್ಮ
ತೊಡಕ ನಿರ್ಣಯಿಸಿಕೊಂಬೆನೊ ತೋಯಜಾಕ್ಷ ॥ ಪ ॥
ಆದಿಯಲಿ ಎನ್ನ ಮುತ್ತ್ಯಾರು ನಿನ್ನ
ಪಾದಸೇವೆಯ ಮಾಡಿ ಹಲವು ಕಾಲ ॥
ಸಾಧಿಸಿದರ್ಥವ ಗತಿ ಎನ್ನ ಜೀವಕ್ಕೆ
ಆಧಾರವಾದುದ ಅದನ್ಯಾಕೆ ಕೊಡಲೊಲ್ಲಿ ॥ ೧ ॥
ಸಾಲವ ಕೊಡುವಲ್ಲಿ ಸಲೆ ಹೌಳಿಯು ಮಾಡಿ
ಕಾಲವ ಕಳೆವೆ ನೀ ಕಪಟದಿಂದ ॥
ಮೇಲಾದ ವಿಭುಧರು ಮೆಚ್ಚುವಂತೆ ನಿನ್ನ
ಕಾಲಿಗೆ ಎನ್ನ ಕೊರಳ್ ಹತ್ತಕಟ್ಟುವೆ ॥ ೨ ॥
ಸನಕಾದಿ ಮುನಿಗಳ ಸಾಕ್ಷಿಯಿಂದಲಿ ಎನ್ನ
ಮನಕೆ ಬಪ್ಪಂತೆ ನೀ ಘನ ನಂಬಿಗೆ ಇತ್ತೆ ॥
ಅನುಮಾನವ್ಯಾಕಿನ್ನು ಪಾಲಿಸಯ್ಯ ಈಗ
ವನಜಾಕ್ಷ ತಂದೆ ಶ್ರೀ ಪುರಂದರ ವಿಠಲ ॥ ೩ ॥

## ೧೨೫. ನಿನ್ನನ್ನು ಕಾಪಾಡುವದು ನನ್ನ ಧರ್ಮ

ಕಾಂಬೋಧಿ ರಾಗ ಅಟತಾಳ

ಇದು ನಿನಗೆ ಧರ್ಮವೇ ಇಂದಿರೇಶಾ || ಪ ||
ಬದಿಗ ನೀನಾಗಿದ್ದು ಭೀತಿಪಡಿಸುವದು || ಅ. ಪ. ||
ನಿನ್ನ ಗುಣಗಳ ತುತಿಸಿ ನಿನ್ನನೇ ಹಾರೈಸಿ
ನಿನ್ನವರ ಪ್ರೀತಿಯನು ಸಂಪಾದಿಸಿ ||
ಅನ್ಯರನು ಲೆಕ್ಕಿಸದೆ ಚೆನ್ನಾಗಿ ಬಾಳುವ
ಮನ್ನವನ ಈ ಪರಿಯು ಬನ್ನಬಡಿಸುವದು || ೧ ||
ದುರುಳನಲ್ಲವೋ ನಿನ್ನ ಚರಣಸೇವಕರನ್ನ
ಪರಿಪಾಲಿಪುದು ನಿನ್ನ ಪರಮಧರ್ಮ ||
ಗುರುಗಳಂತರ್ಯಾಮಿ ಕರಮುಗಿದು ಬಿನ್ನೈಪೆ
ಶರಣರಕ್ಷಕನೆಂಬ ಬಿರಿದು ಸುಳ್ಳಾಗುತಿದೆ || ೨ ||
ಶೋಕನಾಶನ ವಿಗತಶೋಕನೆಂಬೋ ನಾಮ
ನಾ ಕೇಳಿ ಮೊರೆಹೊಕ್ಕೆ ಲೋಕಬಂಧೂ ||
ನಿ–ರಾಕರಿಸದೆಮ್ಮ ನೀ ಸಾಕಬೇಕನುದಿನವು
ವಾಕು ಮನ್ನಿಪುದು ಲೋಕೈಕರಕ್ಷಾಮಣಿಯೆ || ೩ ||
ಗುಣವೆ ನಿನಗಿದು ಬರಿದೆ ದಣಿಸುವದು ಶರಣರನು
ಪ್ರಣತಾರ್ತಿಹರ ವಿಭೀಷಣ ಪಾಲಕ ||
ಕ್ಷಣಕನಂತಪರಾಧ ಎಣಿಸುವರೆ ಕಡೆಯುಂಟೆ
ಮಣಿದು ಬಿನ್ನಹ ಮಾಳ್ಪೆ ಮನುಜದಲ್ಲಣನೇ || ೪ ||
ನಮೊ ನಮೊ ಬ್ರಹ್ಮಣ್ಯದೇವ ದೇವರ ದೇವ
ನಮೊ ನಮೊ ಧನ್ವಂತ್ರಿ ದುರಿತಹಂತ್ರೀ ||
ನಮೊ ನಮೊ ಕಾರುಣ್ಯಶೀಲ ಸಜ್ಜನಪಾಲ
ನಮೊ ನಮೊ ಜ ಗ ನ್ನಾ ಥ ವಿ ಠ್ಠ ಲ ವಿಖ್ಯಾತಾ || ೫ ||

## ೧೨೬. ಇಷ್ಟೂ ಕೊಡಬಾರದೇ

ಶಂಕರಾಭರಣ ರಾಗ ಅಟತಾಳ

ಇದನಾದರೂ ಕೊಡದಿದ್ದರೆ ನಿನ್ನ
ಪದಕಮಲವ ನಂಬಿ ಭಜಿಸುವುದೇಕೊ || ಪ ||

ಗ್ರಾಸವಸನಗಳಿಲ್ಲವೆಂದು ನಿನ್ನ । ಬ್ಯಾಸರಿಸಿ ಬೇಡ ಬಂದಿಲ್ಲ ॥
ವಾಸುದೇವನೆ ನಿನ್ನ ದಾಸರ ದಾಸರ ।
ದಾಸ ದಾಸ್ಯವ ಕೊಡು ಸಾಕೆಂದರೆ ॥ ೧ ॥
ಸತಿಸುತರು ಸಂತತ ಭಾಗ್ಯದಲ್ಲಿಪ್ಪ । ಅತಿಶಯಬೇಕೆಂದು ಬಂದದ್ದಿಲ್ಲ ॥
ಇತರ ವಿಷಯಗಳಿಗೆರಗುವದೆನ್ನ ಮನಸು
ಕಥಾಮೃತವನೆ ಕೇಳಿಸು ಸಾಂಕೆಂದರೆ ॥ ೨ ॥
ಒಡವೆಗಳು ಒಡ್ಯಾಣಗಳಿಲ್ಲೆಂದು । ಬಡವನೆಂದು ಬೇಡಬಂದದ್ದಿಲ್ಲ ॥
ಒಡೆಯ ನಿನ್ನಡಿಗಳಿಗೆರಗುವದೆ ಸುಖ
ಬಿಡದಿರುವದು ಬಂದೆ ಕೊಡು ಸಾಕೆಂದರೆ ॥ ೩ ॥
ಸಾಲವಾಯಿತು ಸಂಬಳವು ಎನಗಿಲ್ಲ
ಸಾಲವೆಂದು ಬೇಡಬಂದದ್ದಿಲ್ಲ ॥
ನಾಲಿಗೆಯಲಿ ನಿನ್ನ ನಾಮದುಚ್ಚಾರಣೆ
ಪಾಲಿಸಬೇಕೆಂದು ಬಂದೆ ನಾನಲ್ಲದೆ ॥ ೪ ॥
ಆಗಬೇಕು ರಾಜ್ಯಭೋಗಗಳೆನಗೆಂದು
ಬೇಗದಿಂದಲಿ ಬೇಡಬಂದದ್ದಿಲ್ಲ ॥
ನಾಗಶಯನ ರಂ ಗ ವಿ ಠ್ಠ ಲ ನಿನ್ನಯ
ಬಾಗಿಲಕಾಯ್ವ ಭಾಗ್ಯವೆ ಸಾಕೆಂದರೆ ॥ ೫ ॥

## ೧೨೭. ನಿನಗೆ ಕರುಣಾಕರನೆಂದೆನ್ನಬೇಕೇ

ಧನಾಸಿ ರಾಗ ಆದಿತಾಳ

ಕರುಣಾಕರ ನೀನೆಂಬುವದ್ಯಾತಕೊ
ಭರವಸವಿಲ್ಲೆನಗೆ ॥ ಪ ॥
ಪರಿಪರಿಯಲಿ ಈ ನರಜನ್ಮವನಿತ್ತು
ತಿರುತಿರುಗಿಸಿ ಮನ ಕರಗಿಸುವದಕೆ ॥ ಅ. ಪ. ॥
ಕರಿ ಧ್ರುವ ಬಲಿ ಪಾಂಚಾಲಿ ಅಹಲ್ಯೆಯು
ಪೊರೆದವ ಭವದಲ್ಲಿ ನೀನಂತೆ ॥
ಅಂತು ವಿಚಾರಿಸಿ ನೋಡಲದೆಲ್ಲವು
ಮರೆವುದೀಗ ಕಂತೆಗಳಂತೆ ॥ ೧ ॥

ಕರುಣಾಕರ ನೀನಾದರೆ ಈ ಗತಿ। ಕರಪಿಡಿದೆನ್ನನು ನೀ ಕಾಯೊ ||
ಸರಸಿಜಾಕ್ಷನೆ ಅರಸು ನೀನಾದರೆ
ದುರಿತಗಳೆನ್ನನು ಪೀಡಿಪುದುಂಟೇ || ೨ |
ಮರಣಕಾಲದಲಿ ಅಜಮಿಳಗೊಲದಿ ನೀ
ಗರುಡಧ್ವಜನೆಂಬೊ ಬಿರಿದಿಸಂದಾ ||
ವರ ಬಿರಿದುಗಳ್ ನಿನಗಿರಬೇಕಾದರೆ
ತ್ವರಿತದಿ ಸಲಹೊ ಪುರಂದರ ವಿಠಲ || ೩ ||

## ೧೨೮. ಆಣೆ ಇಟ್ಟುಕೊಂಡು ನಡೆಯುವ

ಶಂಕರಾಭರಣ ರಾಗ ತ್ರಿಪುಟತಾಳ

ಎನಗೂ ಆಣೆ ರಂಗ ನಿನಗೂ ಆಣೆ || ಪಲ್ಲ ||
ಎನಗೂ ನಿನಗೂ ಇಬ್ಬರಿಗೂ ಭಕ್ತರಾಣೆ || ಅ. ಪ. ||
ನಿನ್ನ ಬಿಟ್ಟು ಅನ್ಯರ ಭಜಿಸಿದರೆನಗೆ ಆಣೆ ರಂಗ
ಎನ್ನ ನೀ ಕೈಬಿಟ್ಟು ಪೋದರೆ ನಿನಗೆ ಆಣೆ || ೧ ||
ತನುಮನಧನದಲಿ ವಂಚಕನಾದರೆ ಎನಗೆ ಆಣೆ ರಂಗ
ಮನಸು ನಿನ್ನಲಿ ನಿಲಿಸದಿದ್ದರೆ ನಿನಗೆ ಆಣೆ || ೨ ||
ಕಾಕುಮನುಜರ ಸಂಗವ ಮಾಡಿದರೆನಗೆ ಆಣೆ ರಂಗ
ಲೌಕಿಕವ ಬಿಡಿಸದಿದ್ದರೆ ನಿನಗೆ ಆಣೆ || ೩ ||
ಶಿಷ್ಟರ ಸಂಗವ ಮಾಡದಿದ್ದರೆ ಎನಗೆ ಆಣೆ ರಂಗ
ದುಷ್ಟರ ಸಂಗವ ಬಿಡಿಸದಿದ್ದರೆ ನಿನಗೆ ಆಣೆ || ೪ ||
ಹರಿ ನಿನ್ನಾಶ್ರಯ ಮಾಡದಿದ್ದರೆ ಎನಗೆ ಆಣೆ ರಂಗ
ಪುರಂದರ ವಿಠಲ ನೀನೊಲಿಯದಿದ್ದರೆ ನಿನಗೆ ಆಣೆ || ೫ ||

# ೧೩. ವಾತ್ಸಲ್ಯಭಾವ

ವಾತ್ಸಲ್ಯಭಾವದಲ್ಲಿ ಭಕ್ತನು ದೇವರೊಡನೆ ತಾಯಿಮಗುವಿನ ಸಂಬಂಧವನ್ನು ಕ್ವಚಿತ್ ಪ್ರಸಂಗಗಳಲ್ಲಿ ತಂದೆಮಗುವಿನ ಸಂಬಂಧವನ್ನು ಜೋಡಿಸಿ ಅವನನ್ನು ಆರಾಧಿಸುವನು. ದೇವರು ತನ್ನ ಮಗುವು, ವತ್ಸನು ಎಂಬ ಭಾವದಿಂದ ಇಲ್ಲವೆ ದೇವರು ತನ್ನ ತಾಯಿ ಅಥವಾ ತಂದೆ ಎಂಬ ಭಾವದಿಂದ ಭಕ್ತನು ತಿಳಿದುಕೊಂಡು ನಡೆಯುವುದೆ ವಾತ್ಸಲ್ಯಭಾವವೆನಿಸುವದು. ಈ ಭಾವದಲ್ಲಿ ಕೂಡ ಭಕ್ತನು ಪರಮಾತ್ಮನ ಸರ್ವಶಕ್ತಿಮತ್ತ್ವಾದಿ ಗುಣಗಳನ್ನು ಮರೆತಿರುವುದಿಲ್ಲ. ಆದರೆ ತನ್ನ ಅಂತಃಕರಣದಲ್ಲಿ ಉಕ್ಕುವ ಉತ್ಕಟ ಪ್ರೇಮಭಾವಕ್ಕೆ ಒಂದು ವಿಶಿಷ್ಟವಾದ ರೂಪುಗೊಟ್ಟು ಭಕ್ತನು ತನ್ನ ವಾತ್ಸಲ್ಯಭಾವತರಂಗಗಳನ್ನು ಇಲ್ಲಿ ವ್ಯಕ್ತಪಡಿಸುವನು. ತಾಯಿಮಕ್ಕಳ ಸಂಬಂಧವು ಮಾನವೀ ಸಂಬಂಧಗಳಲ್ಲಿ ಅತ್ಯಂತ ಶ್ರೇಷ್ಠವೂ ನಿರ್ಹೇತುಕವೂ ಪ್ರೇಮಪೂರ್ಣವೂ ಭಾವವ್ಯಕ್ತಿಗೆ ಅನುಕೂಲವೂ ಇರುವುದು. ಆದುದರಿಂದ ಇಂಥ ಪದ್ಯಗಳಲ್ಲಿ ಅತ್ಯಂತ ಕೋಮಲವಾದ ಪ್ರೇಮರಸವು ತುಂಬಿಸೂಸಿ ಹರಿಯುವದು.

ತಾಯಿಯು ಯಾವ ಪ್ರೇಮರಸದಿಂದ ಪೂರ್ಣಳಾಗಿ ತನ್ನ ಶಿಶುವನ್ನು ಕಾಪಾಡುವಳೊ ಲಾಲಿಸುವಳೊ ಪಾಲಿಸುವಳೋ ಆ ಶಿಶುವಿನ ಬಾಲಲೀಲೆಗಳನ್ನು ನೋಡಿ ಆನಂದಿಸಿ ನಲಿನಲಿದಾಡುವಳೊ ಯಾವ ಮೃದುಮಧುರ ಸೊಲ್ಲುಗಳಿಂದ ಸಂಬೋಧಿಸುವಳೊ ಆ ಶಿಶುವಿನ ಯೋಗಕ್ಷೇಮಕ್ಕಾಗಿ ಯಾವ ಆತುರ ಭಯ-ಭೀತಿಗಳನ್ನು ವ್ಯಕ್ತಮಾಡುವಳೊ ಆ ಎಲ್ಲ ಭಾವತರಂಗಗಳ ಅಲೆದಾಟವನ್ನು ವಾತ್ಸಲ್ಯಭಾವದಿಂದ ಯುಕ್ತರಾದ ಭಕ್ತರಲ್ಲಿ ನಾವು ಕಾಣಬಹುದು. ದಾಸಸಖ್ಯದ ಭಾವಗಳಲ್ಲಿ ಏನೋ ಕೊಂಚಾದರೂ ಸಕಾಮತೆಯು ಕಂಡುಬರಬಹುದು. ಆದರೆ ಈ ಭಾವವು ನಿಷ್ಕಾಮತೆಯ ಸ್ವಯಂಸ್ವರೂಪವೆ ಎಂದು ಹೇಳಬಹುದು. ತಾಯಿ ತನ್ನ ಕಂದಮ್ಮನಿಂದ ಅದೇನು ಬಯಸಬಲ್ಲಳು?

ಪುರಾಣಕಾಲದಲ್ಲಿ ಕೌಸಲ್ಯೆಯು ಶ್ರೀರಾಮನನ್ನು ಈ ಭಾವದಿಂದ ನೋಡಿದ್ದು ಯಶೋದೆಯು ಬಾಲಕೃಷ್ಣನನ್ನು ಈ ಭಾವದಿಂದ ಸಂಬೋಧಿಸಿದ್ದು ಭಕ್ತರಿಗೆ ಮೇಲುಪಂಕ್ತಿಯಾದಂತಾಗಿದೆ. ಹಲವು ದಾಸರು ದೇವರು ಕೂಸು, ಮಗುವು ಎಂದು ತಿಳಿದು ಆರಾಧಿಸಿರುವರು. ಹಲವರು ಯಶೋದೆ ಮುಂತಾದವರು ಯಾವ ರೀತಿ ಬಾಲಕೃಷ್ಣನನ್ನು ಕುರಿತು ಹಾಡಿರಬಹುದೊ ಅದನ್ನು ಕಲ್ಪಿಸಿ ಹಾಡಿರುವರು. ಭಕ್ತರು ದೇವರನ್ನು ಒಮ್ಮೆ ಮೊಲೆಗೂಸಿನಂತೆ, ಒಮ್ಮೆ ಹರಿದಾಡುವ ಹಸುಳೆಯಂತೆ, ಒಮ್ಮೆ ಓಡಾಡುವ ಹುಡುಗನಂತೆ, ಇನ್ನೊಮ್ಮೆ ಕೊಳಲನೂದುವ ಗೋಪಾಲಕೃಷ್ಣನಂತೆ ಕಲ್ಪಿಸಿಕೊಂಡಾಡಿ ಆ ಸವಿಸುಧೆಯ ಪ್ರವಾಹದಲ್ಲಿ ಮಗ್ನರಾಗಿರುವರು. ಇದು ಶುದ್ಧ, ನಿರ್ದೋಷ, ನಿರ್ಹೇತುಕ, ಪ್ರೇಮನಿರ್ಝರವು ಎಂದು ಹೇಳಬಹುದು.

## ೧೨೯. ಬಾಲಕೃಷ್ಣನನ್ನು ಎಂದು ಅಪ್ಪಿಕೊಳ್ಳುವೆ

ಭೈರವಿ ರಾಗ ಅಟತಾಳ

ಎಂದಪ್ಪಿಕೊಂಬೆ ರಂಗಯ್ಯನ ಎಂದಪ್ಪಿಕೊಂಬೆ || ಪ ||
ಎಂದಪ್ಪಿಕೊಂಬೆ ನಾ ಎಂದು ಮುದ್ದಾಡುವೆ
ಎಂದಿಗೆ ಸವಿಮಾತು ಕೇಳಿ ನಾ ದಣಿವೆ || ಅ. ಪ. ||

ಅಂದುಗೆ ಪೊಂಗೆಜ್ಜೆ ಪಾಯವಟ್ಟೆ ಘುಲು ಘುಲು || ೧ ||
ಅಂದದಿ ಕುಣಿವ ಗೋವಿಂದನ ಚರಣವ

ಹೊನ್ನ ಉಡುದಾರ ರನ್ನ ಕಾಂಚೀದಾಮ
ಸಣ್ಣ ನಡುವಿಟ್ಟ ಜಾನ್ನವೀಜನಕನ || ೨ ||

ಅಪ್ಪಣ್ಣ ಭಾಗವತನ ವೇಷವ ತಾಳಿ
ತುಪ್ಪದ ಬಿಂದಿಗೆ ತಂದ ಸರ್ಪಶಯನನ || ೩ ||

ಅರಳೆಲೆ ಮಾಗಾಯಿ ಕೊರಳ ಕೌಸ್ತುಭಹಾರ
ತರಳರ ಒಡಗೂಡಿ ಬೆಣ್ಣೆಯ ಮೆಲುವನ || ೪ ||

ಧರೆಯೊಳು ಸುಜನರ ಮರೆಯದೆ ಸಲಹುವ
ಪು ರಂ ದ ರ ವಿ ಠ ಲ ನ ಸಿರಿಪಾದ ಪದುಮಗಳ || ೫ ||

## ೧೩೦. ಯಶೋದೆ ಕೃಷ್ಣನನ್ನು ಕರೆಯುವಳು

ಸಾವೇರಿ ರಾಗ ಅಟತಾಳ

ಮಾಧವ ಮಧುಸೂದನ ಯಾದವ ಕುಲರನ್ನ
ಬಾರೆಂದು ಕರೆದಳ್ ಯಶೋದೆ ಮುದ್ದಿಲಿ ಮಗನಾ || ಪ ||
ಸಂಗಡಿಗರನೆಲ್ಲ ಬಿಟ್ಟು ಬಾರಯ್ಯ ಚೆಲುವ
ಮುಂಗೈ ವಾಕು ಬೆರಳ್ ಹೊನ್ನುಂಗುರ ||
ಝುಂಗಿಪ ಉಡುಗೆಜ್ಜೆ ಉಡುದಾರವ ಕಂಡು
ಅಂಗನೆಯರು ನಿನ್ನ ಒಯ್ಯುವರೋ || ನಿ-
ನ್ನಂಘ್ರಿವ್ಯಾಲೆನ್ನ ನೊಸಲ ನಿಡುವೆ ಕೃಷ್ಣ
ಕಂಗಳ ಸಿರಿಯೆ ಬಾರೋ ಮಗನೆ || ೧ ||
ಬಾಲಕರೊಡನಾಟ ಸಾಕು ಬಾರಯ್ಯ
ನೀಲಾಂಗ ನಿನ್ನ ಮುತ್ತಿನರಳೆಲೆ ||
ಕೀಲು ಮಾಗಾಯಿ ಹುಲಿಯುಗುರು ಕಂಡು
ಸೋಲ್ವರೊ ನಿನಗೆ ಸೊಬಗಿಯರು ||
ಶ್ರೀಲೋಲ ನೀನಳಿದಿ ಕಂಸಾಸುರನ ತುಂಬಿದೊ-
ಡ್ಡೋಲಗದೊಳು ರಕ್ಕಸರು ಪಂಥವಾಡಿ ||
ವೀಳ್ಯವ ಪಿಡಿದು ನಿನಕೊಲುವೆನೆಂದವರ
ಕಾಲಿಗೆ ನಿನಗೆರಗುವೆ ಬಾರೋ ಮಗನೆ || ೨ ||
ಬೊಮ್ಮದ ಮರಿಯೆ ವಿಶ್ವವನ್ನೆಲ್ಲ ಹೃದಯದೊ-
ಳೊಮ್ಮೆ ತೋರುವೆನೆಂದು ಕಂಡು ನಾ ಬಲ್ಲೆ ||
ಒಮ್ಮೆಲೆ ಮನಕೆ ಅಹಲ್ಲಾದವಾಯಿತು
ಸುಮ್ಮಾನದಿಂದ ಭಾಗವತರ ಪಾಲಿಸುತಿಪ್ಪೆ ||
ಅ-ಗಮ್ಯಗೋಚರ ಶ್ರೀ ಪು ರಂ ದ ರ ವಿ ಠ ಲ ತೊರೆ
ದಮ್ಮಿಯ ನಾ ನಿನಗೆ ಕೊಡುವೆ ಬಾರೆಲೊ ಮಗನೆ || ೩ ||

## ೧೩೧. ಬಾಲಕೃಷ್ಣನನ್ನು ಹರಸಿದುದು

ಮಧ್ಯಮಾವತಿ ರಾಗ ಆದಿತಾಳ

ಬಣ್ಣಿಸಿ ಗೋಪಿ ತಾ ಹರಸಿದಳು
ಎಣ್ಣೆಯನೊತ್ತುತ ಯದುಕುಲತಿಲಕನ || ಪ ||

ಆಯುಷ್ಯವಂತನಾಗು ಅತಿ ಬಲ್ಲಿದನಾಗು
ಮಾಯದ ಖಳಮರ್ದನನು ಆಗು ||
ರಾಯರ ಪಾಲಿಸೊ ರಕ್ಕಸರ ಸೋಲಿಸೊ
ವಾಯುಸುತನಿಗೆ ನಿರತೇಯನಾಗೆನುತ || ೧ ||
ಧೀರನು ನೀನಾಗು ಅತಿ ದಯಾಂಬುಧಿಯಾಗು
ಆ ರುಕ್ಮಿಣಿಗೆ ನೀನರಸನಾಗು ||
ಮಾರನ ಪಿತನಾಗು ಮಧುಸೂದನನಾಗು
ದ್ವಾರಾವತಿಗೆ ನೀ ಧೊರೆಯಾಗೆನ್ನುತಾ || ೨ ||
ಆನಂದರೂಪಾಗು ಅಚ್ಯುತ ನೀನಾಗು
ದಾನಾವಾಂತಕನಾಗು ದೇವ ನೀನಾಗು ||
ಶ್ರೀನಿವಾಸನಾಗು ಶ್ರೀಧರ ನೀನಾಗು
ಜ್ಞಾನಿ ಪು ರಂ ದ ರ ವಿ ಠ ಲ ನಾಗೆನ್ನುತ || ೩ ||

## ೧೩೨. ಕೊಳಲನೂದುವ ಕೃಷ್ಣ

ಮೋಹನ ರಾಗ ಆದಿತಾಳ

ಕೊಳಲನೂದುವ ಚದುರನಾರೆ, ನೋಡಮ್ಮ || ಪ ||
ತಳಿರಂತೆ ತಾಂ ಪೊಳೆವ ಮಧುಕರ ಪಿಡಿದು || ಅ. ಪ. ||
ನಾದದಿಂದ ತುಂಬಿತು ಗೋವರ್ಧನ ಪರ್ವತವು
ಯಾದವಕುಲ ಘನವ ಸರಿಸಿದವು ಖಗಕುಲವು ||
ಶೋಧಿಸಿ ನೋಡಲು ಕೃಷ್ಣನ ಈಗಲೆ
ಸಾಧ್ಯವೇನೆ ವೃಂದಾವನದೊಳಗೆ || ೧ ||
ಮೇವ ಮೇಯುತ ಮರೆತವು ಗೋವುಗಳೆಲ್ಲ
ಸಾವಧಾನದಿಂದ್ಹರಿದಳು ಯಮುನಾದೇವಿ ||
ಆವು ಕಾಯುತ ಗೋವ್ಗಳ ಮರೆತರು ಯಾ-
ದಾವರಲ್ಲವೆ ವೃಂದಾವನದೊಳು || ೨ ||
ಸುರರು ಕೇಳಿ ಸುಮ ಸುರಿದರಾಕಾಶದಲಿ
ಹರಿದುಹೋಗಿ ನೋಡೆಲೆ ವೃಂದ್ಯಾವನದಲ್ಲಿ ||
ಸಾರಿಸಾರಿಗೆ ಶ್ರೀ ಕೃ ಷ್ಣ ನು ಈಗಲೆ
ತುರುಗಳ ಕಾಯುವ ಕದಂಬವನದೊಳು || ೩ ||



೧೫–೧೪೧೧

## ೧೩೩. ಜೋ ಜೋ ಹಾಡು

ಶಂಕರಾಭರಣ ರಾಗ ಅಟತಾಳ

ಜೋ ಜೋ ಜೋ ಜೋ ಜೋ ಕೃಷ್ಣ ಪರಮ
ಜೋ ಜೋ ನಂದಗೋಪಿಯ ಕಂದ ಮುಕುಂದ || ಜೋ ಜೋ || ಪ ||
ಭೂಮಿಯ ಚಿನ್ನದ ತೊಟ್ಟಿಲ ಮಾಡಿ
ಸೋಮ ಸೂರ್ಯರೆಂಬ ಕಲಶವ ಮಾಡಿ ||
ಆ ಮಹಾ ಆಕಾಶ ಕೆಂದಟ ಮಾಡಿ
ಜೋ ಜೋ ಜೋ ಜೋ ಜೋಯೆಂದು ಪಾಡಿ || ಜೋ ಜೋ || ೧ ||
ವಸುದೇವ ಸುತನಾದ ಮುದ್ದುಮುರಾರಿ
ಅಸುರೆ ಪೂತನಿಯ ಪ್ರಾಣಪಹಾರೀ ||
ಅಸಮಸಾಹಸ ಮಲ್ಲದೈತ್ಯರ ವೈರಿ
ಶಿಶುವಾಗಿ ದೇವಕಿಗಾನಂದ ತೋರಿ || ಜೋ ಜೋ || ೨ ||
ಬೌದ್ಧನಾಗಿ ದೈತ್ಯರನಳಿದಲ್ಲೊ
ಮುದ್ದು ತುರಗವನೇರಿ ಕಲ್ಕ್ಯಾದಿಯಲ್ಲೊ ||
ಪದ್ಮನಾಭ ಸಿರಿ ಭಕತವತ್ಸಲ
ನಿದ್ರೆಯ ಮಾಡಯ್ಯ ಶ್ರೀ ರಂ ಗ ವಿ ಠ ಲಾ || ೩ ||

## ೧೩೪. ಕಣ್ಣು ಮರೆಯಾಗಿ ಏಕೆ ಆಡಿದೆ

ಶಂಕರಾಭರಣ ಅಟತಾಳ

ಎಲ್ಲಾಡಿ ಬಂದ್ಯೋ ಮುದ್ದು ರಂಗಯ್ಯ ನೀ-
ನೆಲ್ಲಾಡಿ ಬಂದ್ಯೋ ಕೃಷ್ಣಯ್ಯ || ಪ ||
ಎಲ್ಲಾಡಿ ಬಂದ್ಯೋ ಎನ್ನ ಕಣ್ಣಮುಂದಾಡದೆ || ಅ. ಪ. ||
ಆಲಯದೊಳಗೆ ನೀನಾಡದೆ, ಬೆಣ್ಣೆ
ಪಾಲು ಸಕ್ಕರೆಯ ನೀ ಮೆಲ್ಲದೆ || ಚಿಕ್ಕ
ಬಾಲರೊಡಗೂಡಿ ಆಡದೆ
ಬಾಲಯ್ಯ ನೀನೆನ್ನ ಕಣ್ಣ ಮುಂದ್ದಾಡದೆ || ೧ ||
ಪದಕ ರತ್ನವ ನೀನೊಲ್ಲದೆ, ದಿವ್ಯ
ಮಧುರ ಭಾಷಣವ ನೀನಾಡದೆ ||

ಸುದತಿಯರೊಡಗೂಡ್ಯಾಡದೆ, ಮುದ್ದು
ಚದುರ ಕೃಷ್ಣಯ್ಯ ಎನ್ನ ಕಣ್ಣಮುಂದಾಡದೆ || ೨ ||
ಅಷ್ಟು ದಿಕ್ಕಿನಲ್ಲಿ ಅರಸಿ ಕಾಣದೆ, ಬಲು
ದೃಷ್ಟಿಗೆಟ್ಟಿತೊ ನಿನ್ನ ನೋಡದೆ || ನಾ-
ನೆಷ್ಟು ಹೇಳಲು ಕೇಳಬಾರದೆ, ರ ಂ ಗ
ವಿ ಠ ಲ ನೀನೆನ್ನ ಕಣ್ಣ ಮುಂದಾಡದೆ || ೩ ||

## ೧೩೫. ಹೊರಗೆ ಹೋಗಬೇಡ

ಶಂಕರಾಭರಣ ರಾಗ ಅಟತಾಳ

ಪೋಗದಿರೆಲೊ ರಂಗ ಬಾಗಿಲಿಂದಾಚೆಗೆ || ಪ ||
ಭಾಗವತರು ಕಂಡರೆತ್ತಿಕೊಂಡೊಯ್ವರೊ || ಅ. ಪ. ||
ಸುರಮುನಿಗಳು ತಮ್ಮ ಹೃದಯಗಹ್ವರದಲ್ಲಿ
ಪರಮಾತ್ಮನ ಕಾಣದರಸುವರೊ ||
ದೊರಕದ ವಸ್ತುವು ದೊರಕಿತು ನಮಗೆಂದು
ಹರುಷದಿಂದಲಿ ಬಂದು ಕರೆದೆತ್ತಿಕೊಂಬರೊ || ೧ ||
ಅಗಣಿತ ಗುಣ ನಿನ್ನ ಜಗದ ನಾರಿಯರೆಲ್ಲ
ಹಗರಣ ಮಾಳ್ಪರು ಗೋಪಾಲನೇ ||
ಮಗುಗಳ ಮಾಣಿಕ್ಯ ತಗಲಿತು ಕರಕೆಂದು
ಮಿಗಿಲು ವೇಗದಿ ಬಂದು ಬಿಗಿದಪ್ಪಿಕೊಂಬರೊ || ೨ ||
ದುಷ್ಟನಾರಿಯರು ತಮ್ಮಿಷ್ಟವ ಸಲಿಸೆಂದು
ಅಟ್ಟಟ್ಟ ಬೆನ್ನಟ್ಟಿ ತಿರುಗುವರೊ ||
ಸೃಷ್ಟೀಶ ಪು ರ ಂ ದ ರ ವಿ ಠ ಲ ರಾಯನೆ
ಇಷ್ಟಿಷ್ಟು ಬೆಣ್ಣೆಯ ಕೊಟ್ಟೆನೊ ಗೋಪಾಲಾ || ೩ ||

## ೧೩೬. ವಿಲಕ್ಷಣ ಕೂಸು

ಪಂತುರಾವಳಿ ರಾಗ ಆದಿತಾಳ

ಕೂಸನು ಕಂಡಿರಾ, ಜ್ಞಾನಿಗಳೆಲ್ಲ, ಕೂಸನು ಕಂಡಿರಾ || ಪ ||
ಸಾಸಿರ ನಾಮದ ಶತಕೋಟಿ ತೇಜದ

ಸೂಸುವ ಸುಖಮಯ ಜ್ಞಾನದ ಕೂಸು || ಅ. ಪ. ||

ಜ್ಞಾನ ಸಮುದ್ರದೊಳಾಡುವ ಕೂಸು
ಜ್ಞಾನಿಗಳ ಹೃದಯದಿ ಹೊಳೆಯುವ ಕೂಸು
ದೀನದಾಸರಿಗೆ ಕಾಣುವ ಕೂಸು
ತಾನೆ ಬಲ್ಲುದು ತನ್ನ ಮಹಿಮೆಯ ಕೂಸು || ೧ ||

ಲೋಕತ್ರಯವೆಲ್ಲ ನೋಡುವ ಕೂಸು
ಬೇಕಾದ ಭಕ್ತರೊಳಾಡುವ ಕೂಸು
ಆಕಾರವಿದ್ದು ನಿರಾಕಾರ ಕೂಸು
ಸಾಕಲ್ಯ ದೃಷ್ಟಿಗೆ ಸಿಲುಕದ ಕೂಸು || ೨ ||

ತನುಮನಧನದಲಿ ಕುಳಿತಿಹ ಕೂಸು
ಘನವಾದ ಮಹಿಮೆಗೆ ಕಾರಣ ಕೂಸು
ಬಿನಗು ಬುದ್ಧಿಗೆ ಎಂದು ಸಿಲುಕದ ಕೂಸು
ಚಿನುಮಯ ಪುರಂದರವಿಠ್ಠಲ ಕೂಸು || ೩ ||

# ೧೪. ಮಧುರಭಾವ

ತಾನು ಸತಿ ಪರಮಾತ್ಮನು ಪತಿ ಎಂಬ ಭಾವದಿಂದ ಭಕ್ತನು ಮಾಡುವ ದೇವರ ಆರಾಧನೆಗೆ ಮಧುರಾ ಭಕ್ತಿ ಎನ್ನುವರು. ಹಲವೆಡೆಗೆ ಪರಮಾತ್ಮನೇ ಸತಿ ಹಾಗೂ ತಾನು ಪತಿ ಎಂದು ಭಕ್ತರು ಆರಾಧಿಸುವದೂ ಉಂಟು. ವಿಶೇಷವಾಗಿ ಇರಾಣ ದೇಶದ ಸುಫೀ ತತ್ವಜ್ಞರು ಈ ರೀತಿ ಆರಾಧಿಸಿದುದು ಕಂಡುಬರುವದು. ಅದಾದರೂ ಮಧುರಭಾವವೆಂದೇ ಎನಿಸುವದು. ಭಕ್ತ ಪರಮಾತ್ಮರಲ್ಲಿ ಸತಿಭಾವವಿದ್ದಲ್ಲಿ ಅದು ಮಧುರಭಾವವೆಂದೆಣಿಸಿಲಾಗುವದು.

ಅನ್ವರ್ಥಕವಾಗಿ ಇದು ಮಧುರವಾದ ಅಂದರೆ ಸವಿಯಾದ ಭಾವವು. ಮಾನವೀ ಸಂಬಂಧಗಳಲ್ಲಿ ಸತಿಪತಿಯರ ಸಂಬಂಧವು ಅತ್ಯಂತ ಗೂಢವೂ ಮಧುರವೂ ಇರುವದು. ನದನದಿಗಳು ಸಮುದ್ರದೆಡೆಗೆ ಎಷ್ಟು ನೈಸರ್ಗಿಕ ವಾಗಿ ಆಕರ್ಷಿಸಲ್ಪಡುವವೋ ಅಷ್ಟೇ ವೇಗದಿಂದ ಹಾಗೂ ನೈಸರ್ಗಿಕವಾಗಿ ಸತಿಪತಿಯರು ಪರಸ್ಪರರೆಡೆಗೆ ಎಳೆಯಲ್ಪಡುವರು.

ಬ್ರಹ್ಮನು ಸ್ವಲೀಲೆಯಿಂದ ಜೀವವನ್ನು ಸತಿಪತಿ ಎಂಬ ಎರಡು ರೂಪು ಮಾಡಿ ಅದನ್ನು ಮತ್ತೆ ಒಂದು ಗೂಡಿಸುವ ಆಟವನ್ನು ನಿಸರ್ಗದ ಕ್ರೀಡಾಂಗಣ ದಲ್ಲಿ ಹೂಡಿ ಜೀವ ಸಂತತಿಯನ್ನು ಸಾಧಿಸುತ್ತಿರುವನು. ಸತಿಪತಿಗಳು, ಸ್ತ್ರೀಪುರುಷರು ಈ ಆಟದಲ್ಲಿ ಪ್ರಕೃತಿಯ ಆಟಿಕೆಗಳೇ ಸೈ. ಮಧುರ ಭಕ್ತಿ ಯಲ್ಲಿ ಪರಮಾತ್ಮನು ಪುರುಷನು ಹಾಗೂ ಪ್ರಕೃತಿಯು ಸ್ತ್ರೀಯು ಎಂದು ಅಂದರೂ ಸಲ್ಲುವದು.

ಸತಿಪತಿಗಳ ಅಂತಃಕರಣಗಳ ಐಕ್ಯವು ಎಲ್ಲಕ್ಕೂ ಗಾಢವು ಹಾಗೂ ಹೆಚ್ಚಿನದು. ಆದರೆ ಮಧುರಭಾವದಲ್ಲಿ ಇಂದ್ರಿಯ ಸುಖಗಳ ಛಾಯೆ ಮಾತ್ರ ಇರಕೂಡದು ಎಂಬದನ್ನು ನಾವು ಲಕ್ಷಿಸತಕ್ಕದ್ದು. ಮಧುರ ಭಾವಸಾಧನ

ಮಾಡುವಾಗ ಭಕ್ತಿ ಮಾರ್ಗದಲ್ಲಿಯು ಮಹಾಭಾವವೆಂಬ ಉಚ್ಚಸ್ಥಿತಿಯು ಪ್ರಾಪ್ತವಾಗುವದು. ಪರಮಾತ್ಮ ಯೋಗದಿಂದ ಆತ್ಯಂತಿಕ ಸುಖ ಹಾಗೂ ಪರಮಾತ್ಮನಿಯೋಗದಿಂದ ಆತ್ಯಂತಿಕ ದುಃಖ ಹೀಗೆ ಅನುಭವಿಸುವುದೇ ಮಹಾ ಭಾವದ ಮುಖ್ಯ ಲಕ್ಷಣವೆಂದು ಭಕ್ತಿ ಗ್ರಂಥಗಳಲ್ಲಿ ಉಲ್ಲೇಖವಿರುವದು. ಈ ಭಾವದಲ್ಲಿಯ ಸಂಪೂರ್ಣ ನಿಷ್ಕಾಮತೆ ಹಾಗೂ ಕಾಮಗಂಧಹೀನತೆ ಇವು ಅವಶ್ಯ ಸತಿಪತಿಯರ ನಡುವೆ ಇರುವ ಸಕಾಮತೆಯು ಸುಂಕವನ್ನು ತೆಗೆದೊಗೆ ದಾಗಲೆ ಅದು ಮಧುರ ಭಾವವೆಂದೆನಿಸಿಕೊಳ್ಳಲು ಯೋಗ್ಯವಾಗುವುದು. ನಿಚ್ಚಳ, ನಿರ್ಮಲ, ನಿಷ್ಕಾಮ, ಏಕನಿಷ್ಟ ಸತಿಯು ಕೇವಲ ನಿರ್ವ್ಯಾಜ ಪ್ರೇಮ ದಿಂದ ಪತಿಯುನ್ನು ಪ್ರೀತಿಸುವಂತೆ ಪರಮಾತ್ಮನನ್ನು ಪ್ರೀತಿಸುವ ಭಕ್ತನೇ ನಿಜಭಕ್ತನು.

ಈ ಮಧುರವಾದ ಪರಮಾವಧಿಯು ವ್ರಜೇಶ್ವರಿಯಾದ ರಾಧಾರಾಣಿ ಯಲ್ಲಿ ಪರಮಾವಧಿಯನ್ನು ಮುಟ್ಟಿದುದು ನಮಗೆ ಕಂಡುಬರುವದು. ಆಕೆ ಶ್ರೀಕೃಷ್ಣನ ವಿವಾಹಿತ ಸ್ತ್ರೀ ಇರಲಿಲ್ಲ. ಆದರೆ ಅವನು ಪರಮಾತ್ಮನ ಅವತಾರನೆಂದು ಆಕೆ ಮನಗಂಡಿದ್ದರಿಂದ ತನ್ನ ಸರ್ವಾಂತಃಕರಣವನ್ನು ಅವನಿಗೆ ಒಪ್ಪಿಸಿಬಿಟ್ಟಿದ್ದಳು. ಹೀಗೆ ಮಾಡುವಾಗ ಲಜ್ಜೆ, ಭಯ, ಲೌಕಿಕ ಅಪವಾದ ಮುಂತಾದವುಗಳನ್ನು ಆಕೆ ಎಳ್ಳಷ್ಟು ಲೆಕ್ಕಿಸಲಿಲ್ಲ. ಚೈತನ್ಯ, ಗೌರಾಂಗ ಮುಂತಾದ ಭಕ್ತರು ಇತಿಹಾಸ ಕಾಲದಲ್ಲಿ ಈ ಭಾವದ ಸಾಧನ ಮಾಡಿದರು. ಈಚೆಗೆ ಶ್ರೀ ರಾಮಕೃಷ್ಣ ಪರಮಹಂಸರು ಸ್ವತಃ ಆರು ತಿಂಗಳ ಮಟ್ಟಿಗೆ ಸ್ತ್ರೀವೇಷಭೂಷಣಗಳನ್ನು ಧರಿಸಿ ಈ ಭಾವದ ಸಾಧನವನ್ನು ಗೈದರು.

ಈ ಭಾವದಲ್ಲಿದ್ದು ನುಡಿಯುವಾಗ, ಹಾಡುವಾಗ ಶೃಂಗಾರಿಕ ಭಾಷೆಯು ಉಪಯೋಗಿಸಲ್ಪಡುವದು ಸ್ವಾಭಾವಿಕವು. ಭಾಗವತ ದಶಮಸ್ಕಂಧದಲ್ಲಿಯೂ ಜಯದೇವ ಕವಿಯ ಗೀತ ಗೋವಿಂದದಲ್ಲಿಯೂ ಈ ಭಾವದ ಭಾಷೆಯ ೨ ಹೇರಳ ವಾಗಿ ಕಂಡುಬರುವದು

## ೧೩೭. ಮುತ್ತೈದೆಯಾಗಿರಬೇಕು

ಕಾಂಬೋಧಿ ರಾಗ ಝಂಪೆತಾಳ

ಮುತ್ತೈದೆಯಾಗಿರಬೇಕು ಮುದದಿಂದಲಿ
ಹತ್ತುನೂರು ನಾಮದೊಡೆಯ ಹರಿಪತಿಯೆಂದು || ಪ ||

ಗುರುಮಧ್ವಶಾಸ್ತ್ರವನು ಓದುವದು ಮಾಂಗಲ್ಯ
ಪರಮವೈರಾಗ್ಯ ಧರಿಸಿಹುದೇ ಮೂಗುತಿಯು ||
ತರತಮಗಳಿರುವದೇ ಉತ್ತಮ ಪೂಮಾಲೆ
ಪರಮಪುರುಷನ ಧ್ಯಾನ ಕಶ್ಯಾಣಿಕಟಿಕೊಂಡು || ೧ ||
ಹರಿಕಥೆ ಕೇಳುವದು ಮಿಗೆ ಮುತ್ತಿನ ವಾಲೆ
ನಿರತ ಸತ್ಕರ್ಮವು ನಿಜಕಾಂತಿಯು ||
ಹರಿದಾಸರ ಪಾದರಜ ಹೇರಳ ಭಂಗಾರ
ಗುರುಭಕುತಿಯೆಂಬಂಥ ಗಂಧಕುಂಕುಮ ಧರಿಸಿ || ೨ ||
ಪೊಡವಿಯೊಳು ಪರಹಿತದ ಪಟ್ಟವಾಳಿಯನುಟ್ಟು
ಕೊಡುವ ದಾನಗಳೆಂಬೊ ಕುಬುಸತೊಟ್ಟು ||
ಬಿಡದೆ ಎನ್ನೊಡೆಯ ಶ್ರೀ ಪು ರಂ ದ ರ ವಿ ಠ ಲ ನೊಳು
ದೃಢಭಕ್ತಿಯೆಂಬಂಥ ಕಡಗ ಬಳೆ ಇಟ್ಟುಕೊಂಡು || ೩ ||

## ೧೩೮. ಗೋಪಿಯ ಕರೆ

ಮೋಹನ ರಾಗ ಆದಿತಾಳ

ಬಾರೊ ನೀ ಎನ್ನ ಮನಮಂದಿರಕ್ಕೆ, ತಡಮಾಡುವದ್ಯಾಕೆ
ಮಾರಜನಕ ಹರಿ ನಿನ್ನಗ್ಗಳಿಕೆ ಸ್ಮರಿಸುವೆ ಕ್ಷಣಕ್ಷಣಕೆ || ಪ ||
ಬಾರೊ ಬಾರೋ ಮಧುರಾಪುರಿ ಬಿಟ್ಟು
ಸೇರಿಕೊಳ್ಳದಿರೋ ವರಕರಿಪುರವ || ಅ. ಪ. ||
ಕುಂತೀಮಕ್ಕಳ ಮನೆಗ್ಹೋದೆನೆಂದಿ, ಅವರ್ಕೈದು ಮಂದಿ
ಸಂತೋಷಪಡಿಸುವರೆಂದು ತಿಳಿದಿ, ಎಂಜಲ ಬಳಿದಿ
ಕಂತುಪಿತಕೇಳೊ ಮುಂದೆ ನೀ ಮುದದಿ, ಬಂಡಿಯ ಹೊಡೆದಿ ||
ಇಂತು ಪರಿಯ ನಾನೆಂತು ಪೇಳಲೊ
ಕಾಂತ ಎನ್ನ ಮನದಂತರ್ಯಾಮಿ || ೧ ||
ಗೋಕುಲದಲ್ಲಿರೆ ನಂದಗೋಪ, ನಿನ್ನ ಕೈಯಿಂದ
ಆಕಳ ಕಾಯಿಸುವನು ಅವ ಪಾಪ, ಅದು ಅಲ್ಲದಲೆ
ನೀ ಕೇಳೊ ಗೋಪಿಯರ ಅಪಲಾಪ, ಲಾಲಿಸು ನೀ ಭೂಪ
ಈ ಕರಕರೆಯೊಳು ನೀ ಕೂಡಿರುವದು
ಯಾಕೆಲೊ ಕಾಂತನೆ ಮಮ ಹೃತ್ಕಮಲಕೆ || ೨ ||

ದುಷ್ಟ ಮಾವನ ಮನೆಗ್ಹೋಗಲಿ ಬೇಡ, ಪಟ್ಟದಾನೆಗಳಿಂದ
ಘಟ್ಯಾಗಿ ಮೇಲ್ತುಳಿಸುವನವ ಮೂಢ, ಮಲ್ಲರ ಕೈಯಿಂದ
ಕುಟ್ಟಿ ಕೆಡಹಿಸುವನವನು ಪ್ರಚಂಡ, ತಿಳುಹಿದೆನುದ್ದಂಡ
ಇಷ್ಟು ಪರಿಯು ಬಹು ಕಷ್ಟವೇತಕೆಲೊ
ಧಿಟ್ಟ ಪು ರಂ ದ ರ ವಿ ಠ್ಠ ಲ ಕೃಷ್ಣ || ೩ ||

## ೧೩೯. ಗೋಪಿಯ ವಿರಹಾಲಾಪ

ಮಾಯಾಮಾಳವ ರಾಗ ಅಟತಾಳ

ಕೊಂಬು ಕೊಳಲನೂದುತ ನಂಬಿಸಿ ಪೋದನೆಯವ್ವಾ
ಅಂಬುಜನಾಭಗೆ ಮನ ಹಂಬಲಿಸುತ್ತಿದೆಯವ್ವಾ || ಪ ||
ಮನೆ ಮನೆ ವಾರತೆಗೆ ಮನನೆಳಸದೆಯವ್ವಾ
ಮನಸಿಜ ಪಿತನೊಡನೆ ಮನ ತೆರಳಿತೆಯವ್ವಾ || ೧ ||
ನಡೆಯಲಾರೆವೆ ನಾವು ಒಂದಡಿಯಿಡೆ ವಶವಿಲ್ಲ ಇಂಥ
ಬೆಡಗುಗಾರನ ಕೂಡ ನುಡಿ ತೆರಳಿತೆಯವ್ವಾ || ೨ ||
ಮಾತು ಮನಸು ಬಾರದು ಕಾತರಿಸುತಿದೆ ಮನ
ಪ್ರೀತಿವಂತನ ಕಾಣದೆ ನಾ ತಾಳಲಾರೆನವ್ವಾ || ೩ ||
ನಿನ್ನೆ ಮೊದಲಾಗಿ ಎನ್ನ ಕಣ್ಣಿಗೆ ನಿದ್ರೆ ಬಾರದು
ಬನ್ನಣೆಗಾರನ ಕೂಡೆ ಹೆಣ್ಣು ಜನ್ಮ ಸಾಕೆಯವ್ವಾ || ೪ ||
ಗೋಪಿನಾಥನ ಕಾಣದೆ ತಾಪ ಘನವಾಯಿತವ್ವಾ
ಗೋಪಜನರ ಕೂಡಿದ ಶ್ರೀಪತಿ ರ ಂ ಗ ವಿ ಠ ಲ || ೫ ||

## ೧೪೦. ಶ್ರೀಕೃಷ್ಣನನ್ನು ತೋರು

ಆಹೇರಿ ರಾಗ ಅಟತಾಳ

ಶ್ರೀ ಕೃಷ್ಣರಾಯನ ತೋರಿಸೆ ಮಾತನಾಡಿಸೆ || ಪ ||
ಧೀರಾ ರಂಗನು ಬಾರದೆ ಇಹನೇನೆ
ಮಾರಾನಯ್ಯಗೆ ಮಾಡಿದ ತಪ್ಪು ಏನೆ
ವಾರಿಜಾಕ್ಷಿ ನೀವೊಂದು ಮಾತಾಡಿ ಬಾಕಿ
ನೀರಜಾಕ್ಷನ ನಿಮಿಷದಿ ಕರೆದು ತಾರೆ || ೧ ||

ಪದ:-ಗಂಧಕಸ್ತೂರಿ ತಾರೆಂದೆನೆ, ಪೂಸೆಂದೆನೆ, ಘಳಿಗೆ ತಾಳೆಂದೆನೆ
ಅಂದ ಮಾತಿಗೆ ತಾ ಮುನಿದನೆ, ಅರವಿಂದನೆ ಪೂರ್ಣೇಂದು ವದನೆ || ೧ ||

ಶ್ಲೋಕ:-ವೇಣೂನಾದದಿ ಮರುಳುಮಾಡಿದ ನಮ್ಮ
ಕಾಣಾದೆಂತಿಹೆ ಕಸ್ತೂರಿ ವೆಂಕಟನ್ನ
ಪ್ರಾಣನಾಥನು ಮುನಿದು ಮತ್ಯಾಕೆ ಬಾರ
ಜಾಣೇ ಹೋಗಿ ನೀ ವೇಣುನಾದನ್ನ ತಾರೆ || ೨ ||

ಪದ:-ವಾಸುದೇವ ಕರೆದು ತಾರೆ, ಇಲ್ಲಿಗೆ ನೀರೆ ಬೇಸರದೆ ನೀ ಸಾರೆ
ಭಾಷೆ ಕೊಟ್ಟಿದ್ದಾನೆ ರಂಗನು, ದಯಾಪಾಂಗನು
ಕರುಣಾಂತರಂಗನು || ೩ ||

ಶ್ಲೋಕ:-ಬಿಟ್ಟಾ ಕಂಗಳ ಭಾವ ನೀ ಕೇಳಿದೇನೆ
ಸಿಟ್ಟೋ ಮಾಡಿದ ಶ್ರೀಹರಿ ನಮ್ಮ ಮೇಲೆ
ಇಷ್ಟೂ ದಿವಸವು ಹ್ಯಾಗೆ ಬಿಟ್ಟಿಹೆ ನಮ್ಮ
ಕಷ್ಟ ಹೆಂಗಸು ಕೃಷ್ಣನ ಕರೆದು ತಾರೆ || ೪ ||

ಪದ:-ಬಿನ್ನಣ ಮಾತಲ್ಲ ಜಾಣೆ, ಕೇಳೆ ನಿನ್ನಾಣೆ ತನ್ನಳವಲ್ಲವೇನೆ
ಮುನ್ನಿನ ಹಂಬಲು ಮರೆತನೆ, ಜಗತ್ಕರ್ತನೆ ಎನ್ನವಗಲುವನೇನೆ || ೫ ||

ಶ್ಲೋಕ:-ಮಂಗಾಳಾಂಗನು ಹೀಂಗೆ ಮಾಡುವರೇನೆ
ಭಂಗಾಬಿಡುತಿಹೆನಂಗಜಾನಯ್ಯಾಗಾಗಿ
ರಂಗೂ ಮಾಣಿಕದುಂಗುರ ಕೊಡುವೆ ನಿನಗೆ
ತಂಗೀ ಹೋಗಿ ನೀರಂಗನ ಕರೆದು ತಾರೆ || ೬ ||

ಪದ:-ಮಲ್ಲಿಗೆ ಮಂಟಪದೊಳಗೆಲ್ಲ, ಇದ್ದೆವು ಎಲ್ಲ ನಲ್ಲನು ಬರಲಿಲ್ಲ
ಕಲ್ಲು ಮನಸು ಮಾಡಿದನಲ್ಲ, ನೋಡಿದ
ನಲ್ಲ ಹೀಗೆ ಮಾಡೋರೆ ಸಲ್ಲ || ೭ ||

ಶ್ಲೋಕ:-ಮಂದಾಯಾನೇ ಮೂಕುಂದನ ಮಂದಿರಕ್ಕೆ
ಇಂದೂ ಹೋಗಿ ನೀ ವಿನಯದಿಂದಲಿ ಸಾರೆ
ಒಂದು ಮಾತಿಲಿ ಹೊಳೆವು ತಿಳಿದು ಬಾರೆ
ವೃಂದಾವನದಿ ಗೋವಿಂದನ ಕರೆದು ತಾರೆ || ೮ ||

ಪದ:-ಧರೆಯೊಳು ಪು ರ ಂ ದ ರ ವಿ ಠ ಲ ನೆ, ಸರ್ವೇಶ್ವರನೆ
ದೊರೆ ಮುದ್ದು ವೆಂಕಟನೆ



೧೬-೧೪೧೧

ಹರುಷದಿಂದಲಿ ಬಂದು ನೆರೆವಂತೆ, ಮಾಡೆಲೆ
ಕಾಂತೆ ಕೇಳೆ ಸದ್ಗುಣವಂತೆ || ೯ ||

## ೧೪೧. ಕೃಷ್ಣನನ್ನು ಕರೆ ತಾ

ಮೋಹನ ರಾಗ ಝಂಪೆತಾಳ

ಯಾಕೆ ವೃಂದಾವನ ಯಾಕೆ ಗೋಕುಲ ನಮಗೆ
ಯಾಕೆ ಬಂದೆಲೊ ಉದ್ಧವಾ || ಪ ||
ಸಾಕು ಸ್ನೇಹದ ಮಾತನೇಕ ಮಹಿಮನು ತಾನು
ಆ ಕುಬುಜೆಯನು ಕೂಡಿದಾ, ಉದ್ಧವಾ || ಅ. ಪ. ||

ಬೆಲೆಯಿಲ್ಲದಯ್ಯನ ಬ್ಯಾಟ ನಗೆನುಡಿ ನೋಟ ಇಲ್ಲದಂತಾಯಿತಲ್ಲಾ
ತಲ್ಲಣಿಸಿ ತಾನೆ ತಾಪವು ಮೈಯೊಳು ಹೆಚ್ಚಿ ತನುವು ಪರವಶವಾಯಿತು ||
ಮಲ್ಲರನು ಮರ್ದಿಸಿದ ಮಾವಕಂಸನ ಕೊಂದ
ಮಾಧವನ ತಂದು ತೋರಿಸ್ಯೆ ಉದ್ಧವಾ || ೧ ||

ಅನುದಿನದೊಳೊಂದಿಸಲು ಅಧರಾಮೃತವನಿತ್ತು ಆನಂದದಿಂದ ಕೂಡಿದ
ಮನಸು ಮರ್ಮ ತಿಳಿದು ಮನಸಿಜ ಪಿತ ತಾನು
ಮಧುರ ಮಾತಿಲಿ ಮನ್ನಿಸಿ ||
ಕನಸಿನಲಿ ಕಂಡ ತೆರನಾಯಿತಾತನ ಬದುಕು
ಕರತಾರೊ ಇನ್ನೊಮ್ಮೆ ಉದ್ಧವಾ || ೨ ||

ಕರುಣನಿಧಿಯೆಂಬೋರು ಕಪಟನಾಟಕದರಸು ಸರಸ ವಿರಸವ ಮಾಡಿದ
ಪರ ವಾಸುದೇವನ ಪಾದಗತಿಯೇ ಸಾಕು ಪಾಪರಾಶಿಗಳ ಮುರಿಯೇ
ಪರಮಭಕ್ತರ ಪ್ರಿಯ ಪುರಂದರ ವಿಠಲನ
ಒಡಗೂಡಿಸ್ಯೆ ಉದ್ಧವಾ || ೩ ||

## ೧೪೨. ವಿರಹ ಸಹಿಸಲಾರೆ

ಕಾಂಬೋಧಿ ರಾಗ ಅಟತಾಳ

ವಿಧಿಗೆ ದಯವಿಲ್ಲವಕ್ಕ ಎನ್ನ ಮ್ಯಾಲೆ || ಪ ||
ಯದುಪತಿಯ ನಗಲಿಸಿದ ನೊಮ್ಮೆಲೆ || ಅ. ಪ. ||

ಎವೆಯು ಮರೆಯುವಮಾಡಿ ಹೋದ್ಯಾಕೊ ಎಲೊ ವಿಧಿಯೆ
ಸುಳಿಗುರುಳ ಕಡೆಗಣ್ಣ ನೋಟದಿಂದ ||
ಖವಖವಿಸಿ ನಗುವ ಮುದ್ದು ಮೊಗವ ನಾನು
ತವಕದಿಂದಲಿ ಮರಳಿ ನೋಡದ್ದೋದೆ || ೧ ||

ಹಕ್ಕಿಯ ಮೇಲುಳ್ಳ ದಯುವು ಎನ್ನ ಮೇಲಿ
ಇಕ್ಕದೇಕೆ ಹೋದೆ ಅಕ್ಕಟಕ್ಕಟ ||
ಪಕ್ಕ ಎರಡುಳ್ಳಡೆ ಮಧುರೆಗೆ ಪೋಗಿ
ಚಕ್ಕನೆ ಹರಿಯು ಕೂಡೆ ಇಪ್ಪೆನಲ್ಲದೆ || ೨ ||

ತಂಗಿ ನಮ್ಮೆದೆಯು ಕಲ್ಲಾಗಿ ಪೋದವಯ್ಯೊ
ಹೆಂಗೆ ಪೋದನು ಕೇಳು ಶ್ರೀಪತಿ ಎನ್ನಗಲಿ ||
ರಂಗ ವಿಠ್ಠಲನ್ನ ಅಂಗವ ಬಿಟ್ಟಂಥ
ಭಂಗ ಜೀವನ ಸುಡುಸುಡು ನುಡಿವ್ಯಾತಕೆ || ೩ ||

## ೧೪೩. ನಿನ್ನನ್ನು ಬಿಟ್ಟು ಹೋಗಲಾರೆವು

ಆನಂದಭೈರವಿ ರಾಗ ರೂಪತಾಳ

ನಿನ್ನನಗಲಿ ಪೋಗಲಾರೆವೊ, ನೀರಜಾಕ್ಷ
ನಿನ್ನ ಸೇರಿ ಸುಖಿಸಬಂದೆವೋ || ಪ ||
ಮನ್ನಿಸದೆ ಮಮತೆಯಿಂದ, ಭಿನ್ನನುಡಿಗಳಾಡಿ ನಮಗೆ
ಹಣ್ಣ ತೋರಿ ಕಾಳಕೂಟವನ್ನು ಕೊಡುವರೇನೊ ಕಷ್ಟ || ಅ. ಪ. ||
ಐದುವದಕೆ ಶಕ್ಯವಲ್ಲದ ಅಪ್ರಮೇಯ
ಆದಿಪುರುಷ ಅಮರ ಮಾನದಾ ||
ಶ್ರೀದ ನಮ್ಮ ಕೈಯ್ಯಬಿಡದೆ, ಆದರಿಸಬೇಕು ಪರವರ-
ರಾದರೇನು ನಿನ್ನ ಶರಣ-ರಾದಮೇಲೆ ಬಿಡುವದುಂಟೆ || ೧ ||

ಮೋಕ್ಷದಿಚ್ಛೆಯಿಂದ ನಿನ್ನನು, ಭಜಿಪ ಜನರ
ಪಕ್ಷವಹಿಸಿದಂತೆ ನಮ್ಮನೂ ||
ರಕ್ಷಿಸಾದೆ ಬಿಡುವರೆ ಕ-ಟಾಕ್ಷದಿಂದ ಈಕ್ಷಿಸಾದೆ
ಲಕ್ಷ್ಮಿದೇವಿ ನಿಮಗೆ ಬಹಳ-ಪೇಕ್ಷೆಯಿಂದ ಮೋಹಿಸಿದಳೆ || ೨ ||

ಅನಘ ನಿನ್ನ ನೋಡಿ ಮೋಹಿಸಿ, ಅಂತರಾತ್ಮ
ತನುಮನಸ್ಸು ನಿನಗೆ ಅರ್ಪಿಸಿ ||
ಜನನ ಮರಣದಿಂದ ಜನರ, ದಣಿಪರೇನೊ ಕಾಂತ ನಮ್ಮ
ಮನಸಿನಂತೆ ಒಲಿದು ಸಲಹೊ, ವನಜನಾಭ ವಿ ಜ ಯ ವಿ ಠ್ಠ ಲ || ೩ |

## ೧೪೪. ನಮ್ಮನ್ನು ಬಿಟ್ಟು ಹೋಗಬೇಡ

ತುಜಾವಂತಿ ರಾಗ ಆದಿತಾಳ

ಪೋಗುವದುಚಿತವೆ ಮಾಧವ ಮಧುರೆಗೆ ಬಾಗುವೆ ಎಲೋ ನಿನಗೆ || ಪ ||
ನಾಗಶಯನ ನಿನ್ನಗಲಿ ಒಂದು ಕ್ಷಣ
ಹ್ಯಾಗೆ ಸೈರಿಸುವೆವೊ ಮಾಗಧ ಮುರಾಂತಕನೆ || ಅ. ಪ. ||
ಅಕ್ರೂರನೆಂಬವನಿಲ್ಲಿಗ್ಯಾತಕೆ ಬಂದ ಚಕ್ರಧರಗೂ ನಮಗೂ
ಸತ್ಕ್ರೀಡೆಗಳನೆಲ್ಲ ಕೆಡಿಸಬೇಕೆನುತಲಿ ವಕ್ರನಂದದಲಿ ಬಂದ ||
ಚಕ್ರಧರನೆ ಪೋಗಬೇಡ ನೀ ಮಧುರೆಗೆ
ಅಕ್ಕರದಿಂದಲಿ ಅಭಯ ಕೊಡೆಲೊ ಕೃಷ್ಣ || ೧ ||
ಹುಟ್ಟಿಸಿದವರನು ಭ್ರಷ್ಟಮಾಡುವರೇನೆ ಕೃಷ್ಣರಾಯನೆ ನೀನು
ಎಷ್ಟು ಹೇಳಿದರೂ ಒಂದಿಷ್ಟು ದಯಾಬಾರದೆ ಬೆನ್ನಟ್ಟಿದಲ್ಲದೆ ಬಿಡೆವೊ ||
ಕೃಷ್ಣಯ್ಯ ನಿನ್ನೊಳು ಇಷ್ಟು ಗುಣಂಗಳ
ಭ್ರಷ್ಟವ ಮಾಡದೆ ಕೃಷ್ಣರಾಯನೆ ಬೇಗ || ೨ ||
ಮಾರನ ಬಾಧೆಗೆ ಅಗಲಿ ನೀ ಮಧುರಾ ಪುರಕಾಗಿ ಹೋಗುವರೇ
ಸೇರಿದವರನೆಲ್ಲ ಮೀರಿ ನೀ ಪೋದರೆ ಯಾರೇಲೊ ಗತಿ ನಮಗೆ ||
ವರದ ಶ್ರೀ ಪು ರಂ ದ ರ ವಿ ಠ ಲ ರಾಯನೆ
ಶರಗೊಡ್ಡಿ ಬೇಡುವೆವೋ ನಿಲು ನಿಲ್ಲೆಲೊ ಕೃಷ್ಣ || ೩ ||

## ೧೪೫. ಗೋಪಿಯರ ಭಾಗ್ಯ

ಕೇದಾರಗೌಳ ರಾಗ ಅಟತಾಳ

ಹಲವು ಪರಿಯಲಿ ಶ್ರೀಹರಿಯ ಸೇವಿಸುವ ಗೋ-
ಕುಲದ ತರುಣಿಯರ ಪುಣ್ಯವಿನ್ನೆಂತೊ || ಪ ||
ಮಲಿನವಳಿದು ಜಲವೆರೆದು ಗಂಧವಪೂಸಿ
ಕೆಳಗೆ ಕರ್ಪೂರ ತುಂಬಿ ಕಸ್ತೂರಿಯ ||

ಅಲತಿಗಸಾಧ್ಯ ಕೆಂಪುಳ್ಳ ಅಂಗಕ್ಕೆ ದೇವ
ಮಲಗುವ ಮನೆಯೆಂದು ಹಿತದಿ ಶೃಂಗರಿಪುದು || ೧ ||

ಜ್ಯಾಮುಡಿ ಚಾಮರ ಸುವಸನ ಮೆಲ್ಗಟ್ಟು
ಹಾರವೇ ಕನ್ನಡಿ ಸಾಲುಗಳು ||
ಊರು ಬಾಳೆಯು ಕಂಬ ಸೆರಗು ಪತಾಕೆಯು
ಮೀರಿದ ನಿಲಗಳೆ ಕುರುಜುಗಳಂತಿರೆ || ೨ ||

ಕರಪಲ್ಲವ ನರಬೀಗು ಸುಮುಗಳಾಗೆ ಬೆ-
ಮರು ಮರಂದ ಜಾಲದಂತಿರೆ ||
ವರ ಬಾಹುಲತೆಯಲಿ ರಾಮಚಂದ್ರ
ವರಿವಾ ಸಿಲುಕಿ ನೀ ಬಿಂಬಾಧರಧರಾವೆನುತ || ೩ ||

ಅತಿ ಅತಿ ಮೃದುವಾದ ತನುವೆನ್ನ ಸುಪ್ಪತ್ತಿಗೆ ಉ-
ನ್ನತವಾದ ಭುಜವೆರಡು ಒರಗೂ ||
ಹಿತವಾದ ಕುಚಯುಗ ಬಟು ತಿಮಿಗಳೂ ಅ-
ಚ್ಯುತಗೆ ತವ್ಮೊಡಲೆ ಶಯ್ಯದಂತೊಪ್ಪಿರೆ || ೪ ||

ಮೊಗವೆಂತೊ ತಿಂಗಳ ತಳಿಗೆಯೊಳಗೆ ನಯ-
ನಗಳೆಂಬೊ ಬಟುವಾರತಿ ನೇಹದಿ ||
ಸೊಗಸುವ ಕಂಗಳ ಪ್ರಭೆ ದೀಪವೆನಲು
ಖಗವಾಹನ ಕೃಷ್ಣಗೆ ಚಂಚಲನೋಟದಾರತಿಯೆತ್ತಿ || ೫ ||

## ೧೪೬. ಶೃಂಗಾರ ಬೇಡ

ಕಲ್ಯಾಣಿ ರಾಗ ಅಟತಾಳ

ಸದ್ದುಮಾಡಲು ಬ್ಯಾಡವೊ ನಿನ್ನ ಕಾಲಿಗೆ ಬಿದ್ದು ನಾ ಬೇಡಿಕೊಂಬೆ || ಪ ||
ನಿದ್ರೆಗೈಯ್ಯುವರೆಲ್ಲಾ ಎದ್ದರೆ ನೀನು ಬಂ-
ದಿದ್ದದ್ದು ಕಂಡರೇನೆಂಬುವರೋ ರಂಗಾ || ಅ. ಪ. ||
ಬಳೆ ಘಲುಕೆನ್ನದೇನೋ ಕೈಯ್ಯ ಹಿಡಿದು ಎಳೆಯದಿರೋ ಸುಮ್ಮನೆ ||
ಮೊಲೆಗಳ ಮೇಲಿನ ಸೆರಗ ಸೆಳೆಯಲು ಕೊ-
ರಳ ಪದಕಗಳು ಧ್ವನಿಯ ಗೈಯ್ಯುವವೊ ರಂಗಾ || ೧ ||

ನೆರಿಗೆ ಕೈಕೊಡದೀರೊ ಕಾಂಚಿಯ ದಾಮ ಉಡಿಗಂಟು ಧ್ವನಿಗೈಯ್ಯದೆ ||
ಕರದುಟಿಯನು ಸವಿದು ಚಪ್ಪರಿಸಲು |
ಥರವಲ್ಲ ಗಂಡ ಮತ್ಸರವ- ತಾಳುವನಲ್ಲಾ || ೨ ||
ನಾಡ ಮಾತುಗಳ್ಯಾಕೋ ಸಂಗೀತವ ಪಾಡುವ ಸಮಯವೇನೋ ||
ಗಾಡಿಗಾರ ಶ್ರೀ ಪು ರಂ ದ ರ ವಿ ಠ ಲ ನ್ನ
ಪಾಡಿ ಪಂಥಗಳೊಡಗೂಡುವ ಸಮಯಕ್ಕೆ || ೩ ||

## ೧೪೭. ಈಗೆಯೋ ಬಾ

ಸೌರಾಷ್ಟ್ರ ರಾಗ ಆದಿತಾಳ

ಇದೇ ಸಮಯ ರಂಗ ಬಾರೆಲೊ ಇದೇ ಸಮಯ ಕೃಷ್ಣ ಬಾರೆಲೊ || ಪ ||
ಅತ್ತಿಗಿ ಲಕ್ಷಬತ್ತಿಶೀಲಳೋ | ಅಷ್ಟು ಆಗದೆ ಅವಳೇಳೊ ||
ಅತ್ತೆ ಪುರಾಣದಿ ಲೋಲಳೋ ಸರಿ-
ಹೊತ್ತಿನ ವೇಳೆಗೆ ಬರುವಳೊ || ೧ ||
ಮಾವ ಎನ್ನಲಿ ಅವಿಶ್ವಾಸಿಯೋ ಮ-
ದುವೆಯಾದ ಗಂಡ ಉದಾಸಿಯೋ ||
ಭಾವನು ಎನ್ನ ಸೇರ ಹೇಸಿಯೊ ನೀ
ನೀ ವ್ಯಾಳ್ಯಾಕೆ ಬಂದರೆ ವಾಸಿಯೋ || ೨ ||
ತಂದೆ ತಾಯಿ ಆಸೆ ಮಾಡೆನೊ ಎನ್ನ ಕಂದನ ಮೇಲೆ ಮನಸೀಡೆನೊ ||
ಮಂದರಧರ ಪು ರಂ ದ ರ ವಿ ಠ ಲ ನೀ
ಬಂದರೆ ಚರಣಸೇವೆ ಮಾಳ್ಪೆನೋ || ೩ ||

## ೧೪೮. ನನ್ನ ಮನದಲ್ಲಿರು

ಕೇದಾರಗೌಳಿ ರಾಗ ಅಟತಾಳ

ಎಂದೆಂದೆನ್ನ ಮನದಿಂದ ಅಗಲದಿರೊ || ಪ ||
ನಂದನಂದನನೆ ಆನಂದಮೂರುತಿಯೋ || ಅ. ಪ. ||
ಬಹುಕಾಲ ನಿನ್ನ ಶ್ರವಣವೆಂಬ ಪೊನ್ನೋಲೆಯ
ಬಹುಮಾನದಿಂದ ಎನ್ನ ಕಿವಿಯನಿಟ್ಟು ||
ಮಹಿತ ಮಂಗಳಸೂತ್ರವೆಂಬ ದಾಸ್ಯವನಿತ್ತು
ಮಹದಾನಂದದಲಿ ಎನಗೆ ಕಟ್ಟಿದ್ಯಾಗಿ || ೧ ||

ಸುಲಲಿತ ಸೌವರಣ ಮೊದಲಾದ ಭೂಷಣವಿತ್ತು
ಬೆಳೆಸಿದೆ ಬನವಾಸ ಖೇದದಿಂದ ನೀನು ||
ಬೆಲೆಯಿಲ್ಲದ ಸುಜ್ಞಾನವೆಂಬ ನಿಧಿಯೋಳಿಟ್ಟು
ಜಲಜಾಕ್ಷ ಒಲಿಸೆನ್ನ ಸೆರಗಪಿಡಿದೆಳೆದೆಯಾಗಿ || ೨ ||

ಎಲ್ಲಿ ನೀ ನೆಲೆಸಿದಲ್ಲೆನಗೇನು ಇನಿತಿಲ್ಲ
ಬಲ್ಲೆ ನೀ ವಿಶ್ವವ್ಯಾಪಕನೆಂಬುದನು ||
ಸಲ್ಲದು ಮುನಿಸೆನ್ನೊಳು ಕೃಷ್ಣ ನಿನಗೆ ಇಂ-
ತಲ್ಲದಿದ್ದರೆ ಕರಹಿಡಿದೆಳೆದೆಯಾಗಿ || ೩ ||

---

# ೧೫. ಸಮರ್ಪಣಭಾವ

ಶ್ರವಣಾದಿ ನವವಿಧಭಕ್ತಿಗಳಲ್ಲಿ ಆತ್ಮನಿವೇದನವೆಂಬುದು ಕೊನೆಯದು, ಎಲ್ಲಕ್ಕು ಹೆಚ್ಚಿನದು. ಆತ್ಮನಿವೇದನವೇ ಸಮರ್ಪಣ ಭಾವವೆನಿಸುವದು. ಈ ಭಾವದಲ್ಲಿ ಭಕ್ತನು ತನ್ನ ಸರ್ವಸ್ವವನ್ನು ಪರಮಾತ್ಮನಿಗೆ ಅರ್ಪಿಸಿ ಬಿಡುವನು. ಮಿಕ್ಕ ಭಾವಗಳಲ್ಲಿ ಭಕ್ತನು ತನ್ನ ಅಂತಃಕರಣದಲ್ಲಿ ಉದಯ ಹೊಂದುವ ಯಾವದೊಂದು ವಿಶಿಷ್ಟಭಾವವನ್ನು ಅವಲಂಬಿಸಿ ತನ್ನ ಪರಮಾತ್ಮ ಪ್ರೇಮವನ್ನು ವ್ಯಕ್ತಪಡಿಸುವನು, ಪರಮಾತ್ಮನೊಡನೆ ಯಾವದೊಂದು ವಿಶಿಷ್ಟ ಸಂಬಂಧವನ್ನು ಜೋಡಿಸಿ ತದ್ವಾರಾ ಅವನನ್ನು ಆರಾಧಿಸುವನು. ಆದರೆ ಸಮರ್ಪಣಭಾವದಲ್ಲಿ ತನ್ನ ಸರ್ವಸ್ವವನ್ನು ಪರಮಾತ್ಮನಲ್ಲಿ ಅರ್ಪಿಸಿ, ತನ್ನ ವ್ಯಕ್ತಿತ್ವವನ್ನು ನಷ್ಟಪಡಿಸಿ, ತಾನು ಕೇವಲ ನಿಮಿತ್ತಮಾತ್ರನಾಗಿ ಇರಲು ಹವಣಿಸುವನು.

ಯಥಾರ್ಥವಾಗಿ ಎಲ್ಲವನ್ನು ಮಾಡುವವನು ಮಾಡಿಸುವವನು ಪರಮಾತ್ಮನೇ. ಮನುಷ್ಯನು ಕೇವಲ ಅಜ್ಞಾನದಿಂದ ಅಹಂಕಾರಮೂಢನಾಗಿ 'ನಾನು' ಎಂಬದನ್ನು ನಿರ್ಮಿಸಿ ತದವಲಂಬನದಿಂದ ಜೀವಿಸಲು ಹವಣಿಸುವನು ಹಾಗೂ ಅನೇಕ ದುಃಖಪರಂಪರೆಗೆ ಒಳಗಾಗುವನು. ಈ 'ನಾನು' ಎಂಬುದನ್ನು ಅವನು ಎಷ್ಟರಮಟ್ಟಿಗೆ ನಷ್ಟಪಡಿಸಿ ಅದರ ಸ್ಥಾನದಲ್ಲಿ ಪರಮಾತ್ಮನನ್ನು ಸ್ಥಾನಾಪನ್ನಮಾಡುವನೋ ಅಷ್ಟರಮಟ್ಟಿಗೆ ಅವನು ಅರ್ಪಣಭಾವದಲ್ಲಿ ಮುಂದರಿಯುವನು ಹಾಗೂ ಆ ಮಟ್ಟಿಗೆ ಅವನು ಮುಕ್ತನಾಗುವನು.

ಈ ಭಾವವು, ಸರ್ವಸಮರ್ಪಣಭಾವವು ನೆಲೆಗೊಂಡಿತೆಂದರೆ ಭಕ್ತನು ಸಂಪೂರ್ಣ ರಾಗಾತ್ಮಿಕಾಭಕ್ತಿಯಲ್ಲಿ ನಿಮಗ್ನನಾಗುವನು. ಆಬಳಿಕ ಅವನಿಗೆ ತನ್ನದೆಂಬುದು ಏನೂ ಉಳಿಯದು. ಅವನ ಚಲನವಲನಾದಿ ಸಾಮಾನ್ಯ ಕ್ರಿಯೆಗಳು ಕೂಡ ಪರಮಾತ್ಮನನ್ನೆ ಕುರಿತು ನಡೆಯುವವು. ಸರ್ವತೋಪರಿ,

ಸರ್ವಭಾವದಿಂದ, ಸರ್ವಕಾಲದಲ್ಲಿ ಈ ಭಕ್ತನು ಪರಮಾತ್ಮನಲ್ಲಿ ಲೀನನಿರುವನು, ಭಕ್ತಿರಸದಲ್ಲಿ ಮಗ್ನನಿರುವನು. ಅವನಿಗೆ ತನ್ನ ಇಲ್ಲವೆ ಜಗತ್ತಿನ ಪರಿವೆ ಇರಲರಿಯದು. ಸರ್ವರಲ್ಲಿ ಈಶ್ವರಾಂಶವನ್ನು ಕಂಡು ಅವನು ವರ್ತಿಸುವನು. ಈ ಭಾವದಲ್ಲಿರುವವನು ಯಾವಾಗಲೂ ಒಂದು ಬಗೆಯ ಉನ್ಮನಿಯವಸ್ಥೆಯಲ್ಲಿರುವನು. ಈ ಸ್ಥಿತಿಗೆ ಈಶ್ವರೀ ಪ್ರೇಮೋನ್ಮಾದ ಸ್ಥಿತಿ ಎಂದು ಅನ್ನಬಹುದು. 'ವಾಸುದೇವಃ ಸರ್ವಂ' ಎಂಬುದು ಅವನ ಬ್ರೀದ ವಾಕ್ಯವು. ಅವನು ಏನು ಮಾಡಿದರೂ ಅದನ್ನು ಪೂಜೆ ಎಂಬ ಭಾವನೆಯಿಂದ ಪರಮಾತ್ಮನಿಗೆ ಅರ್ಪಿಸುತ್ತಲೆ ಇರುವನು. ಆದುದರಿಂದ ಸರ್ವ ಕ್ರಿಯೆ ಪ್ರತಿಕ್ರಿಯೆಗಳಲ್ಲಿಯೂ ಪರಮಾತ್ಮಮಯವಾಗಿ ಹೋಗುವವು.

## ೧೪೯. ನನ್ನ ಜೀವನಕ್ಕೆ ನೀನೇ ಹೊಣೆಗಾರ

ಮುಖಾರಿ ರಾಗ ಝಾಪುತಾಳ

ನನ್ನಿಂದೆ ನಾನೇ ಜನಿಸಿ ಬಂದೆನೆ ದೇವಾ || ಪ ||
ನಿನ್ನ ಪ್ರೇರಣೆಯಿಂದ ನಡೆದು ನೋಡಿದ ಮೇಲೆ
ನಿನ್ನದೆ ತಪ್ಪೋ ಎನ್ನದು ತಪ್ಪೋ ಗೋವಿಂದಾ || ಅ. ಪ. ||
ಜನನಿಯ ಜಠರದಿ ನವಮಾಸವು
ಘನವಾಗಿ ನೀ ಪೋಷಿಸುತಲಿರೆನ್ನ ||
ಜನಿಸಲಾರೆನೆ ಜನಿಸೆಂದಿಕ್ಕಳದಿಂದ
ವನಜಾಕ್ಷ ನೂಕಿದವನು ನೀನಲ್ಲವೆ ಕೃಷ್ಣಾ || ೧ ||
ಎಲುಗಳೆಲ್ಲವು ಜತೆಗೂಡಿ ನರಗಳ
ಬಲಿದು ಚರ್ಮವ ಪೊದಿಸಿ ದೇಹದೊಳ್ ||
ಮಲಮೂತ್ರದೊಳು ನೆಲೆಗೊಳಿಸಿ ಹೃದಯ
ಸ್ಥಳದೊಳು ನಿಂದು ಚೈತನ್ಯ ಪೊರೆವರು ಮತ್ಯಾರೋ || ೨ ||
ಜನಿಸಿದಾರಭ್ಯ ಇಂದಿನ ಪರಿಯಂತರ | ಘನದಿ ನೀ ಪಾಲಿಸುತಿರೆ ಎನ್ನನು ||
ಅನುಮಾನಕ್ಕೆ ಬೋಧಿಸುತಿರೆ ನಾನು
ಅನುಭವಿಸಿದೆನೊ ಜೀವನು ನಿನ್ನನು ಬಿಡೆ || ೩ ||
ಅಂಧನ ಕೈಯಲ್ಲಿ ಕೋಲಿತ್ತು ಕರೆದೊಯ್ದು
ಮುಂದಾಳು ತೆಗ್ಗಿನಲಿ ಕೆಡುಹಲು ||



೧೬-೧೪೧೧

ಅಂಧನ ತಪ್ಪೊ ಮುಂದಾಳಿನ ತಪ್ಪೊ
ಹಿಂದಾಡಬೇಡ ಎನ್ನಲಿ ತಪ್ಪಿಲ್ಲವೊ ರಂಗಾ || ೪ ||
ಕಂದನ ತಾಯಿಯು ಆಡಿಸುತಿರುವಾಗ
ಕಂದ ಬಾವಿಯೊಳ್ ಅದೇ ನೋಡಲು ||
ಬಂದು ಬೇಗದಿಂದ ಎತ್ತದಿದ್ದವ್ಯಾಲೆ
ಕಂದನ ತಪ್ಪೊ ತಾಯಿಯು ತಪ್ಪೊ ಗೋವಿಂದಾ || ೫ ||
ಭಾರ ನಿನ್ನದೊ ದೂರು ನಿನ್ನದೊ ರಂಗಾ
ನಾರಿ ಮಕ್ಕಳು ಮನೆ ನಿನ್ನದಯ್ಯ ||
ಕ್ಷೀರದೊಳಗೆ ಎದ್ದು ನೀರಿನೊಳಗೆ ಎದ್ದು
ಹೇರನೊಪ್ಪಿಸಿದ ಮೇಲೆ ಸುಂಕವೇ ಪರಮಾತ್ಮಾ || ೬ ||
ನ್ಯಾಯಮಾಡಿದರು ದುಡುಕು ನಿನ್ನದೊ ರಂಗ ಅ-
ನ್ಯಾಯವಾದರೆ ಯಾರು ಹೇಳುವರೊ ||
ಕಾಯಜ ಜನಕ ಕ ನ ಕಾ ದಿ ಕೇ ಶ ವ ರಾ ಯ ನೀ
ಕಾಯಯ್ಯ ತಪ್ಪುಗಳೆಣಿಸದೆ ದೇವಾ || ೭ ||

## ೧೫೦. ಎಲ್ಲವೂ ನಿನ್ನಾಧೀನ

ದೀಕ್ಷಾ ಸುಳಾದಿ ರಾಗ ಧ್ರುವತಾಳ

ಹರಿಯೆ ನಿನ್ನಾಧೀನ ಜ್ಞಾನೇಂದ್ರಿಯಂಗಳು
ಹರಿಯೆ ನಿನ್ನಾಧೀನ ಕರ್ಮೇಂದ್ರಿಯಂಗಳು
ಹರಿಯೆ ನಿನ್ನಾಧೀನ ಪಂಚ ಭೂತಾತ್ಮಗಳು
ಹರಿಯೆ ನಿನ್ನಾಧೀನ ಮನ ಚಿತ್ತಾದಿಗಳು
ಹರಿಯೆ ನಿನ್ನಾಧೀನ ಸಕಲ ಚೇತನವು
ಹರಿಯೆ ನಿನ್ನಾಧೀನ ಸಕಲ ಚೇಷ್ಟೆಗಳು
ಹರಿಯೆ ನೀ ನೇಮಿಸಿದ ಕಾರಣ ಎನ್ನ ಶ-
ರೀರದೊಳಗೆ ಭರಿತವಾಗಿದೆ ಹೊರಗಿದ್ದ
ಸರಕು ಬೆಲೆಮಾಡಿದಂತೆ ಈ
ಸರಕು ಧನವನಿತ್ತು ತುಂಬಲಿಲ್ಲ ಎನ್ನ
ಮರೆದು ಬಿಡುವದಲ್ಲ ಬಿರುದುಳ್ಳ ದೈವವೆ

ಕುಣಿಸಿದರೆ ಕುಣಿವೆ ನಗಿಸಿದರೆ ನಗುವೆ
ಮಣಿಸಿದರೆ ಮಣಿವೆ ಅಳಿಸಿದರೆ ಅಳುವೆ
ಉಣಿಸಿದರೆ ಉಣುವೆ ಉಡಿಸಿದರೆ ಉಡುವೆ
ಮನುಜವೇಷನೆ ಸಿರಿ ವಿ ಜ ಯ ವಿ ಠ್ಠ ಲ ನೀನೆ
ದಣಿಸಿದರೆ ದಣಿವೆ ನೆನವಿತ್ತರೆ ನೆನೆವೆ

## ೧೫೧. ಎಲ್ಲ ಕರ್ಮಗಳು ನಿನ್ನ ಸೇವೆ

ಗೌಳಿ ಪಂತುರಾಗ ತ್ರಿಪುಟತಾಳ

ನಾ ನಿನಗೇನು ಬೇಡುವದಿಲ್ಲ, ಎನ್ನ
ಹೃದಯಮಂಟಪದೊಳು ನಿಂದಿರೋ ಕೃಷ್ಣ
ಶಿರ ನಿನ್ನ ಚರಣದಲ್ಲೆರಗಲಿ, ಎನ್ನ
ಚಕ್ಷುಗಳು ನಿನ್ನ ನೋಡಲಿ
ಕರ್ಣಗೀತಂಗಳ ಕೇಳಲಿ, ಎನ್ನ
ನಾಸಿಕ ನಿರ್ಮಾಲ್ಯ ಘ್ರಾಣಿಸಲಿ ಕೃಷ್ಣ || ೧ ||
ನಾಲಿಗೆ ನಿನ್ನ ಕೊಂಡಾಡಲಿ, ಎನ್ನ
ಕರಗಳೆರಡು ನಿನಗೆ ಮುಗಿಯಲಿ
ಪಾದ ತೀರ್ಥಯಾತ್ರೆ ಮಾಡಲಿ ನಿನ್ನ
ಧ್ಯಾನವೆನಗೆ ಒಂದು ಕೊಡು ಕಂಡ್ಯ ಹರಿಯೆ || ೨ ||
ಬುದ್ಧಿ ನಿನ್ನೊಳು ಕುಣಿದಾಡಲಿ, ಎನ್ನ
ಚಿತ್ತ ನಿನ್ನಲಿ ನಲಿದಾಡಲಿ
ಭಕ್ತಜನರ ಸಂಗ ದೊರಕಲಿ ರಂಗ
ವಿಠ್ಠಲ ನಿನ್ನಯ ದಯವಾಗಲಿ ಹರಿಯೆ || ೩ ||

## ೧೫೨. ಇಟ್ಟ ಹಾಗೆ ಇರುವೆ

ಆನಂದ್ರ ಭೈರವಿ ಅಟತಾಳ

ಇಟ್ಹಾಂಗೆ ಇರುವೆನು ಹರಿಯೇ; ಎನ್ನ ಧೊರೆಯೆ || ಪ ||
ಶ್ರೇಷ್ಠರೊಂದಿತ ಪಾದ ಪದುಮ ಶ್ರೀಹರಿಯೇ || ಅ. ಪ. ||

ಸಣ್ಣ ಶಾಲ್ಯೋದನ ಬೆಣ್ಣೆ ಕಾಸಿದ ತುಪ್ಪ
ಚಿನ್ನದ ಹರಿವಾಣದಲಿ ಭೋಜನ ||
ಘನ್ನ ಮಹಿಮ ನಿನ್ನ ಕರುಣೆ ತಪ್ಪಲು ಕ-
ದನ್ನಕೆ ಬಾಯ್ ಬಿಡಿಸುವಿಯಲ್ಲೊ ಸ್ವಾಮಿ || ೧ ||

ಕೆಂಪಿಲಿ ಪೊಳೆವ ಪೀತಾಂಬರ ಉಡಿಸುವಿ
ಸೊಂಪಿನಂಚಿನ ಶಾಲು ಹೊದಿಸುವಯ್ಯೋ ||
ಕಪಿಲ ಹರೇ ನಿನ್ನ ಕೃಪೆಯು ತಪ್ಪಿದ ಮೇಲೆ
ಹೇ ಪಿನಾಕಿ ವಂದ್ಯ ಕೌಪೀನ ದೊರೆಯದೊ || ೨ ||

ಚಂದ್ರಶಾಲೆ ಚಂದ್ರ ಕಿರಣದಿಂದೊಪ್ಪುವ
ಚಂದದ ಮಂಚದೊಳ್ಮಲಗಿಸುವಿ ||
ಮಂದರೋದ್ಧರ ನಿನ್ನ ಮಮತೆ ತಪ್ಪಿದ ಮೇಲೆ ಧರ್ಮ-
ಮಂದಿರದೊಳು ತೋಳ್ ತಲೆದಿಂಬು ಮಾಡಿಸುವಿ || ೩ ||

ನರಯಾನದೊಳು ಕ್ಷಣ ನರವರನೆನಿಸುವಿ
ವರಛತ್ರ ಚಾಮರ ಹಾಕಿಸುವಿ ||
ಕರುಣಾನಿಧೇ ನಿನ್ನ ಕರುಣೆ ತಪ್ಪಿದ ಮೇಲೆ
ಚರಣಭರಣ ಪಾದರಕ್ಷೆಯು ದೊರೆಯದೊ || ೪ ||

ಗಂಗಾಜನಕ ಪಾಂಡುರಂಗ ನಿನ್ನಯ ಭಕುತರ
ಸಂಗವಿರಲಿ ದುಷ್ಟಸಂಗ ಬೇಡ ||
ಅಂಗನೆಯರ ಕೂಡನಂಗ ಬಾಣಕೆ ಸಿಲುಕಿ
ಭಂಗಬಟ್ಟೆನೊ ಕಾಯೊ ರಂಗವಿಠ್ಠಲ ರಾಯಾ || ೫ ||

## ೧೫೩. ನಿನ್ನ ಸಂಕಲ್ಪದಂತೆ ಮಾಡು

ಕಾಂಬೋಧಿ ರಾಗ ಝಂಪೆತಾಳ

ನಿನ್ನ ಸಂಕಲ್ಪಾನುಸಾರ ಮಾಡೊ
ಎನ್ನ ಸಾಕುವ ಧೊರೆಯೆ ಮಾನ್ಯ ಮಾನದನೇ || ಪ ||
ಪಾತ್ರನೆಂದೆನಿಸೊ ಪಾಪಾತ್ಮನೆಂದೆನಿಸೊ ಇವ
ಶ್ರೋತ್ರಿಯನೆಂದೆನಿಸೊ ಬಲು ಕುಂಠನೆನಿಸೊ ||

ಪುತ್ರಮಿತ್ರಾದ್ಯರಿಂ ಬಯಸಿ ಪೂಜೆಯ ಗೈಸೊ
ಕರ್ತೃ ನೀ ಜಗಕೆ ಸರ್ವತ್ರ ವ್ಯಾಪಕ ದೇವ || ೧ ||

ಜನರೊಳಗೆ ನೀನಿದ್ದು ಜನ್ಮಜನ್ಮಗಳಲಿ
ಗುಣಕಾಲ ಕರ್ಮ ಸ್ವಭಾವಂಗಳ ||
ಅನುಸರಿಸಿ ಪುಣ್ಯಪಾಪಂಗಳ ಮಾಡಿಸಿ ಫಲಗಳ
ಉಣಿಸಿ ಮುಕ್ತರ ಮಾಡಿ ಪೊರವೆ ಕರುಣಾಳೋ || ೨ ||

ಯಾತಕೆಮ್ಮನು ಇನಿತು ದೂರಕನ ಮಾಡುವಿ ಧ-
ರಾತಳದೊಳನುದಿನದಿ ಮಾಯಾಪತೇ ||
ಭೀತಿಗೊಂಬುವನಲ್ಲ ಭಯನಿವಾರಣ ಜ ಗ
ನ್ನಾ ಥ ವಿ ಠ್ಠ ಲ ಜಯಪ್ರದನೆ ಜಗದೀಶಾ || ೩ ||

## ೧೫೪. ನನಗೇನು ಕಡಿಮೆ

ಮುಖಾರಿ ರಾಗ ಝಂಪೆತಾಳ

ನಾನ್ಯಾಕೆ ಬಡವನು ನಾನ್ಯಾಕೆ ಪರದೇಶಿ
ಶ್ರೀನಿಧೇ ಹರಿ ಎನಗೆ ನೀನಿರುವ ತನಕ || ಪ ||
ಪುಟ್ಟಿಸಿದ ತಾಯ್ತಂದೆ ಇಷ್ಟ ಮಿತ್ರನು ನೀನೇ
ಅಷ್ಟ ಬಂಧು ಸರ್ವ ಬಳಗ ನೀನೇ ||
ಪೆಟ್ಟಿಗೆಯೊಳಗಿನ ಅಷ್ಟಾಭರಣವು ನೀನೆ
ಶ್ರೇಷ್ಠ ಮೂರುತಿ ಕೃಷ್ಣ ನೀನಿರುವ ತನಕ || ೧ ||
ಒಡಹುಟ್ಟಿದವ ನೀನೆ ಒಡಲಿಗ್ಹಾಕುವ ನೀನೆ
ಉಡಲು ಹೊದಿಯಲು ವಸ್ತ್ರ ಕೊಡುವವ ನೀನೇ ||
ಮಡದಿ ಮಕ್ಕಳನೆಲ್ಲ ಕಡೆಹಾಯ್ಸುವವ ನೀನೆ
ಬಿಡದೆ ಸಲಹುವ ಒಡೆಯ ನೀನಿರುವ ತನಕ || ೨ ||

ವಿದ್ಯೆ ಹೇಳುವ ನೀನೆ ಬುದ್ಧಿ ಕಲಿಸುವ ನೀನೆ
ಉದ್ಧಾರಕರ್ತ ಮಮ ಸ್ವಾಮಿ ನೀನೇ ||
ಮುದ್ದು ಸಿರಿ ಪು ರ ಂ ದ ರ ವಿ ಠ ಲ ನಿನ್ನಡಿ ಮೇಲೆ
ಬಿದ್ದುಕೊಂಡಿರುವ ಎನಗೆ ಯಾತರ ಭಯವು || ೩ ||

## ೧೫೫. ಎಲ್ಲವೂ ನಿನ್ನ ಪೂಜೆ

ಕಾಂಬೋಧಿ ರಾಗ ಅಟತಾಳ

ಎನ್ನ ಬಿಂಬಮೂರುತಿಯ ಪೂಜಿಪೆನು ನಾನು || ಪ ||
ಮನಮುಟ್ಟಿ ಅನುದಿನ ಮರೆಯದೆ ಮರೆಯದೆ || ಅ. ಪ. ||
ಗಾತ್ರವೇ ಮಂದಿರ ಹೃದಯವೇ ಮಂಟಪ
ನೇತ್ರವೇ ಮಹದೀಪ ಹಸ್ತಚಾಮರವು |
ಯಾತ್ರೆಯೇ ಪ್ರದಕ್ಷಿಣೆ ಶಯನವೇ ನಮಸ್ಕಾರ
ಸ್ತೋತ್ರ ಮಾತುಗಳೆಲ್ಲ ಮಂತ್ರಗಳೂ || ೧ ||
ನುಡಿವ ಶಬ್ದಗಳೆಲ್ಲ ಪುಷ್ಪಗಳಾದವು | ನಡೆವುದೆಲ್ಲವು ಬಹು ನಟನೆಗಳೊ ||
ಉಡುವ ಹೊದ್ದಿಕೆಯೆಲ್ಲ ಚಿತ್ರವಾದ ವಸ್ತ್ರ
ತೊಡುವ ಭೂಷಣಗಳು ಶ್ರೀಹರಿಗೆ ಆಭರಣ || ೨ ||
ಧರಿಸಿದ ಶ್ರೀಗಂಧ ಹೃದಯಕ್ಕೆ ಗಂಧವು
ಶಿರದೊಳೇ ಮುಡಿವ ಪುಷ್ಪವೆ ಮಾಲಿಕೆ ||
ಸ್ಥಿರವಾಗಿ ನೇಹದಿಂ ಕೂಡಿದ ಬುದ್ಧಿಯು
ಸ್ಮರಿಸಿ ಉಂಡನ್ನವೆ ಹರಿನೈವೇದ್ಯವೂ || ೩ ||
ಎನ್ನ ಸ್ವರೂಪವೆಂಬ ರನ್ನದ ಕನ್ನಡಿ
ಎನ್ನ ಮನೋವೃತ್ತಿಯೆಂಬುದೆ ಕ್ಷೇತ್ರವು ||
ಇನ್ನು ನುಡಿವಾ ಹರಿನಾಮಾಮೃತವೆ ತೀರ್ಥ
ಎನ್ನ ಮಂದಿರ ಮಧ್ಯ ಮಹಸಿಂಹಾಸನಾ || ೪ ||
ಅನ್ಯ ಸಾಧನವೇಕೆ ಅನ್ಯ ಪ್ರತಿಮೆ ಏಕೆ
ಅನ್ಯವಾದ ಮಂತ್ರ ತಂತ್ರಗಳೇಕೆ ||
ಎನ್ನಲ್ಲಿ ಭರಿತ ಸಾಧನಗಳು ಇರಲಾಗಿ
ಚನ್ನಾಗಿ ಶ್ರೀ ಕೃ ಷ್ಣ ಸ್ವಾ ಮಿ ಯ ಪೂಜಿಪೆ || ೫ ||

## ೧೫೬. ಅರ್ಪಿಸದಿದ್ದರೆ ಎಲ್ಲ ವ್ಯರ್ಥ

ಭಾಮಿನಿಷಟ್ಪದಿ

ಸ್ನಾನ ಜಪ ದೇವಾರ್ಚನೆಯು ವ್ಯಾ-
ಖ್ಯಾನ ಭಾರತಮುಖ ಮಹೋಪ ಪು

## ಹರಿಭಕ್ತಿ ಸುಧೆ

ರಾಣ ಕಥೆಗಳ ಪೇಳಿ ಕೇಳಿದರೇನು ದಿನದಿನದಿ
ಜ್ಞಾನ ಕರ್ಮೇಂದ್ರಿಯಗಳಿಂದೇ
ನೇನು ಮಾಡುವ ಕರ್ಮಗಳ ಲ-
ಕ್ಷ್ಮೀ ನಿ ವಾ ಸ ನ ಪೂಜೆಯೆಂದರ್ಪಿಸಿದ ಮಾನವನು ||

(ಹರಿಕಥಾಮೃತಸಾರ)

### ೧೫೭. ನಿನ್ನವರು ಅತೀತರು

ಮುಖಾರಿ ರಾಗ ಆದಿತಾಳ

ವಿಧಿನಿಷೇಧ ನಿನ್ನವರಿಗೆಂತೊ ಹರಿಯೇ || ಪ ||
ವಿಧಿ ನಿನ್ನ ಸ್ಮರಣೆ ನಿಷೇಧ ವಿಸ್ಮೃತಿಯೆಂಬ
ವಿಧವನೊಂದನು ಬಲ್ಲರಲ್ಲದೇ ಮತ್ತೊಂದು || ಅ. ಪ. ||
ಮಿಂದದ್ದೆ ಗಂಗಾದಿ ಪುಣ್ಯತೀರ್ಥಂಗಳು
ಬಂದದ್ದೆ ಪುಣ್ಯದ ಕಾಲ ಸಜ್ಜನರು ||
ನಿಂದದ್ದೆ ಗಯಾ ವಾರಣಾಸೀ ಕುರುಕ್ಷೇತ್ರ
ಸಂದೇಹವಿಲ್ಲ ಮದ್ದಾನೆ ಪೋದುದೇ ಬೀದಿ || ೧ ||
ನಡೆದದ್ದು ಎಲ್ಲವು ಲಕ್ಷಪ್ರದಕ್ಷಿಣೆ
ನುಡಿದದ್ದು ಎಲ್ಲವು ಗಾಯತ್ರಿಮಂತ್ರ
ಕುಡಿವೊದೆಲ್ಲವು ಯಜ್ಞಾದಿ ಹೋಮದ್ರವ್ಯ
(ಕಡು ವಿಷಯಸುಖವೆಲ್ಲ ಇಂದ್ರಿಯಾಗ್ನಿಲಿ ಹೋಮ)
ದೃಢಭಕ್ತರೇನ ಮಾಡಿದರದೇ ಮರಿಯಾದೆ || ೨ ||
ಕಂಡಕಂಡದ್ದೆಲ್ಲ ವಿಶ್ವಾದಿ ಮೂರ್ತಿಗಳು
ಭೂ-ಮಂಡಲ ಶಯನವೇ ದಂಡಪ್ರಣಾಮ ||
ಥಂಡ ಥಂಡದ ಕ್ರಿಯೆಗಳೆಲ್ಲ ನಿನ್ನಯ ಪೂಜೆ
ಮಂಡೆ ಬಾಗಿಸಿ ನಮಿಪ ಭಾಗವತ ಜನಕೆ || ೩ ||
ಕೆಟ್ಟುಹೋದದ್ದೆಲ್ಲ ಸಂಚಿತಕರ್ಮವು
ಸುಟ್ಟುಹೋದದ್ದೆಲ್ಲ ಆಗಾಮಿ ಕರ್ಮ ||
ನಷ್ಟವಾದದ್ದೆಲ್ಲ ಪ್ರಾರಬ್ಧಕರ್ಮ
ಸೆಟ್ಟಿ ತಾ ಬೀಡುಬಿಟ್ಟದ್ದೆ ಪಟ್ಟಣವು || ೪ ||

ಎಲ್ಲಿ ಕುಳಿತರೆ ಅಲ್ಲಿ ಪ್ರಾಯೋಪವೇಶ ಮ-
ತ್ತೆಲ್ಲಿ ಪೋದರೆ ಮನಸು ಅಲ್ಲಿ ಸಮಾಧಿ ||
ಚೆಲ್ವ ಶ್ರೀ ಪು ರ ಂ ದ ರ ವಿ ಠ ಲ ರಾಯನ್ನ
ಬಲ್ಲವರಿಗೆಲ್ಲಿಹುದೊ ಪಾಪಪುಣ್ಯದ ಲೇಪ || ೫ ||

## ೧೫೮. ನಾನು ನಿನ್ನ ಕೈಯಲ್ಲಿ

ಮಧ್ಯಮಾವತಿ ರಾಗ ಆದಿತಾಳ

ಪಾಲೊಳಗದ್ದು ನೀರೊಳಗದ್ದು ಹರಿ ನಾ ನಿನ್ನ ನಂಬಿದೆನೊ || ಪ ||
ಜಲಜನಾಭ ನೀನಿಟ್ಟ ತೆರದಲ್ಲಿ ಇರುವೆನಯ್ಯಾ || ಅ. ಪ. ||
ಸುಖದುಃಖದೊಳಗಿಡು ಸುಕೃತ ದುಷ್ಕೃತ ಮಾಡು
ನಿಖಿಳ ದುರಿತದೊಳೆನ್ನ ಲೋಲ್ಯಾಡಿಸು ||
ಅಖಿಳಾಖಿಳನೆ ನೀನು ಅಭಯಾಭಯವ ಸೂಸು
ಮಕರಕುಂಡಲ ನಿನ್ನ ಮತವೆ ಸಮ್ಮತವಯ್ಯ || ೧ ||
ಜ್ಞಾನಾಜ್ಞಾನದೊಳಗಿಡು ಮಾನಾಪಮಾನವೆ ಮಾಡು
ಅನಾಥಾನಾಥರೊಳೆನ್ನ ಅನವರತಾಗಿರಿಸು ||
ದೀನಾಧೀನತೆಯೊಳಗೆನ್ನ ನೀ ನೀಡ್ಯಾಡು
ಶ್ರೀನಾಥ ನಿನ್ನಯ ಮತಮತವೆ ಸಮ್ಮತವಯ್ಯ || ೨ ||
ಪ್ರಾಣಾಪಾನ ವ್ಯಾನೋದಾನ ಸಮಾನಂಗಳ ಭೇದಿಸು
ಘನ ದಾರಿದ್ರ್ಯವ ನೂಕು ಸುಖವೆ ಸುರರೊಳಗ್ಹಾಕು ||
ಮುನಿಜನರಸಂಗ ಪೊರೆವ ರ ಂ ಗ ವಿ ಠ ಲ
ನಿನ್ನಯ ಮತ ಮತವೇ ಸಮ್ಮತವಯ್ಯ || ೩ ||

## ೧೫೯. ಎಲ್ಲವೂ ನಿನ್ನಲ್ಲಿ ಅರ್ಪಣವಾಗಲಿ

ಜುಂಜೋಟಿರಾಗ ಆದಿತಾಳ

ನಾ ನಿನ್ನೋಳನ್ಯ ಬೇಡುವದಿಲ್ಲ
ಎನ್ನ ಹೃದಯಕಮಲದಲಿ ನಿಂದಿರು ಹರಿಯೇ || ಪ ||
ಶಿರ ನಿನ್ನ ಚರಣಕ್ಕೆ ಎರಗಲಿ, ಎನ್ನ
ಕರಗಳೆರಡು ನಿನಗೆ ಮುಗಿಯಲಿ ಹರಿಯೇ ||

ಚರಣ ತೀರ್ಥಯಾತ್ರೆ ಮಾಡಲಿ, ಎನ್ನ
ಕರಣ ಕೀರ್ತನೆಗಳ ಕೇಳಲೊ ಹರಿಯೇ ‖ ೧ ‖
ರಸನೆ ನಿನ್ನ ಕೊಂಡಾಡಲಿ, ಎನ್ನ
ಚಕ್ಷುಗಳ್ನಿನ್ನ ನೋಡಲಿ ಹರಿಯೇ ‖
ನಸವು ನಿರ್ಮಾಲ್ಯಾ ಘ್ರಾಣಿಸಲಿ, ನಿನ್ನ
ಧ್ಯಾನವನೆನಗೆ ಕೊಡು ಕಂಡ್ಯಾ ಹರಿಯೆ ‖ ೨ ‖
ಚಿತ್ತ ನಿನ್ನಲಿ ಕುಣಿದಾಡಲಿ, ಎನ್ನ
ಬುದ್ಧಿ ನಿನ್ನಲಿ ಸುಳಿದಾಡಲಿ ಹರಿಯೇ ‖
ಭಕ್ತಜನರ ಸಂಗ ದೊರೆಯಲಿ ರ ೦ ಗ
ವಿಠ್ಠಲ ನಿನ್ನ ದಯವಾಗಲೊ ಹರಿಯೇ ‖ ೩ ‖

## ೧೬೦. ಎಲ್ಲವೂ ನಿನ್ನದು

ಕೇದಾರಗೌಳ ರಾಗ ಅಟತಾಳ

ತನು ನಿನ್ನದು ಜೀವನ ನಿನ್ನದು, ಸ್ವಾಮಿ
ಅನುದಿನದಲಿ ಬಾಹ ಸುಖದುಃಖ ನಿನ್ನದಯ್ಯಾ ‖ ಪ ‖
ಸವಿನುಡಿ ವೇದಪುರಾಣ ಶಾಸ್ತ್ರಗಳೆಲ್ಲ
ಕಿವಿಗೊಟ್ಟು ಕೇಳುವ ಸ್ಥಿತಿ ನಿನ್ನದು ‖
ನವ ಯೌವನ ಮೋಹನಾಂಗೇರ ರೂಪವ
ಎವೆಯಿಕ್ಕದೆ ನೋಡುವ ನೋಟ ನಿನ್ನದಯ್ಯಾ ‖ ೧ ‖
ಒಡಗೂಡಿ ಗಂಧಕಸ್ತೂರಿ ಪರಿಮಳವೆಲ್ಲ
ಬಿಡದೆ ಲೇಪಿಸಿಕೊಂಬುವದು ನಿನ್ನದು ‖
ಷಡುರಸದನ್ನಕ್ಕೆ ನಲಿದಾಡುವ ಜಿಹ್ವೆ
ಕಡು ರುಚಿಗೊಂಬುವ ಸವಿ ನಿನ್ನದಯ್ಯ ‖ ೨ ‖
ಮಾಯಾಪಾಶದ ಬಲೆಯೊಳು ಸಿಕ್ಕಿ ತೊಳಲುವ
ಕಾಯ ಪಂಚೇಂದ್ರಿಯ ಗತಿ ನಿನ್ನದು ‖
ಕಾಯಜಪಿತ ಕಾ ಗಿ ನೆ ಲೆ ಯಾ ದಿ ಕೇ ಶ ವ
ರಾ ಯ ನೀನಲ್ಲದೆ ನರರ ಸ್ವತಂತ್ರವೇ ‖ ೩ ‖

---

# ೧೬. ದರ್ಶನ

ಭಕ್ತನು ಏಕನಿಷ್ಠೆಯಿಂದ ತನ್ನ ಸರ್ವಸ್ವವನ್ನು ಪರಮಾತ್ಮನಿಗೆ ಅರ್ಪಣ ಮಾಡಿಬಿಟ್ಟನೆಂದರೆ ಅವನ ಕರ್ತವ್ಯವು ಮುಗಿಯಿತು. ಭಕ್ತ ತಾನು ಮಾಡ ತಕ್ಕದ್ದೆಂಬುದು ಏನೂ ಉಳಿಯಲಿಲ್ಲ. ಆದರೆ ಭಕ್ತನು ಮಾಡಿದ ಭಕ್ತಿಯ ಫಲವೆಂದು ಮುಂದೆ ಅವನಿಗೆ ದರ್ಶನ, ಧನ್ಯಭಾವದ ಅನುಭವ, ಸಾಕ್ಷಾತ್ಕಾರ ಮುಂತಾದವು ಆಗುವವು. ಹಾಗೂ ಆ ಬಳಿಕ ಅವನು ಜೀವನ್ಮುಕ್ತ ಸ್ಥಿತಿಯಲ್ಲಿ ಅಥವಾ ಸಿದ್ಧಭಾವದಲ್ಲಿ ಸ್ಥಿರನಾಗಿ ಉಳಿಯುವನು. ಇನ್ನು ಮುಂದೆ ಭಕ್ತಿಯ ಆ ಫಲಗಳನ್ನು ವರ್ಣಿಸಬೇಕಾಗಿದೆ.

ಭಕ್ತಿಯೆಂದೊಡನೆ ಸಗುಣಭಕ್ತಿಯೇ ಮುಖ್ಯವಾಗಿ ಕಣ್ಣುಮುಂದೆ ನಿಲ್ಲುವದು. ಭಕ್ತನು ಯಾವ ಇಷ್ಟದೇವತೆಯನ್ನು ಯಾವ ರೂಪದಲ್ಲಿ ಆರಾಧಿಸುತ್ತ ಸಾಗಿರುವನೊ ಆ ದೇವತೆಯ ಪ್ರತ್ಯಕ್ಷ ದರ್ಶನವು ಅವನಿಗೆ ಭಕ್ತಿಯ ಫಲವಾಗಿ ದೊರಕುವದು, ಆ ದರ್ಶನದಿಂದ ಅವನಿಗೆ ಒಂದು ಬಗೆಯ ಧನ್ಯತೆಯೂ ಉಂಟಾಗುವದು. ಇಲ್ಲಿ ವೈಷ್ಣವ ಭಕ್ತರಾದ ಹರಿದಾಸರ ಪದ್ಯಗಳನ್ನೆ ನಾವು ವಿಚಾರಿಸುತ್ತಿರುವುದರಿಂದ ಸ್ವಾಭಾವಿಕವಾಗಿ ಶ್ರೀ. ಕೃಷ್ಣಾದಿ ಅವತಾರಗಳನ್ನು ತಾಳಿದ ವಿಷ್ಣುವಿನ ರೂಪವನ್ನು ಅವರು ವರ್ಣಿಸಿದ್ದು ನಮಗೆ ಕಂಡುಬರುವದು. ಅವತಾರಗಳಲ್ಲಿಯೂ ರಾಮಾವತಾರ ಹಾಗೂ ಕೃಷ್ಣಾವತಾರ ಇವು ಬಹಳ ಲೋಕಪ್ರಿಯವಾಗಿರುವವು. ಕೃಷ್ಣಾವತಾರದಲ್ಲಿ ಮತ್ತೆ ಬಾಲಕೃಷ್ಣನೆ ಭಕ್ತರ ಮನೋವಲ್ಲಭನಾಗಿ ಮೆರೆಯುತ್ತಿರುವನು.

ಯಾವ ಪದ್ಯಗಳಲ್ಲಿ ಈ ಬಗೆಯ ದರ್ಶನವು ವರ್ಣಿಸಲ್ಪಟ್ಟಿದೆಯೊ ಆ ದರ್ಶನದ ಮೂಲಕ ಭಕ್ತರಲ್ಲಿ ಉಂಟಾದ ಧನ್ಯಭಾವವು ಯಾವ ಪದ್ಯಗಳಲ್ಲಿ ವ್ಯಕ್ತವಾಗಿದೆಯೋ ಅಂಥವುಗಳಲ್ಲಿ ಹಲವನ್ನು ಇಲ್ಲಿ ಉದಹರಿಸಿದ್ದೇವೆ.

ಧನ್ಯಭಾವವೆಂದರೆ ಕೃತಾರ್ಥಭಾವವು. ಧನ್ಯತೆಯನ್ನು ಹೊಂದಿದವನು ಸಮಾಧಾನ, ಶಾಂತಿ ಇವುಗಳನ್ನು ಪಡೆದವನಿರುವನು. ಅಪೇಕ್ಷೆ, ಆಕಾಂಕ್ಷೆ, ಹಾರೈಕೆ, ಬಯಕೆ ಮುಂತಾದವುಗಳೆಲ್ಲ ಪೂರ್ಣ ಶಾಂತವಾಗಿ ಒಂದುಬಗೆಯ ಆನಂದದಲ್ಲಿ ಭಕ್ತನು ನಿಮಗ್ನನಾಗಿರುವನು.

## ೧೬೧. ರಂಗನ ದರ್ಶನವಾದರೆ

ಸುರಟಿರಾಗ ಅಟತಾಳ

ರಂಗಯ್ಯ! ಮನೆಗೆ ಬಂದರೆ ಅಂತ-
ರಂಗದಿ ಗುಡಿಕಟ್ಟಿ ಕುಣಿವೆನೊ ‖ ಪ ‖
ಎಳೆ ತುಲಸಿಯ ವನಮಾಲೆಯು ।
ಹೊಳೆವ ನೀಲದ ವೈಢಾಳವು ‖
ಪೊಳೆವ ಪಂಜರದ ಗಿಣಿಯಂತೆ ನಮ್ಮಂ
ಗಳಕೆ ಬಂದ ಭಾಗ್ಯವ ನೋಡೆ ‖ ೧ ‖
ಬಾಡಿದ ಮಾವು ಪಲ್ಲವಿಸಲು ಎಲ್ಲಿ ।
ನೋಡಲು ಜಗವು ಫುಲ್ಲೈಸಲು ‖
ಮಾಡಿದ ಮನದ ಪಾಪಗಳೆಲ್ಲ ಎತ್ತ-
ಲೋಡಿತು ಹರಿ ಬಂದ ಭರದಿಂದ ‖ ೨ ‖
ಬಿಸಿಲು ಬೆಳದಿಂಗಳಾದವು ತ- ।
ಮಸು ಹೋಗಿ ಉದಯವಾಯಿತು ನೋಡೆ ‖
ವಸುದೇವಸುತ ನಮಗೊಲಿದರೆ ಅಲ್ಲಿ
ವಿಷಹೋಗಿ ಅಮೃತವಾಯಿತು ನೋಡೆ ‖ ೩ ‖
ಹಾವು ನೇವಳವಾಯ್ತು ಅಲ್ಲಿ ।
ದಾವಾನಲ ತಂಪು ತಾನಾಯಿತು ‖
ಬೇವು ಸಕ್ಕರೆಯಾಯಿ ತು ನಮ್ಮ
ದೇವಕಿಸುತ ಬಂದರೆ ನೋಡೆ ‖ ೪ ‖
ಜಾಣೇರರಸ, ಕೇಳು, ರಂಗನು ತನ್ನ ।
ಸೇರಿದವರ ಬೆನ್ನ ಬಿಡನಮ್ಮ ‖
ಏನಾದರು ನಮ್ಮನಗಲನೆ ನಮ್ಮ
ಮಾನಾಭಿಮಾನದೊಡೆಯ ಶ್ರೀ ಕೃಷ್ಣ ‖ ೫ ‖

## ೧೬೨. ಶ್ರೀಕೃಷ್ಣನ ಮೂರುತಿ

ಕಾಂಬೋಧಿ ರಾಗ ತ್ರಿಪುಟ ತಾಳ

ಕೃಷ್ಣ ಮೂರ್ತಿ ಕಣ್ಣಮುಂದೆ ನಿಂತಿದಂತಿದೆ || ಪ ||
ಮಸ್ತಕದಲಿ ಮಾಣಿಕದ ಕಿರೀಟ
ಕಸ್ತೂರಿ ತಿಲಕದಿಂದೆಸೆವ ಲಲಾಟಾ ||
ಹಸ್ತದಿಂ ಕೊಳಲನೂದುವ ಓರೆ ನೋಟ
ಕೌಸ್ತುಭ ಎಡಬಲದಲಿ ಓಡ್ಯಾಟ || ೧ ||
ಮಘಮಘಿಸುವ ಸೊಬಗಿನ ಸುಳಿಗುರುಳು
ಚಿಗುರು ತುಲಸಿ ವನಮಾಲೆಯ ಕೊರಳು ||
ಬಗೆ ಬಗೆ ಹೊನ್ನುಂಗುರವಿಟ್ಟ ಬೆರಳು
ಸೊಗಸಿನ ನಾಭಿಯು ತಾವರೆ ಅರಳು || ೨ ||
ಉಡುದಾರ ಒಡ್ಯಾಣ ನಿಖಿಲಾಭರಣ
ಬಿಡಗು ಪೀತಾಂಬರ ರವಿಶತಕಿರಣ ||
ಕಡಗ ನೂಪುರ ಗೆಜ್ಜೆಗಳನಿಟ್ಟ ಚರಣ
ಒಡೆಯ ಶ್ರೀ ಪುರಂದರ ವಿಠಲನ ಕರುಣ || ೩ ||

## ೧೬೩. ಬಾಲಕೃಷ್ಣನ ದರ್ಶನ

ಶಂಕರಾಭರಣರಾಗ ಅಟತಾಳ

ಕಂಡೆ ನಾ ಕನಸಿನಲಿ ಗೋವಿಂದನ || ಪಲ್ಲ ||
ಕಂಡೆ ನಾ ಕನಸಿನಲಿ ಕನಕ ರತ್ನದ ಮಣಿಯು
ನಂದನ ಕಂದ ಮುಕುಂದನ ಚರಣವ || ಅ. ಪಲ್ಲ ||
ಅಂದಿಗೆ ಕಿರುಗೆಜ್ಜೆ ಘುಲಿರೆಂಬ ವಾದ್ಯದಿ
ಬಂದು ಕಾಳಿಂಗನ ಹೆಡೆಯುನೇರಿ
ಧಿಂಧಿಮಿಧಿಮಿಕೆಂದು ತಾಳಗತಿಗಳಿಂದಾ
ನಂದದಿ ಕುಣಿವ ಮುಕುಂದನ ಚರಣವ || ೧ ||
ಉಟ್ಟ ಪೀತಾಂಬರ ಉಡಿಯು ಕಂಚಿಯ ದಾಮ
ತೊಟ್ಟ ಮುತ್ತಿನ ಹಾರ ಕೌಸ್ತುಭವು
ಕಟ್ಟಿದ ವೈಜಯಂತೀ ತುಳಸೀ ವನಮಾಲೆ
ಇಟ್ಟ ದ್ವಾದಶನಾಮ ನಿಗಮಗೋಚರನ || ೨ ||

ಕಿರುಬೆರಳಿನ ಮುದ್ರೆಯುಂಗುರ ವುುಂಗೈಯು
ಕರದಲ್ಲಿ ಕಂಕಣ ನಳಿ ತೋಳುಗಳ
ವರ ಚತುರ್ಭುಜ ಶಂಖಚಕ್ರಾದಿ ಮೆರೆವನ
ನಿರುತದಿ ಒಪ್ಪುವ ಕರುಣಾ ಮೂರುತಿಯು ॥ ೩ ॥
ಬಣ್ಣದ ತುಟಿ ಭಾವ ರಚನೆಯ ಸುಲಿಪಲ್ಲು
ಸಣ್ಣ ನಗೆಯು ನುಡಿಸು ಮಾತಿನ
ಪುಣ್ಯ ಚರಿತ್ರನ ಪೊಳೆವ ಕಿರೀಟವ
ಕಂಡು ಮನ ದಣಿಯದು ಕಂಸಾರಿ ಕೃಷ್ಣನ ॥ ೪ ॥
ಮಂಗಳ ವರತುಂಗ ಭದ್ರಾದಿ ಮೆರೆವನ
ಅಂಗಜಪಿತ ಶ್ರೀ ಲಕ್ಷ್ಮೀಪತಿಯ
ಶೃಂಗಾರ ಮೂರುತಿ ಪುರಂದರವಿಠಲನ
ಕಂಗಳಿಂದಲಿ ಕಂಡೆ ಹಿಂಗಿತು ಭವಭಯ ॥ ೫ ॥

## ೧೬೪. ವೇಣುಗೋಪಾಲನ ದರ್ಶನ

ಶ್ರೀರಾಗ ರಾಗ ಛಾಪುತಾಳ

ಬಂದುನಿಂದ ಕಣ್ಣುಮುಂದೆ, ಬಂದುನಿಂದ ॥ ಪ ॥
ಬಂದುನಿಂದ ನಿಂದು ಭಾಗವತರ ಪ್ರಿಯ
ಕಂದರ್ಪಜನಕ ಶ್ರೀ ಕರುಣಾಸಾಗರ ಮೂರ್ತಿ ॥ ಅ. ಪ. ॥
ಕುಟಿಲ ಕುಂತಳದೇವ ವಟುವೇಷದಿಂದಲಿ
ನಟನೆ ಮಾಡುತ ದಿವ್ಯ ಪಟುತರದಲಿ ನಾನು ॥ ೧ ॥
ಮುರಳಿಯನೂದುತ್ತ ಮರುಳುಗೊಳಿಸಿ ಜನರ
ಕೊರಳಪದಕ ಹಾರ ಧರಿಸಿ ತಾನಲಿಯುತ್ತ ॥ ೨ ॥
ಸುಜನರ ಪೊರೆಯುವ ಕುಜನರ ತರಿಯುವ
ವಿಜಯಸಾರಥಿ ನಮ್ಮ ವಿಜಯವಿಠ್ಠಲರೇಯ ॥ ೩ ॥

## ೧೬೫. ವೈಕುಂಠ ದರ್ಶನ

ರೇಗುಪ್ತಿ ರಾಗ ಅಟತಾಳ

ಇಷ್ಟುದಿನ ಈ ವೈಕುಂಠ, ಎಷ್ಟುದೂರವೆನ್ನುತಿದ್ದೆ
ದೃಷ್ಟಿಯಿಂದ ನೋಡಿಕೊಂಡೆ, ಸೃಷ್ಟಿಗೀಶ ಶ್ರೀರಂಗಶಾಯಿ ॥ ಪಲ್ಲ ॥

ವನಉಪವನಗಳಿಂದ ಘನಸರೋವರಗಳಿಂದ
ಕನಕ ಗೋಪುರಂಗಳಿಂದ ಘನಶೋಭಿತನೆ ಶ್ರೀರಂಗಶಾಯಿ || ೧ ||
ಎಂಟು ಏಳು ಕಳೆದಿದ್ದರಿಂದ ತುಂಟರೈವರ ತುಳಿದಿದ್ದರಿಂದ
ಕಂಟಕನೊಬ್ಬನ ಕಳೆದಿದ್ದರಿಂದ ಬಂಟನಾಗಿ ಬಂದೆ ಶ್ರೀರಂಗಶಾಯಿ || ೨ ||
ವಜ್ರವೈಡೂರ್ಯ ತೊಲೆಗಳ ಕಂಡೆ ಪ್ರಜ್ವಲಿಪ ಮಹಾದ್ವಾರವಕಂಡೆ
ನಿರ್ಜರೋತ್ತಮರ ಮುನಿಗಳ ಕಂಡೆ ದುರ್ಜನಾಂತಕ
ಶ್ರೀರಂಗಶಾಯಿ || ೩ ||
ರಂಭೆ ಊರ್ವಶಿ ಮೇಳವ ಕಂಡೆ ತುಂಬುರ ನಾರದರ ಕಂಡೆ
ಅಂಬುಜೋದ್ಭವ ಪ್ರಮುಖರ ಕಂಡೆ ಶಂಬರಾಂತಕಪಿತ
ಶ್ರೀರಂಗಶಾಯಿ || ೪ ||
ನಾಗಶಯನ ಮೂರ್ತಿಯ ಕಂಡೆ ಭೋಗಿಭೂಷಣ ಸಖನಕಂಡೆ
ಭಾಗವತರ ಸಮ್ಮೇಳವ ಕಂಡೆ ಕಾಗಿನೆಲೆಯಾದಿ ಕೇಶವರಂಗಶಾಯಿ || ೫ ||

## ೧೬೬. ನಿನ್ನ ನೋಡಿ ಧನ್ಯನಾದೆ

ಪೂರ್ವಿರಾಗ ಆದಿತಾಳ

ನಿನ್ನ ನೋಡಿ ಧನ್ಯನಾದೆನೊ ಹೇ ಶ್ರೀನಿವಾಸಾ || ಪ ||
ನಿನ್ನ ನೋಡಿ ಧನ್ಯನಾದೆ, ಎನ್ನ ಮನದಿ ನಿಂತು ಸುಪ್ರ-
ಸನ್ನ ದಯಮಾಡಿ ನೀನು, ಮುನ್ನಿನಂತೆ ಸಲಹಬೇಕು || ಅ. ಪ. ||
ಲಕ್ಷ್ಮೀರಮಣ ಪಕ್ಷಿವಾಹನ, ಕಕ್ಷ ನಿನ್ನದಲ್ಲೆ ಪಾಂಡು-
ಪಕ್ಷ ದೈತ್ಯಾಶಿಕ್ಷ, ರಕ್ಷಿಸೆನ್ನ ಕಮಲಾಕ್ಷ || ೧ ||
ದೇಶದೇಶವನ್ನು ತಿರುಗಿ, ಆಸೆಬದ್ಧನಾದೆ ಸ್ವಾಮಿ
ವಾ ನನ್ನದಲ್ಲ ಜಗ-ದೀಶ ಕಾಯೊ ವಾಸುದೇವ || ೨ ||
ಕಂತುಜನಕ ಕೇಳೊ ಎನ್ನ, ಅಂತರದ ನೇತಿಯನ್ನು
ಅಂತರವಿಲ್ಲದೆ ಕಾಯಬೇಕು, ಹೊಂತಕಾರಿ ಮುದ್ದು ಕೃಷ್ಣ || ೩ ||

## ೧೬೭. ದರ್ಶನದಿಂದ ಧನ್ಯ

ರೇಗುಪ್ತಿರಾಗ ಆದಿತಾಳ

ಧನ್ಯನಾದೆ ನಾ ಈ ಜಗದೊಳು | ೨ | || ಪ ||
ಪನ್ನಗಶಯನನ ಕಣ್ಣಿನಿಂದಲಿ ಕಂಡು || ಅ. ಪಲ್ಲ ||

ಉನ್ನತ ಮಹಿಮ ಪಾವನ್ನ ಚರಿತ ಸುರಸನ್ನುತ ಚರಣ
ಪನ್ನಗಾರಿವಾಹನ ಪುರುಷ ರನ್ನ ಚನ್ನಿಗ ಶ್ರೀರಂಗನ
ಮಹಿಮೆಯ ಕಂಡು ॥ ೧ ॥
ದೇವ ದೇವೋತ್ತಮ ಕಾವ ನಮ್ಮ ಈಗ ಭಾವಜನಯ್ಯನು
ಕಾವೇರಿ ತೀರದ ಉತ್ತಮ ಕ್ಷೇತ್ರದೊಳು ಪಾವನ ನರಸಿಂಗನಾ ॥ ೨ ॥
ಭಾನುಕೋಟಿಪ್ರಭಾ ಸ್ವಾನಂದಪೂರ್ಣನ ದೀನರಕ್ಷಕನ
ಶ್ರೀನಿಧೆ ಪು ರಂ ದ ರ ವಿ ಠ ಲ ಚೆನ್ನಿಗ ಶ್ರೀರಂಗ
ಮಹಿಮೆಯ ಕಂಡು ॥ ೩ ॥

## ೧೬೮. ದೇವರನ್ನು ನೋಡಿ ಧನ್ಯಭಾವ

ಪೂರ್ವಿರಾಗ ಆದಿತಾಳ

ಧನ್ಯನಾದೆ ವಿಠಲನ ಕಂಡು ॥ ಪಲ್ಲ ॥
ಧನ್ಯನಾದೆ ಕಾಮುನ್ನ ಪಿತನ ಲಾ
ವಣ್ಯ ಮೂರುತಿಯ ಕಣ್ಣಲಿ ಕಂಡು ॥ ಅ. ಪ. ॥
ದೇವವರೇಣ್ಯ ಸದಾ ವಿನೋದಿ ವೃಂ
ದಾವನ ಸಂಚರಿ ಓವನ ಕಂಡು ॥ ೧ ॥
ಮಂಗಳಾಂಗ ಕಾಳಿಂಗಮಥನ ಮಾ
ತಂಗ ವರದ ವರ ರಂಗನ ಕಂಡು ॥ ೨ ॥
ಹಾಟಕಾಂಬರ ಕಿರೀಟ ಸಾರಥಿ
ತಾಟಕಾರಿ ವೈರಾಟನ ಕಂಡು ॥ ೩ ॥
ಚಿಂತಿತಫಲದ ಕೃತಾಂತನಾತ್ಮಜಾ
ದ್ಯಂತರಹಿತ ನಿಶ್ಚಿಂತನ ಕಂಡು ॥ ೪ ॥
ಮಾತುಳಾಂತಕ ವಿಧಾತ ಪಿತಜಗ
ನ್ನಾ ಥ ವಿ ಠ ಲ ವಿಖ್ಯಾತನ ಕಂಡು ॥ ೫ ॥

## ೧೬೯. ಧನ್ಯಭಾವ

ಆರಭಿರಾಗ ಅಟತಾಳ

ಹರಿದಾಸರ ಸಂಗ ದೊರಕಿತು ಎನಗೀಗ ಇನ್ನೇನಿನ್ನೇನು
ವರ ಗುರು ಉಪದೇಶ ನೆರವಾಯ್ತು ಎನಗೆ ಇನ್ನೇನಿನ್ನೇನು ॥ ಪಲ್ಲ ॥

ಮಾಯದ ಸಂಸಾರ ಮಮಕಾರ ತಗ್ಗಿತು ಇನ್ನೇನಿನ್ನೇನು
ತೋಯಜಾಕ್ಷನ ನಾಮ ಜಿಹ್ವೆಯೊಳ್ನೆಲೆಸಿತು ಇನ್ನೇನಿನ್ನೇನು || ೧ ||
ಹಲವು ದೈವಗಳೆಂಬ ಹಂಬಲ ಬಿಟ್ಟಿತು ಇನ್ನೇನಿನ್ನೇನು
ಜಲಜನಾಭನ ಧ್ಯಾನ ಹೃದಯದೊಳ್ದೊರಕಿತು ಇನ್ನೇನಿನ್ನೇನು || ೨ ||
ತಂದೆ ತಾಯಿ ಮುಚುಕುಂದವರದನಾದ ಇನ್ನೇನಿನ್ನೇನು
ಸಂದೇಹವಿಲ್ಲ ಮುಕುಂದ ದಯಮಾಡಿದ ಇನ್ನೇನಿನ್ನೇನು || ೩ ||
ಏನೆಂದು ಹೇಳಲಿ ಆನಂದ ಸಂಭ್ರಮ ಇನ್ನೇನಿನ್ನೇನು
ಆ ನಂದಗೋಪನಕಂದನ ಮಹಿಮೆಯ ಇನ್ನೇನಿನ್ನೇನು || ೪ ||
ಎನ್ನ ವಂಶಗಳೆಲ್ಲ ಪಾವನವಾದವು ಇನ್ನೇನಿನ್ನೇನು
ಚಿನ್ಮಯ ಪುರಂದರವಿಠಲಯ್ಯ ದೊರಕಿದ ಇನ್ನೇನಿನ್ನೇನು || ೫ ||

---

# ೧೭. ಸಾಕ್ಷಾತ್ಕಾರ



ಸತ್ಯದ ಜ್ಞಾನ, ಅಪರೋಕ್ಷಾನುಭೂತಿ, ಆತ್ಮಾನುಭವ ಇವು ಸಾಕ್ಷಾತ್ಕಾರದ ಅಪರ ನಾಮುಗಳು. ಅಜ್ಞಾನದ ನಾಶ, ಸಂಪೂರ್ಣ ಆನಂದದ ಅನುಭವ, ಸಂಶಯಚ್ಛೇದ, ಪರಮಾತ್ಮಸಂಕಲ್ಪದಲ್ಲಿ ಪೂರ್ಣಲೀನಭಾವ ಇವೇ ಸಾಕ್ಷಾತ್ಕಾರದ ಲಕ್ಷಣಗಳು. ಸಾಕ್ಷಾತ್ಕಾರವಾಯಿತೆಂದರೆ ಪರಮಾನಂದಸ್ಥಿತಿಯು ಪ್ರಾಪ್ತವಾಗುವದು ಹಾಗೂ ಸತತ ಸಾಕ್ಷಾತ್ಕಾರದಿಂದ ಆ ಸ್ಥಿತಿಯು ಸ್ಥಿರವಾಗುವದು.

ಭಕ್ತಿಮಾರ್ಗದಿಂದ ಸಾಗುತ್ತಿರಲು ಪರಮಾತ್ಮನ ಅನುಗ್ರಹದಿಂದ ಸಾಕ್ಷಾತ್ಕಾರ ಇಲ್ಲವೆ ನಿಃಸಂಶಯ ಜ್ಞಾನವುಂಟಾಗುವುದೆಂದು ದಾಸರು ಹೇಳುವರು. ಆದುದರಿಂದ ಅನುಗ್ರಹಕ್ಕೆ ಸಾಕ್ಷಾತ್ಕಾರದಷ್ಟೇ ಮಹತ್ವವಿರುವದು. ಕೇವಲ ಶುದ್ಧ ಜ್ಞಾನದಿಂದ ಮೋಕ್ಷವು ಎಂಬ ಸಿದ್ಧಾಂತವು ನಿರಪವಾದವು. ಆ ಜ್ಞಾನವು ಕೇವಲ ಪ್ರಯತ್ನಗಳಿಂದ ದೊರೆಯದು, ಅದಕ್ಕೆ ಪರಮಾತ್ಮನ ಅನುಗ್ರಹವು ಬೇಕು ಎಂದು ಹೇಳುವರು. ಯಾಕಂದರೆ ಈ ಜ್ಞಾನವು ಅಥವಾ ಮೋಕ್ಷದಾಯಕವಾದ ಸಾಕ್ಷಾತ್ಕಾರವು ಒಮ್ಮೆಲೆ ಹೊಡೆಮಿಂಚಿನಂತೆ ಬೆಳಗುವ ಜ್ಯೋತಿಯು. ಸತತ ಪ್ರಯತ್ನಮಾಡುತ್ತಿರಲು ಅದು ಅಕಸ್ಮಾತ್ತಾಗಿ ಬೆಳಗುವದು. ಆದುದರಿಂದ ಅದು ಪರಮಾತ್ಮಾನುಗ್ರಹದಿಂದಲೆ ಪ್ರಾಪ್ತವಾಗತಕ್ಕದ್ದೆಂದು ಭಕ್ತರು ಹೇಳುವರು.

ಭಕ್ತಿದೃಷ್ಟಿಯಿಂದ ದರ್ಶನವು ಕೂಡ ಸಾಕ್ಷಾತ್ಕಾರವೆಂದೇ ಎನಿಸುವದು. ಆದರೆ ಇಷ್ಟದೇವತೆಯ ಸ್ವರೂಪದರ್ಶನವನ್ನು ಪ್ರತ್ಯೇಕ ಪ್ರಕರಣದಲ್ಲಿ ಕೊಟ್ಟು ನಾವು ಸಾಕ್ಷಾತ್ಕಾರಕ್ಕೆ ಬೇರೆ ಪ್ರಕರಣವನ್ನು ಕಲ್ಪಿಸಿದ್ದೇವೆ. ಈ ಎರಡರಲ್ಲಿಯ ಭೇದವು ವಾಚಕರಿಗೆ ಸ್ಪಷ್ಟವಾಗಬೇಕೆಂಬುದೇ ನಮ್ಮ ಉದ್ದೇಶವು.



೧೯–೧೪೧೧

## ೧೭೦. ಎನ್ನ ಭವ ಹಿಂಗಿತು

ಕಾಂಬೋಧಿ ರಾಗ ಝಂಪೆತಾಳ

ಬದುಕಿದೆನು ಬದುಕಿದೆನು ಭವಹಿಂಗಿತು || ಪ ||
ಪದುಮನಾಭನ ಪಾದದೊಲಿಮೆ ಎನಗಾಯ್ತು || ಅ. ಪ. ||
ಹರಿಯ ತೀರ್ಥಪ್ರಸಾದವಿಂದೆನಗೆ ದೊರಕಿತು
ಹರಿಕಥಾಮೃತವೆನ್ನ ಕಿವಿಯೊಳಾಯ್ತು
ಹರಿದಾಸರ ಸಂಘ ಬಂಧುಬಳಗಾಯಿತು
ಹರಿಮುದ್ರೆ ಎನಗೆ ಆಭರಣವಾಯ್ತು || ೧ ||

ಮುಕ್ತರಾದರು ಎನ್ನ ನೂರೊಂದು ಕುಲದವರು
ಮುಕ್ತಿಮಾರ್ಗಕೆ ಯೋಗ್ಯ ನಾನಾದೆನು
ಮುಕ್ತಿದಾಯಕನಂಘ್ರಿ ಭಕ್ತಿನೆಲೆಸಿತು ಮನದಿ
ವ್ಯಕ್ತವಾಯಿತು ನಾಲಿಗೆಯೊಳು ಹರಿನಾಮ || ೨ ||

ಹಿಂದೆನ್ನ ಸಂತತಿಗೆ ಸಕಲ ಸಾಧನವಾಯ್ತು
ಮುಂದೆನ್ನ ಜನ್ಮವು ಸಾರ್ಥಕವಾಯ್ತು
ತಂದೆ ಪು ರಂ ದ ರ ವಿ ಠ ಲ ನೆಂದೆಂಬ ಪರದೈವ
ಬಂದೆನ್ನ ಹೃದಯದಲಿ ನೆಲೆಯಾಗಿ ನಿಂತ || ೩ ||

## ೧೭೧. ಪರಮ ಆನಂದದ ಅನುಭವ

ಮಧ್ಯಮಾವತಿ ರಾಗ ಆದಿತಾಳ

ಗೋವಿಂದ ನಿನ್ನಾನಂದ || ಪ || ಸಕಲಸಾಧನವೊ || ಅ. ಪ. ||
ಅಣುರೇಣು ತೃಣಕಾಷ್ಟ ಪರಿಪೂರ್ಣ ಗೋವಿಂದ
ನಿರ್ಮಲಾತ್ಮಕನಾಗಿ ಇರುವುದೆ ಆನಂದ || ೧ ||

ಸೃಷ್ಟಿ ಸ್ಥಿತಿ ಲಯಕಾರಣ ಗೋವಿಂದ
ಈ ಪರಿ ಮಹಿಮೆಯ ತಿಳಿಯಾದೆ ಆನಂದ || ೨ ||

ಮಂಗಳಮಹಿಮ ಪು ರಂ ದ ರ ವಿ ಠ್ಠ ಲ
ಹಿಂಗದೆ ದಾಸರ ಸಲಹೋದೆ ಆನಂದ || ೩ ||

## ೧೭೨. ಜಗದೀಶನಲ್ಲಿ ಸೇರಿದೆನು

ಕಾಂಬೋದಿ ರಾಗ ಅಟತಾಳ

ಸೇರಿದೆನು ಸೇರಿದೆನು ಜಗದೀಶನ || ಪ ||
ನರಕ ಜನ್ಮದ ಭಯವು ಎನಗೆ ಇಸಿತಿಲ್ಲ || ಅ. ಪ. ||
ನೇತ್ರಗಳು ಕೃಷ್ಣನ ಮೂರ್ತಿ ನೋಡುತಲಿವೆ
ಶ್ರೋತ್ರಗಳು ಹರಿಕಥೆಯ ಕೇಳುತಲಿವೆ
ರಾತ್ರಿ ಹಗಲು ಎನ್ನ ಮನಸು ಶ್ರೀರಂಗನಲ್ಲಿ
ಪಾತ್ರನಾಡುತಿದೆನ್ನ ಗಾತ್ರ ಕೃಷ್ಣನ ಮುಂದೆ || ೧ |
ಹಸ್ತಗಳು ಮಂಟಪ ಶುದ್ಧಿಯನು ಮಾಡುತಿವೆ
ಮಸ್ತಕವು ಹರಿಚರಣಕ್ಕೆರಗುತಿದೆಕೋ
ವಿಸ್ತಾರವಾದ ಪ್ರದಕ್ಷಿಣೆಯು ಮಾಡುತಿದೆ
ಕಸ್ತೂರಿ ತುಳಸಿಯನು ಮೂಗು ಆಘ್ರಾಣಿಸುತಿದೆ || ೨ ||
ಹರಿನಾಮ ಸ್ಮರಣೆಯನು ನುಡಿಯುತಿದೆ ಎನ್ನ ಜಿಹ್ವೆ
ಹರಿಭಕುತಿ ಸುಧೆಯ ಪಾನಗಳಿಂದಲಿ
ಹರಿ ಪ್ರೀತಿಯಾಗಿದೆ ನೋಡಿದರೆನ್ನ ದೇಹ
ಸಿರಿ ಕೃಷ್ಣ ರಾಯನ್ನ ಮನಮಂದಿರದಿ ಕಂಡೆ || ೩ ||

## ೧೭೩. ಅನುಗ್ರಹೀತನ ನಿರ್ಭಯತೆ

ದ್ವಿಜಾವಂತಿ ರಾಗ ಆದಿತಾಳ

ಯಾತರ ಭಯ ಶ್ರೀನಾಥನ ಪರಮಪ್ರೀತಿಯ ಪಡೆದವಗೆ || ಪ ||
ಕಾತರಪಡದಲೆ ಪಾತಕಹರ ವಿಧಿ-
ತಾತನೆ ನಿಜಸುಖದಾತನೆಂದರಿದಗೆ || ಅ. ಪ. ||
ಬಂಧು ಜನರು ತನಗೊಂದಿಸಿ ನುಡಿಯಲು ಬಂದ ಭಾಗವೇನೋ
ಹಿಂದೆ ಮುಂದೆ ತನ್ನ ನಿಂದಿಸಿ ನುಡಿಯಲು ಕುಂದಾದದ್ದೇನೋ ||
ಮಂದರಧರ ಗೋವಿಂದನ ಮಾನಸ-
ಮಂದಿರದಲಿ ತಂದಿಟ್ಟಿರುವವಗಿನ್ || ೧ ||
ದುಸುಮುಸಗುಟ್ಟುವ ಸತಿಸುತರಿಂದಲಿ ಹಸಗೆಟ್ಟದ್ದೇನೋ
ಅಶನಾಚ್ಛಾದನ ನಾ ತರಲಿಲ್ಲವೆಂದು ವ್ಯಸನಪಡುವದೇನೊ ||

ಕುಸುಮನಾಭ ಸುಮನಸವಂದಿತಪದ
ವಸುದೇವಸುತ ನಿನ್ನೊಶದಲ್ಲಿರುವಗೆ || ೨ ||
ಗಾಸಿಯಿಂದ ಆಯಾಸಪಡುತ ವಾಸದೊಳಿದ್ದೇನೋ
ಕಾಶೀ ಕಂಚಿ ಕಾಳಹಸ್ತಿ ಪರದೇಶ ತಿರುಗರೇನೋ
ಈಶಾಧೀಶ ಜ ಗ ನ್ನಾ ಥ ವಿ ಠ್ಠ ಲ ನ
ದಾಸನೆಂದು ಸಂತೋಷದಲಿರುವಗೆ || ೩ ||

## ೧೭೪. ದೇವರ ದಾಸರಿಗೆ ಭಯವಿಲ್ಲ

ಆನಂದಭೈರವಿ ರಾಗ ಆದಿತಾಳ

ಯಾರು ಒಲಿದರೇನು ನಮಗಿನ್ಯಾರು ಮುನಿದರೇನು || ಪ ||
ಕ್ಷೀರಸಾಗರ ಶಾಯಿಯಾದವನ ಸೇರಿದಂಥ ಹರಿದಾಸರಿಗೆ || ಅ. ಪ. ||
ಊರನಾಳುವ ದೊರೆಗಳು ನಮ್ಮನು ದೂರ ಅಟ್ಟಿದರೇನು
ಘೋರಾರಣ್ಯದಿ ತಿರುಗುವ ಮೃಗಗಳು ಅಡ್ಡಗಟ್ಟಿದರೇನು ||
ಮಾರೀಹಿಂಡು ಮಸಣದ ದಂಡು ಮೈಗೆ ಮುತ್ತಿದರೇನು
ವಾರಿಜನಾಭನ ವಸುದೇವಸುತನ ಸಾರಿದಂಥ ಹರಿದಾಸರಿಗೆ || ೧ ||
ಪಡೆದ ತಾಯಿ ತಂದೆ ನಮ್ಮೊಳು ಅಹಿತವ ಮಾಡಿದರೇನು
ಮಡದಿ ಮಕ್ಕಳು ಮನೆಯನೆಂಟರು ಮುನಿಸುಗುಟ್ಟಿದರೇನು ||
ಒಡನಾಡುವ ಗೆಳೆಯರು ನಮ್ಮೊಳು ವೈರವಬೆಳೆಸಿದರೇನು
ಕಡಲಶಯನ ಕರುಣಾನಿಧಿ ನಾಮವು ಒಡಲೊಳಗಿಹ ಹರಿದಾಸರಿಗೆ || ೨ ||
ಕಾನನದೊಳ್ ಹರಿದಾಡುವ ಸರ್ಪವು ಕಾಲಿಗೆ ಸುತ್ತಿದರೇನು
ಜೇನಿನಂದದಿ ಕೀಟ ಕ್ರಿಮಿಗಳು ಚರ್ಮಕೆ ಮುತ್ತಿದರೇನು ||
ಭಾನುನಂದನ ಬುಧಮಂಗಳರ ಬಲವು ತಪ್ಪಿದರೇನು
ದೀನನಾಥ ಶ್ರೀಪು ರಂ ದ ರ ವಿ ಠ ಲ ನ ಧ್ಯಾನವುಳ್ಳ ಹರಿದಾಸರಿಗೆ || ೩ ||

## ೧೭೫. ದೇವರ ದಯವೇ ಕವಚ

ಸಾರಂಗರಾಗ ಆದಿತಾಳ

ಬಂದದ್ದೆಲ್ಲ ಬರಲಿ ಗೋ- ವಿಂದನ ದಯ ನಮಗಿರಲಿ || ಪ ||
ಮಂದರಧರ ಗೋವಿಂದ ಮುಕುಂದನ

ಸಂದರುಶನ ಒಂದಿದ್ದರೆ ಸಾಲದೆ || ಅ. ಪ. ||
ಆರು ಅರಿಯದಿರಲೆನ್ನಮು- ರಾರಿಯು ಒಳಗೆ ಪ್ರಸನ್ನ
ಘೋರ ದುರಿತದ ಬನ್ನ, ಭಯ– ಹಾರಿ ಗುಣಾಂಬುಧಿ ಘನ್ನ ||
ಶ್ರೀರಮಣ ಶ್ರೀಚರಣಸೇವಕರಿಗೆ ಕ್ರೂರ ಯಮನು ಶರಣಾಗತನಲ್ಲವೆ || ೧ ||
ಅರಗಿನ ಮನೆಯೊಳಗಂದೂ, ಪಾಂಡವರನು ಕೊಲಬೇಕೆಂದು |
ದುರುಳ ಕೌರವ ಕಪಟದಿಂದ ಇರಲು ಆ ಕ್ಷಣದಿಂದಾ ||
ಹರಿಕೃಪೆ ಅವರಲ್ಲಿದ್ದ ಕಾರಣ ಬಂದ
ದುರಿತ ಭಯವು ಬಯಲಾಯಿತಲ್ಲವೇ || ೨ ||

ಸಿಂಗನ ಹೆಗಲೇರಿ ಸಾಗೆ, ಕರಿ- ಭಂಗವ್ಯಾಕೆ ಮತ್ತವಗೆ |
ರಂಗನ ದಯ ಉಳ್ಳವಗೆ, ಭವ- ಭಂಗದ ಬಯಕೆಯ ಹಂಗೆ ||
ಮಂಗಳಮಹಿಮ ಪು ರಂ ದ ರ ವಿ ಠ್ಠ ಲ
ರಂಗನ ದಯೆ ಒಂದಿದ್ದರೆ ಸಾಲದೆ || ೩ ||

## ೧೭೬ ಜ್ಞಾನಜ್ಯೋತಿಯು ಬೆಳಗಿತು

ಕಾಂಬೋಧಿ ರಾಗ ಝಂಪೆ ತಾಳ

ಅಂತರಂಗದ ಕದವು ತೆರೆಯಿತಿಂದು || ಪ ||
ಇಂತು ಪುಣ್ಯದ ಫಲದ ಪ್ರಾಪ್ತಿ ಫಲಿಸಿತೆನಗೆ || ಅ. ಪ. ||
ಏಸು ದಿನವಾಯಿತೊ ಬೀಗ ಮುದ್ರೆಯ ಮಾಡಿ
ವಾಸವಾಗಿದ್ದರೋ ದುರುಳರಲ್ಲಿ ||
ಮೋಸಹೋಯಿತು ಇಂತು ಇಂದಿನ ತನಕ
ಸೂಸು ತಮಸಿಲಿ ಮುಳುಗಿ ಕಾಣುತಿದ್ದಿಲ್ಲಾ || ೧ ||

ಹರಿಕರುಣವೆಂಬಂಥ ಕೀಲಿಕೈ ದೊರಕಿತು
ಗುರುಕರುಣವೆಂಬಂಥ ಶಕ್ತಿಯಿಂದ ||
ಪರಮ ಭಾಗವತರ ಸಹವಾಸದಲಿ ಪೋಗಿ
ಹರಿಸ್ಮರಣೆಯಿಂದ ಬೀಗವ ನಾ ತೆರೆದೇ || ೨ ||

ಸುತ್ತಲಿದ್ದವರೆಲ್ಲ ಪಲಾಯನವಾದರೋ
ಆಪ್ತನುಡಿ ಜ್ಞಾನೆಂಬ ದೀಪವನ್ನು ||

## ಹರಿಭಕ್ತಿ ಸುಧೆ

ಜತ್ತಾಗಿ ಹಿಡಕೊಂಡು ದ್ವಾರವನು ಪೋಗಲು
ಎತ್ತನೋಡಿದರತ್ತ ಶೃಂಗಾರಸದನಾ ॥ ೩ ॥
ಹೊರಗೆ ದ್ವಾರವು ನಾಲ್ಕು ಒಳಗೈದು ದ್ವಾರಗಳು
ಒಳದಾರಿಯೊಳು ಪ್ರಾಣಾದಿಪ್ರಿಯರು ॥
ಮಿರುಗುವ ಮಧ್ಯಮಂಟಪ ಕೋಟಿರವಿಯಂತೆ
ಸರಸಿಜನಾಭನ ಅರಮನೆಯ ಸೊಬಗೂ ॥ ೪ ॥
ಸ್ವಮೂರ್ತಿ ಗಣಮಧ್ಯ ಸಚ್ಚಿದಾನಂದೈಕ
ರಮಾದ್ಯರಿಂದೋಲಾಡಿ ಆಲಿಂಗನದಲಿ ॥
ಕಮಲಜಾದಿಗಳಿಂದ ಸ್ತುತಿಸಿಕೊಳುತಲಿ ಹೃದಯ
ಕಮಲದೊಳಗಿರುವ ವಿ ಜ ಯ ವಿ ಠ ಲ ನ ಕಂಡೇ ॥ ೫ ॥

---

# ೧೮. ಸಿದ್ಧಭಾವ

ಸತತ ಸಾಕ್ಷಾತ್ಕಾರವೆ ಸಿದ್ಧನ ಮುಖ್ಯ ಲಕ್ಷಣವು. ಜ್ಞಾನಜ್ಯೋತಿಯು ಅವನ ಅಂತಃಕರಣದಲ್ಲಿ ಅಚ್ಛಳಿಯದೆ ಬೆಳಗುತ್ತಿರುವದು. ಸಿದ್ಧನಾಗುವುದೆ ಮನುಷ್ಯಜನ್ಮದ ಪರಮಪುರುಷಾರ್ಥವು. ಮಾನವನು ಸಿದ್ಧಸ್ಥಿತಿಯಲ್ಲಿ ಯಾವ ರೀತಿಯಲ್ಲಿ ವರ್ತಿಸುವನೆಂಬುದನ್ನು ವರ್ಣಿಸುವುದೇ ಈ ಪ್ರಕರಣದ ಉದ್ದೇಶವು.

ಅಲಿಪ್ತತೆ, ನಿಷ್ಕಾಮತೆ, ಲೀಲಾಭಾವ ಇವೇ ಸಿದ್ಧನ ನಿಲವಿನ ಗುರುತು. ಅವನು ಅಹಂಕಾರಶೂನ್ಯನಿರುವುದರಿಂದ ಅವನಲ್ಲಿ 'ನಾನು' 'ನನ್ನದು' ಎಂಬ ಭಾವವು ಪೂರ್ಣ ಅಳಿದುಹೋಗಿರುವದು. ಅವನು ಆತ್ಮಸ್ವರೂಪವನ್ನು ತಿಳಿದವನಾದುದರಿಂದ ಎಲ್ಲ ವಿಷಯಗಳ ನಶ್ವರತೆಯು ಅವನ ಕಣ್ಣಮುಂದೆ ಕಟ್ಟಿದಂತಿರುವುದು. ಆ ದೃಷ್ಟಿಯುಳ್ಳವನಾದುದರಿಂದ ಅವನು ಯಾವಾಗಲೂ ಜೀವನದಲ್ಲಿ ಲೀಲಾಭಾವದಿಂದ ವರ್ತಿಸುವನು.

ಸಿದ್ಧನಾದಾಕ್ಷಣಕ್ಕೆ ಅವನು ಸ್ವಸ್ಥ ಕೂಡುವನು ಇಲ್ಲವೆ ತನ್ನ ಕರ್ತವ್ಯಗಳನ್ನೆಲ್ಲ ಬಿಟ್ಟುಬಿಡುವನು ಎಂದು ಯಾರೂ ತಿಳಿಯಕೂಡದು. ಅನ್ಯ ಕರ್ತವ್ಯದಕ್ಷರಂತೆಯೇ ಅವನೂ ತನ್ನ ಎಲ್ಲ ಕೆಲಸಗಳನ್ನೂ ಮಾಡೇತೀರುವನು ಆದರೆ ಅವನಲ್ಲಿ ಸಿದ್ಧಭಾವವು ನೆಲೆಗೊಂಡಿದ್ದರಿಂದ ಅವನ್ನೆಲ್ಲ ಅಲಿಪ್ತಭಾವದಿಂದ ಮಾಡುವನು. ಈ ಸಂದರ್ಭದಲ್ಲಿ ಜನಕರಾಜನ ಉದಾಹರಣೆಯು ಮೇಲಿಂದ ಮೇಲೆ ಕೊಡಲ್ಪಡುತ್ತಿದೆ.

## ೧೭೭. ಆತ್ಮಜ್ಞಾನ

ಮಧ್ಯಮಾವತಿ ಛಾಗ ತಾಳ

**ತಾನ್ಯಾರೋ ತನ್ನ ದೇಹವ್ಯಾರೋ || ಪಲ್ಲ ||**
**ದಿವ್ಯ ಜ್ಞಾನದಿಂದ ತಿಳಿದವನೆ ಪರಮಯೋಗೀ || ಅನುಪಲ್ಲ ||**

ಸೂತಿಕಾವಸ್ಥೆಯಲಿ ನವಮಾಸ ತುಂಬಿದ ಬಳಿಕ
ಭ್ರಾಂತಿಯಲಿ ಬಂದು ಬಂದೊಡಲವೆರಸಿ
ಪಾತಕವೆ ಒಂದು ಮೂರುತಿಯಾದ ತನುವೆಂದು
ತಾ ತಿಳಿದು ಸಿಕ್ಕದವನೆ ಪರಮಯೋಗಿ ॥ ೧ ॥
ಅಸ್ಥಿಪಂಜರ ಚರ್ಮದ ಹೊದಿಕೆಯೇ ತನುವು
ವಿಸ್ತರಿಸಿ ಬಿಗಿದ ಮಾಂಸದ ಬೊಂಬೆಯು
ರಕ್ತ ಮಲಮೂತ್ರ ಕೀವಿನ ಪ್ರಳಯದೊಡಲೆಂದು
ಸ್ವಸ್ಥದಿಂದ ತಿಳಿದವನೆ ಪರಮಯೋಗಿ ॥ ೨ ॥
ಘೋರ ನರಕದ ತನುವು ಎಂದು ಮನದಲಿ ತಿಳಿದು
ಗೇರು ಹಣ್ಣಿನ ಬೀಜದಂತೆ ಹೊರಗಿದ್ದು
ಮಾರಪಿತ ಕಾಗಿನೆಲೆಯಾದಿ ಕೇಶವನ ಪಾದ
ವಾರಿಜವ ನೆನೆದವನೆ ಪರಮಯೋಗಿ ॥ ೩ ॥

## ೧೭೮. ಆತ್ಮಾನಂದ ಸುಲಭವಿಲ್ಲ

ನಾದನಾಮಕ್ರಿಯೆ ರಾಗ ಝಾಪುತಾಳ

ಸುಲಭವಲ್ಲವೊ ಮಹಾನಂದ ತ ॥ ಪಲ್ಲ ॥
ನ್ನೊಳಹು ತಿಳಿಯೊತನಕ ಗುರುದಯದಿಂದ ॥ ಅನುಪಲ್ಲ ॥
ಬೆಕ್ಕಿನ ಇಲಿ ನುಂಗೋತನಕ ಕಾಳ
ರಕ್ಕಸಿಯನು ಕಂಡು ಗಿಣಿ ನುಂಗೋತನಕ
ಮಕ್ಕಳ ಭಕ್ಷಿಸೊತನಕ, ಮದ
ಸೊಕ್ಕಿದ ಕರಿಯನು ನರಿ ನುಂಗೋತನಕ ॥ ೧ ॥
ಇಬ್ಬರೊಡನೆ ಗೂಡೊತನಕ, ಮುವ್ವ
ರ್ಹಬ್ಬಿದ ಬೆಟ್ಟವ ನೊಣ ನುಂಗೋತನಕ
ಒಬ್ಬನೊಡನೆ ಸೇರೊತನಕ, ಕೆಟ್ಟ
ಗುಬ್ಬಿಯು ರಾಜಹಂಸನ ಮಾಡೋತನಕ ॥ ೨ ॥
ಒಳಹೊರಗೊಂದಾಗೋತನಕ, ತಾನು
ತಿಳಿದೆನೆಂಬ ಭಾವ ಬಯಲಾಗೊತನಕ
ಬೆಳಕನೊಳಗೆ ಕಾಣೊತನಕ, ನಮ್ಮ
ಪುರಂದರ ವಿಠಲನ ದಯವಾಗೊತನಕ ॥ ೩ ॥

## ೧೭೯. ಸಿದ್ಧನ ಸಾಧನ

ಕಾಂಬೋಧಿ ರಾಗ ಝಂಪೆತಾಳ

ಸಾಧನಕೆ ಬಗೆಗಾಣೆನೆನ್ನಬಹುದೆ || ಪ ||
ಸಾದರದಿ ಗುರುಕರುಣ ತಾ ಪಡೆದಬಳಿಕ || ಅ. ಪ. ||
ಕಂಡಕಂಡದ್ದೆಲ್ಲ ಕಮಲನಾಭನ ಮೂರ್ತಿ
ಉಂಡು ಉಟ್ಟದ್ದೆಲ್ಲ ವಿಷ್ಣುಪೂಜೆ
ತಂಡತಂಡದವಾರ್ತೆ ವಾರಿಜಾಕ್ಷನ ಕೀರ್ತಿ
ಹಿಂಡುಮಾತುಗಳೆಲ್ಲ ಹರಿಯನಾಮ || ೧ ||
ವಾಗತ್ಯಪಡುವುದೆ ವಿಧಿನಿಷೇಧಾಚರಣೆ
ರೋಗಾನುಭವವೆಲ್ಲ ಉಗ್ರತಪವು
ಆಗದವರಾಡಿಕೊಂಬುವುದೆ ಆಶೀರ್ವಾದ
ಬೀಗರುಪಚಾರವೇ ಭೂತದಯವು || ೨ ||
ಮೈಮರೆತು ಮಲಗುವುದೆ ಧರಣಿಗೆ ನಮಸ್ಕಾರ
ಕೈಮೀರಿಹೋದದ್ದೆ ಕೃಷ್ಣಾರ್ಪಣ
ಮೈಮನೋವೃತ್ತಿಗಳೆ ವಿಷಯದಲಿ ವೈರಾಗ್ಯ
ಹೊಯ್ಮಾಲಿತನವೆಲ್ಲ ಹರಿಯ ವಿಹಾರ || ೩ ||
ಹಿಡಿದಹಟ ಪೂರೈಸಲದು ಹರಿಯ ಸಂಕಲ್ಪ
ನಡೆದಾಡುವೋದೆಲ್ಲ ತೀರ್ಥಯಾತ್ರೆ
ಬಡತನವು ಬರಲದೇ ಭಗವದ್ಭಜನೆಯೋಗ
ಸಡಗರದಲಿಪ್ಪುದೇ ಶ್ರೀಶನಾಜ್ಞೆ || ೪ ||
ಬುದ್ಧಿಸಾಲದೆ ಸುಮ್ಮನಿರುವುದೇ ಸಮ್ಮತವು
ಯದೃಚ್ಛಾಲಾಭವೇ ಸುಖವು ಎನಲು
ಮಧ್ವಾಂತರ್ಗತ ಶ್ರೀ ವಿ ಜ ಯ ವಿ ಠ್ಠ ಲ ರೇಯ
ಹೃದ್ಗತಾರ್ಥವ ತಿಳಿದು ಒಪ್ಪಿಸಿಕೊಳನೆ || ೫ ||

## ೧೮೦. ಅಲಿಪ್ತನಾಗಿರಬೇಕು

ಮುಖಾರಿ ರಾಗ ಅಟತಾಳ

ಹ್ಯಾಂಗಿರಬೇಕು ಸಂಸಾರದಲ್ಲಿ
ಹೀಂಗೆ ಬರೆದಿರಲು ಪ್ರಾಚೀನದಲ್ಲಿ || ಪ ||



೨೦-೧೪೧೧

ಆಡುವ ಮಕ್ಕಳು ಮನೆಯ ಕಟ್ಟಿದರು
ಆಟ ಸಾಕೆಂದು ಮುರಿದು ಓಡಿದರು ॥ ೧ ॥
ಸಂತೆ ನೆರೆಯಿತು ನಾನಾಪರಿಯಲಿ
ಪಂಥಸ್ಥರ್‍ಹೋದರು ತಮತಮ ದಾರಿಯಲಿ ॥ ೨ ॥
ಹಕ್ಕಿ ಬಂದಿತ್ತು ಅಂಗಳದಲ್ಲಿ
ಆ ಕ್ಷಣ ಹಾರಿಹೋಯಿತು ಅಲ್ಲಿ ॥ ೩ ॥
ವಸ್ತಿಕಾರನು ವಸ್ತಿಗೆ ಬಂದ
ಹೊತ್ತಾರೆ ಎದ್ದು ತಾ ಹೊರಟು ನಂದ ॥ ೪ ॥
ಸಂಸಾರವೆಂಬೊ ಪಾಶಾ ನೀ ಬಿಡಿಸೊ
ಕಂಸಾರಿ ಪು ರಂ ದ ರ ವಿ ಠ್ಠ ಲ ಶ್ರೀಶಾ ॥ ೫ ॥

## ೧೮೧. ಅಲಿಪ್ತ ಜೀವನ

ಮೋಹನ ರಾಗ ಛಾಪುತಾಳ

ಹ್ಯಾಂಗೆ ಇರಬೇಕು ಸಂಸಾರದಲ್ಲಿ ?
ಹ್ಯಾಂಗೆ ಇರಬೇಕು ಪ್ರಾಚೀನದಲ್ಲಿ ? ॥ ಪ ॥
ಪಕ್ಷಿ ಅಂಗಳದಲ್ಲಿ ಬಂದು ಕೂತಂತೆ
ಆ ಕ್ಷಣದಲ್ಲಿ ಹಾರಿಹೋದಂತೆ ॥ ೧ ॥
ನಾನಾ ಪರಿಯಲಿ ಸಂತೆ ನೆರೆದಂತೆ
ನಾನಾ ಪಂಥವ ಹಿಡಿದುಹೋದಂತೆ ॥ ೨ ॥
ಮಕ್ಕಳಾಡಿ ಮನೆ ಕಟ್ಟಿದಂತೆ
ಆಟ ಸಾಕೆಂದು ಅಳಿಸಿ ಪೋದಂತೆ ॥ ೩ ॥
ವಸತಿಕಾರನು ವಸತಿ ಕಂಡಂತೆ
ಹೊತ್ತಾರೆದ್ದು ಹೊರಟು ಹೋದಂತೆ ॥ ೪ ॥
ಸಂಸಾರಪಾಶವ ನೀನೆ ಬಿಡಿಸಯ್ಯ
ಕಂಸಾರಿ ಪು ರಂ ದ ರ ವಿ ಠ್ಠ ಲ ರಾಯಾ ॥ ೫ ॥

## ೧೮೨. ಜನಕರಾಯನಂತಿರಬೇಕು

ಪೂರ್ವಿ ರಾಗ ಆದಿತಾಳ

ಇರಬೇಕು ಇರದಿರಬೇಕು ॥ ಪ ॥
ಸಂ। ಸಾರದಿ ಜನಕಾದಿ ರಾಜ ಋಷಿಗಳಂತೆ ॥ ಅ. ಪ. ॥

ಮಿಥಿಲಾಪಟ್ಟಣವು ದಹಿಸಿತೆಂಬುದ ಕೇಳಿ
ಮಿಥಿಲೇಶ "ಮಮ ಕಿಂಚಿನ್ನ ದಹ್ಯತಿ" ಎಂಬಂತೆ || ೧ ||
ದಧೀಚಿ ಋಷಿ ತನ್ನ ಅಸ್ಥಿ ಸುರರಿಗಿತ್ತು
ಮಧುವೈರಿ ವೈಕುಂಠ ಪುರವಿತ್ತ ತೆರದಂತೆ || ೨ ||
ಪುರಂದರ ವಿಠಲನ್ನ ದಾಸರ ಸಂಗಡ
ಪುತ್ರ ಮಿತ್ರ ಕಳತ್ರ ಬಂಧುಗಳಂತೆ || ೩ ||

## ೧೮೩. ಸಿದ್ಧನ ನಿಲವು

ನಾದನಾಮಕ್ರಿಯೆ ರಾಗ ಏಕತಾಳ

ಬ್ರಹ್ಮಾನಂದದ ಸಭೆಯೊಳಗಲ್ಲಿ
ಸುಮ್ಮನೆ ಇರುತಿಹುದೇನಯ್ಯ || ಪ ||
ಮೂಡದು ಉಣ್ಣದು ಕೂಡದು ಮಾಣದು
ಕಾಡದು ಬೇಡದು ಕಂಗೆಡದು ||
ನಾಡ ಮಾತುಗಳ ಬಲ್ಲುದು ಆಡದು
ರೂಢಿಯೊಳಿರುತಿಹುದೇನಯ್ಯ || ೧ ||
ಪೊಡವಿಗಧಿಕವೆಂಬವರಿಗೆ ಬಲ್ಲುದು
ಕಡೆಮೊದಲಿಲ್ಲದ ಒಡಲಿಹುದು ||
ಬೆಡಗ ನರಿವೆನೆಂಬವರಿಗಗೋಚರ
ಪೊಡವಿಯೊಳಗಣ ಭಕ್ತರ ಬಲ್ಲುದು || ೨ ||
ನಿಲ್ಲದು ನಿಲುಕದು ಎಲ್ಲಿಗೆ ಪೋಗದು
ಬಲ್ಲೆನೆಂಬವರಿಗಳವಡದು ||
ಬಲ್ಲಿದ ನಮ್ಮ ಪುರಂದರವಿಠ್ಠಲ
ಗಲ್ಲದೆ ತಿಳಿಯದು ಜಗದೊಳಗೆ || ೩ ||

# ೧೯. ಮೋಕ್ಷಸಾಧನ ಇತ್ಯಾದಿ

ಭಕ್ತನ ವಿವಿಧ ಭಾವಗಳು ಯಾವವು. ಅವುಗಳ ಮುಖ್ಯ ಲಕ್ಷಣಗಳಾವು, ಎಂಬದನ್ನು ಹೇಳಿ ಆ ಭಾವಗಳನ್ನೊಳಗೊಂಡ ಹರಿದಾಸರ ಪದ್ಯಗಳನ್ನು ಈ ವರೆಗೆ ಕೊಟ್ಟಂತಾಯಿತು. ಆದರೆ ದಾಸರ ವಿಷಯಭಾಂಡಾರವು ಇಷ್ಟರಿಂದ ಮುಗಿಯಲಿಲ್ಲ. ಅವರು ಸಂಸಾರದಲ್ಲಿಯ ಇನ್ನೂ ಅನೇಕ ಮಹತ್ವದ ವಿಷಯಗಳನ್ನು ಕುರಿತು ಬರೆದಿದ್ದಾರೆ. ನೈತಿಕ, ಸಾಮಾಜಿಕ, ಮುಂತಾದ ವಿಧವಿಧದ ವಿಷಯಗಳ ಬಗ್ಗೆ ಅವರು ಒಳ್ಳೇ ಅನುಭವಪೂರ್ಣರೀತಿಯಿಂದ ಸರಳಭಾಷೆಯಲ್ಲಿ ಬರೆದಿರುವರು. ಅವೆಲ್ಲವುಗಳನ್ನು ಇಲ್ಲಿ ಕೊಡುವದು ಸಾಧ್ಯವೇ ಇಲ್ಲ. ಮಾದರಿಗಾಗಿ ಇಲ್ಲಿ ಹಲವುಗಳನ್ನು ಕೊಡುವೆವು.

ಈ ಕೆಳಗೆ ಮುಕ್ತಿಯ ಸಾಧನ ಮುಂತಾದ ಹಲವು ವಿಷಯಗಳ ಬಗ್ಗೆ ಪದ್ಯಗಳಿವೆ. ಪ್ರತ್ಯೇಕವಾಗಿ ಆ ಎಲ್ಲ ವಿಷಯಗಳ ವಿವರಣೆಯನ್ನು ಇಲ್ಲಿ ಕೊಡುವದು ಅವಶ್ಯವಿಲ್ಲವೆಂದು ಕಂಡದ್ದರಿಂದ ಆ ವಿವರವನ್ನು ಕೊಟ್ಟಿಲ್ಲ. ಪದ್ಯಗಳೆಲ್ಲ ಸ್ಪಷ್ಟವಾಗಿ ಆಯಾ ವಿಷಯಗಳನ್ನು ವಿವೇಚಿಸುವವು.

## ೧೮೪. ನಿನ್ನಿಂದಲೆ ನಿನ್ನ ಉದ್ಧಾರ

ಕಾಂಬೋಧಿ ರಾಗ ಝಂಪೆತಾಳ

ಏನು ಕಾರಣ ಮತಿಯಿಲ್ಲ ಮನವೇ || ಪ ||
ಹೀನಾಯ ಮಾಡದಿರು ಪರರ ಗುಣಗಳನೆಣಿಸಿ || ಅ. ಪ. ||

ಅವನುಡಿವೆ ಯಾಕೆ ಅವನ್ಯಾರು ನೀನ್ಯಾರು
ಅವನ ಪಾಪಕೆ ನೀನು ಭಾಗಿಯಾದೆ ||
ಅವನುತ್ತಮನಾದರವನೆ ಬದುಕಿದ ಕಾಣೊ
ಅವಪುಣ್ಯಮಾಡಿದರೆ ಅವನ ಕುಲ ಉದ್ಧಾರ || ೧ ||

ನಿನಗೆ ಕೊಡುವದರಲ್ಲಿ ಬೇಡ ಬಂದವನಲ್ಲ
ನಿನಗೆ ಅವನಿಗೆ ಏನು ಸಂಬಂಧವೋ ||
ಮನೆ ಒಡವೆ ವಸ್ತ್ರಗಳ ಹಂಚಿಕೊಂಬುವದಿಲ್ಲ
ಕ್ಷಣಕ್ಷಣಕೆ ಸಂದೇಹ ಮಾಡಿಕೊಂಬದು ಸಲ್ಲ || ೨ ||
ನಿನ್ನ ಗತಿಮಾರ್ಗಕೆ ಅವ ನಡೆದು ಬಾಹನೆ
ನಿನ್ನಿಂದ ಪರಲೋಕ ಅವಗೆ ಉಂಟೇ ||
ನಿನ್ನೊಳು ನೀ ತಿಳಿದು ವಿ ಜ ಯ ವಿ ಠ ಲ ನ್ನ
ಸನ್ನುತಿಸಿ ಭವರೋಗವನ್ನು ಕಳಕೊಳ್ಳೋ || ೩ ||

## ೧೮೫. ಭಕ್ತನೇ ಮುಕ್ತ

ಕಾಂಬೋಧಿ ರಾಗ ಝಂಪೆತಾಳ

ಎನ್ನ ನುಡಿ ಪುಸಿಯಲ್ಲ ಈ ಜಗದೊಳು || ಪ ||
ಅರವಿಂದ ಇಲ್ಲದಿಹ ಕೊಳವು ತಾ ಕಂಗೊಳವು
ಹರಿಣಾಂಕ ಇಲ್ಲದಿಹ ಇರುಳು ಮರಳು ||
ಸ್ವರಭೇದ ಇಲ್ಲದಿಹ ಸಂಗೀತ ವಿರಿಗೀತ
ಸರಸವಿಲ್ಲದ ಸತಿಯ ಭೋಗ ತನುರೋಗ || ೧ ||
ಪಂಥಪಾಡುಗಳನರಿಯದ ಬಂಟನವ ತುಂಟ
ಅಂತರವರಿಯದಾ ವೇಶಿ ಹೇಸಿ ||
ದಂತಿ ಇಲ್ಲದ ಅರಸು ಮುರಿದ ಕಾಲಿನ ಗೊರಸು
ಅಂತಸ್ಥವಿಲ್ಲದ ಪ್ರಧಾನಿ ಮದ್ಯಪಾನಿ || ೨ ||
ಮೂಗಿಯಲಿ ಸತಿಯ ನಗಲಿದ ಕಾಂತನವ ಭ್ರಾಂತ
ಪೂಗಣೆಯ ಗೆಲಿಯದಿಹ ನರನು ಗೋಖರ ||
ಭೋಗಿಸದೆ ಇಹಪರಕೆ ಘಳಿಸಿದರ್ಥ ಅಪಾರ್ಥ
ಕಾಗಿನೆಲೆಯಾದಿ ಕೇ ಶ ವನ ಭಕ್ತ ಮುಕ್ತ || ೩ ||

## ೧೮೬. ವೈಕುಂಠ ಸಾಧನ

ಕಲ್ಯಾಣಿ ರಾಗ ಅಟತಾಳ

ಪಾಥೇಯವ ಕಟ್ಟಿರೋ ವೈಕುಂಠಕ್ಕೆ ಪಯಣ ಸಮ್ಮತವಾದರೆ || ಪಲ್ಲ ||
ಮಾತಾಪಿತರ ಭಕ್ತಿ ಎಂಬ ಚಿತ್ರಾನ್ನವ ಪಾರ್ಥ ಸಾರಥಿ ಪಾದಪದ್ಮ
ಪತ್ರವ ಹಾಸಿ || ಅ. ಪ. ||

ಹರಿಭಕ್ತಿ ಹರಿಗೋಲಿಂದ ಮೆಲ್ಲಮೆಲ್ಲನೆ ವಿರಜಾ ನದಿಯ ದಾಟಿರೊ
ಕರಜಾಗ್ರಗಳಿಂದ ಹಿರಣ್ಯಕನನು ಸೀಳ್ದ ಪರವಾಸುದೇವನ ದರುಶನ
ವಾಗೋದು || ೧ ||

ಕೂಗಳತೆಗೆ ಕೊಂಚವೊ ಶ್ರೀಹರಿಪುರ ಕುಂಜರ ಪತಿ ಸಾಕ್ಷಿಯೋ
ನಾಗಶಯನ ಹರಿ ನಮ್ಮನು ಕಂಡರೆ ಹೋಗಬೇಡಿರೆಂದು
ಹೋಗಗೊಡನಯ್ಯ || ೨ ||

ಮುಗ್ಧಗೆ ದುರ್ಲಭವೊ ಶ್ರೀಹರಿಪುರ ಬದ್ಧನೆಗೆ ದೂರವೊ
'ತದ್ವಿಷ್ಣೋಃ ಪರಮಂ ಪದಂ' ಎಂಬುವಂಥ ವಿದ್ವಾಂಸರಿಪ್ಪಂಥ
ವಿಖ್ಯಾತ ಪುರವೈಯ್ಯ || ೩ ||

ಪಾಪಿಷ್ಠ ಗತಿದೂರವೊ ಶ್ರೀಹರಿಪುರ ಭಕ್ತರಿಗನುಕೂಲವೊ
ತಾಪತ್ರಯಗಳಲ್ಲಿ ಆ ಪಟ್ಟಣ ಸೇರೆ ಆಪತ್ತಿಲ್ಲದ ಪರಮಾನಂದ
ಪದವಿಯು || ೪ ||

ಪ್ರಳಯದೊಳಳಿವಿಲ್ಲವೊ ಶ್ರೀಹರಿಪುರ ಛಳಿಮಳೆ ಬಿಸಿಲಿಲ್ಲವೊ
ಬೆಳೆಸು ಬಿತ್ತಗಳಿಲ್ಲ ಬೇಕಾದ ಸಂಪತ್ತು ನಳಿನನಾಭನ ಪುರದೊಳು
ನೆಲೆಸಿಹುದಯ್ಯ || ೫ ||

ಶುದ್ಧಸಾತ್ವಿಕ ವೃತ್ತಿಯೋ ತಾಮಸರಿಗೆ ಹೊದ್ದುವೊಡಳವಲ್ಲವೊ
ಅಧ್ಯಾತ್ಮನಿಬ್ಬರ ಅರ್ಜುನ ಕೇಳಲು ತದ್ಧಾಮ ಪರಮಾನಂದ
ಪದವಿಯು || ೬ ||

ಬರವೆಂಬ ಮಾತಿಲ್ಲವೊ ಒಂದು ಕಾಸು ತೆರವಕೊಡಲಿ ಬೇಡವೊ
ಪರಮ ಪುರುಷ ಹಯವದನ ರಾಯನಲ್ಲಿ ಸರುವ ಮಾನ್ಯವನಿತ್ತು
ಜನರ ರಕ್ಷಿಪನೈಯ || ೭ ||

## ೧೪೭. ಮುಕ್ತಿಯ ಸಾಧನ

ಧನಾಸಿ ರಾಗ ಅಟತಾಳ

ಸುಮ್ಮನೆ ಬಾಹೋದೆ ಮುಕ್ತಿ, ಮನುಜ || ಪ ||
ಬಿನಗು ವಿಷಯ ತೊರಿಬೇಕು, ದೃಢ
ಮನದಿ ಸಂಸಾರ ನೀಡ್ಯಾಡಲು ಬೇಕು ||
ಅನುಮಾನವನು ಬಿಡಬೇಕು, ತನ್ನ
ತನುವನ್ನು ಧರ್ಮಕ್ಕೊಪ್ಪಿಸಿ ಕೊಡಬೇಕು || ೧ ||

ಪಾಪಕೋಪವ ಬಿಡಬೇಕು, ಸದಾ
ಗೋಪಾಲಕೃಷ್ಣನ ಸ್ಮರಿಸಲುಬೇಕು ||
ತಾಪಕಂಜದೆ ಇರಬೇಕು, ಭವ
ಕೂಪ ದಾಟಿಸುವ ಗುರುವ ನಂಬಬೇಕು || ೨ ||

ಶರೀರದಾಸೆಯು ಬಿಡಬೇಕು, ತನ್ನ
ಶರೀರವ ನಿತ್ಯವೆಂತೆನ್ನಲು ಬೇಕು ||
ಪರಕೆ ಸಾಧನೆ ಮಾಡಬೇಕು, ಹರಿ
ಪುರಂದರ ವಿಠಲನ ನಂಬಲುಬೇಕು || ೩ ||

## ೧೮೮. ಆತ್ಮಜ್ಞಾನ ಮಾಡಿಕೊ

ಮೋಹನರಾಗ ಅಟತಾಳ

ಹಂಸ ನಿನ್ನಲಿ ನೀ ನೋಡೋ, ಭವ
ಪಾಶಮುಕ್ತನಾಗಿ ಹರಿಯನ್ನು ಕೂಡೊ || ಪ ||

ಸಖರುಗಳೆರಡುಂಟು ನಿನಗೆ, ನೀ
ಹೊಕ್ಕು ಹೋಗುವಿ ಮೂರು ಪಂಜರದೊಳಗೆ ||
ಲೆಕ್ಕವಿಲ್ಲದ ಬಿಟ್ಟಿ ನಿನಗೆ, ಈಗ
ಸಿಕ್ಕಿದೆಯೊ ಮಾಯಾಪಾಶದೊಳಗೆ || ೧ ||

ಹಬ್ಬದ ಸವಿಗೆ ನೀ ಬಂದಿ, ಬಲು
ಕೊಬ್ಬಿಲಿ ಕಾಣದೆ ವಿಘ್ನದೊಳು ಬಿದ್ದಿ ||
ನಿಬ್ಬಣದಲಿ ಮೈಮುರಿದಿ, ನೀ
ಒಬ್ಬನೆ ಹೋಗಿ ಕಾಲಕ್ಕೆ ಗುರಿಯಾದಿ || ೨ ||

ದಾರಿಗೆ ದಾರು ಮತ್ತಿಲ್ಲ, ದೃಢ
ಸೇರಿಸು ಮನವನು ಮನೆಯೊಳಗೆಲ್ಲ ||
ದೂರ ಹೋಯಿತು ಪ್ರಾಯವೆಲ್ಲ, ಸಿರಿ
ಪುರಂದರ ವಿಠಲನಲ್ಲದೆ ಬೇರೇ ಇಲ್ಲಾ || ೩ ||

## ೧೮೯. ಜ್ಞಾನದಿಂದಲೇ ಮೋಕ್ಷ

ಆನಂದಭೈರವಿ ರಾಗ ಅಟತಾಳ

ಏನಾದರೇನು ಜ್ಞಾನವಿಲ್ಲದೆ ಮೋಕ್ಷವಿಲ್ಲ || ಪ ||

ವೇದವನೋದಿದರೇನು ಶಾಸ್ತ್ರವನೋದಿದರೇನು
ಕಾದಿ ಕಾದಾಡಿದರೇನು || ೧ ||

ಕಾಶಿಗೆ ತಾ ಹೋದರೇನು ಕಾನನವ ಸೇರಿದರೇನು
ಕಾಶೀಪೀತಾಂಬರ ಉಟ್ಟರೇನು || ೨ ||

ಜಪತಪವ ಮಾಡಲೇನು ಜಾಣತನದೊಳ ಮೆರೆದರೇನು
ವಿಜಯವಿಠ್ಠಲನ್ನ ಸಾರಿದರೇನು || ೩ ||

# ೨೦. ಜಗತ್ತಿನ ರೀತಿ

ದಾಸರು ಅನುಭವಿಗಳು; ಪ್ರತ್ಯಕ್ಷ ಅನುಭವದಿಂದ ಪದ್ಯಗಳನ್ನು ಕಟ್ಟಿದವರು. ಅವರು ಈ ಜಗತ್ತಿನ ಪೂರ್ಣ ಅನುಭವವನ್ನು ಪಡೆದವರು. ಇದನ್ನು ಒಳ್ಳೇ ಸೂಕ್ಷ್ಮ ರೀತಿಯಿಂದ ನಿರೀಕ್ಷಿಸಿದವರು, ಪರೀಕ್ಷಿಸಿದವರು. ಅವರು ಈ ಕೆಳಗಿನ ಪದ್ಯಗಳಲ್ಲಿ ಜಗತ್ತಿನ ಸಾಮಾನ್ಯ ರೀತಿ ನೀತಿಗಳನ್ನು ಬಹಳ ಚನ್ನಾಗಿ ಚಿತ್ರಿಸಿರುವರು.

## ೧೯೦. ಕಲಿಮಹಿಮೆ

ಕಾಂಬೋಧಿ ರಾಗ ಝಂಪೆತಾಳ

ಕಲಿಯುಗದ ಮಹಿಮೆಯು ಕಾಣಬಂತೀಗ
ಜಲಜಾಕ್ಷ ಶೇಷಗಿರಿಯ ಸಿರಿ ವೆಂಕಟೇಶಾ || ಪ ||
ಹರಿಕಥೆಯನೇ ಬಿಟ್ಟು ಹೀನನುಡಿ ಕೇಳುವರು
ಗುರುಹಿರಿಯರುಗಳ ದೂಷಿಸಿಬಾಳ್ವರು ||
ಪೊರೆದ ತಾಯ್ತಂದೆಗಳ ಮಾತುಗಳ ಮನ್ನಿಸದೆ
ತರುಣಿಯರ ಆಜ್ಞೆಪಾಲಿಸಿ ಸುಖಿಪರು || ೧ ||
ಪಟ್ಟದರಸಿಯ ಬಿಟ್ಟು ಪರಸತಿಯ ಬಯಸುವರು
ಕೊಟ್ಟಸಾಲವ ನುಂಗಿ ಕೊಳಲೆಣಿಪರು ||
ಮುಟ್ಟಿಭಾಷೆಯ ಕೊಟ್ಟು ಮೋಸವನೆ ಮಾಡುವರು
ಬಿಟ್ಟು ಪರದೈವವನು ಮಾರಿಗೆರಗುವರು || ೨ ||
ಕಂಡದನೆ ಹೇಳರು ಕಾಣದನೆ ಹೇಳುವರು
ಉಂಡಮನೆಗೆರಡನ್ನು ಬಗೆಯುತಿಹರು ||
ಕೊಂಡಾಡಿ ಬೇಡಿದರೆ ಕೊಡರೊಂದು ರುಪ್ಪಿಯನು
ದಂಡಿಸಿ ಕೇಳುವರಿಗೆ ಧನವ ಕೊಡುತಿಹರು || ೩ ||



೨೧–೧೪೧೧

ಕಳ್ಳರೊಳು ಅತಿಸ್ನೇಹ ಸುಳ್ಳರೊಳು ಸೋಲುವರು
ಒಳ್ಳೆಯವರೊಡನೆ ವಂಚನೆ ಮಾಳ್ಪರು ||
ಇಲ್ಲದ ಅನಾಥರಿಗೆ ಇಷ್ಟೊಂದನಿಕ್ಕರು
ಬಲ್ಲಿದವರಿಗೆ ಬಾಯುಸವಿಯ ನುಣಿಸುವರು || ೪ ||
ಮಾಡಿದುಪಕಾರವನು ಮರೆತು ಕೊಂಬರು ಮತ್ತೆ
ಕೂಡಲೆ ಕಾದುವರು ಕಪಟದಿಂದ ||
ರೂಢಿಯೊಳಗೆ ನಮ್ಮ ಪುರಂದರವಿಠಲನ್ನ
ಪಾಡಿ ಪೊಗಳದೆ ನಾಡವಾರ್ತೆ ಯಾಡುವರು || ೫ ||

## ೧೯೧. ಎಲ್ಲವೂ ಮಣ್ಣು

ಶಂಕರಾಭರಣ ರಾಗ ಅಟತಾಳ

ಮಣ್ಣಿನಿಂದಾ ಕಾಯಾ ಮಣ್ಣಿಂದ || ಪ ||
ಮಣ್ಣಿಂದ ಸಕಲ ದರುಶನಗಳೆಲ್ಲ
ಮಣ್ಣಿಂದ ಸಕಲ ವಸ್ತುಗಳೆಲ್ಲ
ಮಣ್ಣು ಬಿಟ್ಟವರಿಗೆ ಆಧಾರವಿಲ್ಲ
ಅಣ್ಣಗಳಿರೆಲ್ಲರು ಕೇಳಿರಯ್ಯಾ || ಅ. ಪ. ||
ಅನ್ನ ಉದಕ ಊಟವೀಯೋದು ಮಣ್ಣು
ಬಣ್ಣ ಭಂಗಾರ ಬೊಕ್ಕಸವೆಲ್ಲ ಮಣ್ಣು ||
ಉನ್ನಂತವಾದ ಪರ್ವತವೆಲ್ಲ ಮಣ್ಣು
ಕಣ್ಣು ಮೂರುಳ್ಳನ ಕೈಲಾಸ ಮಣ್ಣು || ೧ ||
ದೇವರಗುಡಿ ಮಠ ಮನೆಯೆಲ್ಲ ಮಣ್ಣು
ಆವಾಗ ಆಡುವ ಮಡಿಕೆಯು ತಾ ಮಣ್ಣು ||
ಕೋವಿದರಸರ ಕೋಟೆಗಳೆಲ್ಲ ಮಣ್ಣು
ಪಾವನಗಂಗೆಯ ತಡಿಯೆಲ್ಲ ಮಣ್ಣು || ೨ ||
ಭತ್ತ ಭರಣ ಧಾನ್ಯ ಬೆಳೆವುದೇ ಮಣ್ಣು
ಸತ್ತವರನು ಹೂಳಿ ಸುಡುವದೇ ಮಣ್ಣು ||
ಉತ್ತಮವಾದ ವೈಕುಂಠವೇ ಮಣ್ಣು
ಮತ್ತೆ ಪುರಂದರವಿಠಲನ ಪುರವೆಲ್ಲ ಮಣ್ಣು || ೩ ||

## ೧೯೨. ಯಾವುದೂ ಸ್ಥಿರವಲ್ಲ

ಸೌರಾಷ್ಟ್ರ ರಾಗ ಅಟತಾಳ

ನೆಚ್ಚದಿರೀ ಭಾಗ್ಯ ಯಾರಿಗೂ ಸ್ಥಿರವಲ್ಲ ನಿಶ್ಚಯವೆಚ್ಚರಿಕೆ
ಹೆಚ್ಚದೆ ಹಿಗ್ಗದೆ ಇದ್ದರೆ ಲೋಕಕ್ಕೆ ಮೆಚ್ಚು ಕೇಳೆಚ್ಚರಿಕೆ || ಪ ||
ದೊರೆಗಳೊಲುಮೆ ಉಟಿಂದೆಲ್ಲರೊಳು ಹಗೆ ಥರವಲ್ಲ ಎಚ್ಚರಿಕೆ
ಉರಗನ ಕಟ್ಟಿರುವೆಯು ಮುತ್ತಿ ತೋರದ ತೆರನಪ್ಪುದೆಚ್ಚರಿಕೆ ||
ಕರವ ಮುಗಿದು ಸಜ್ಜನರಿಗೆ ಶಿರವಾಗಿ ಚರಿಸುತಿರೆಚ್ಚರಿಕೆ
ಸಿರಿಯೆಂಬ ಮಾನ್ಯದ ಸೊಡರಿಗೆ ಅವಮಾನ ಬಿರುಗಾಳಿ ಎಚ್ಚರಿಕೆ || ೧ ||
ಪೊಡವಿಪರೊಲುಮೆ ಸುಸ್ಥಿರವೆಂದು ಗರ್ವದಿ ನಡೆಯದಿರೆಚ್ಚರಿಕೆ
ಕೊಡವನಂಧಕ ಪೊತ್ತು ನಡೆದಂತೆ ಅಧಿಕಾರ ಕಡೆಹೊಲ್ಲದೆಚ್ಚರಿಕೆ ||
ಬಡವರ ನುಡಿಗಳ ಕೇಳದೆ ಮುಂದ್ದೆಜ್ಜೆ ಇಡಬೇಡೆಚ್ಚರಿಕೆ
ಕಡುಚಪಲನು ನಾನೆನುತ ಪರರ ಅವಘಡಿಸಬೇಡೆಚ್ಚರಿಕೆ || ೨ ||
ಲೋಕಾಪವಾದಕ್ಕೆ ಅಂಜಿ ನಡೆವುದು ವಿವೇಕ ಕೇಳೆಚ್ಚರಿಕೆ
ನಾಕೇಶಗಾದರು ಬಿಡದಪಕೀರ್ತಿ ಪರಾಕು ಕೇಳೆಚ್ಚರಿಕೆ ||
ಕಾಕು ಮನುಜರ ಚಾಡಿಯ ಕೇಳಿ ಕೋಪೋದ್ರೇಕ ಬೇಡೆಚ್ಚರಿಕೆ
ಭೂಕಾಂತೆ ನಡನಡುಗುವಳು ನಿಷ್ಠುರವಾದ ವಾಕು ಬೇಡೆಚ್ಚರಿಕೆ || ೩ ||
ನಳಮಾಂಧಾತರೇನಾದರೆಂಬುದು ನೀ ತಿಳಿದು ನೋಡೆಚ್ಚರಿಕೆ
ಅಳಿವುದು ಕಾಯವು ಉಳಿವುದೊಂದೇ ಕೀರ್ತಿ ಇಳೆಯೊಳು ಎಚ್ಚರಿಕೆ ||
ಅಳಲಿಸಿ ಪರರನ್ನು ಘಳಿಸಿದಂಥ ಹೊನ್ನು ಉಳಿಯದು ಎಚ್ಚರಿಕೆ
ಉಳಿದಲ್ಪಕಾಲಕೆ ಬಡವರಾದವರನ್ನು ಪಳಿಯದಿರೆಚ್ಚರಿಕೆ || ೪ ||
ಪರಧನ ಪರಸತಿಗಳುಪಲು ಸಿರಿಮೊಗ ತಿರುಹುವಳೆಚ್ಚರಿಕೆ ||
ಬರುವ ಹಾನಿ ವೃದ್ಧಿ ತನ್ನ ಕಾಲವ ವಿಚಾರಲರಿಯದು ಎಚ್ಚರಿಕೆ ||
ನೆರೆ ಛಿದ್ರ ಕುಂಭದುದಕದಂತಾಯುಷ್ಯ ಸರಿವುದು ಎಚ್ಚರಿಕೆ
ವರದ ಶ್ರೀ ಪು ರಂ ದ ರ ವಿ ಠ ಲ ನ ಚರಣವ ನೆರೆನಂಬಿರೆಚ್ಚರಿಕೆ || ೫ ||

## ೧೯೩. ಜಗತ್ತಿನ ರೀತಿ

ಮುಖಾರಿ ರಾಗ ಅಟತಾಳ

ಕಾಳ ಬೆಳದಿಂಗಳು ಈ ಸಂಸಾರ, ಕತ್ತಲೆ ಬೆಳದಿಂಗಳು || ಪ ||
ಉಂಟಾದ ಕಾಲಕ್ಕೆ ನೆಂಟರು ಇಷ್ಟರು

ಬಂಟರಾಗಿ ಬಂದು ಬಾಗಿಲ ಕಾಯ್ವರು ||
ಉಂಟಾದ ದಿನ ತಪ್ಪಿ ಬಡತನ ಬಂದರೆ
ಒಂಟಿ ಹಾಂಗೆ ಕತ್ತ ಮೇಲಕೆತ್ತುವರು || ೧ ||
ಹೆಡಿಗೇ ಭಕ್ಷ್ಯಕ್ಕೆ ಗಡಿಗೇ ತುಪ್ಪವಿಕ್ಕಿ
ಸಡಗರದಿಂದುಂಬೊ ಸರಿನೆಂಟರು ||
ಸಡಗರ ದಿನ ತಪ್ಪಿ ಬಡತನ ಬಂದರೆ
ಸುಡುನುಡಿಗಳನಾಡಿ ನಡಿ ನಡಿ ಎಂಬೋರೊ || ೨ ||
ಏರುವ ಪಲ್ಲಕ್ಕಿ ಅಂದಣದಂಡಿಗೆ
ಮೂರು ದಿನದ ಭಾಗ್ಯ ಝುಣಝುಣವು ||
ನೂರಾರು ಸಾವಿರ ದಂಡವ ಕೊಟ್ಟರೆ
ರಂ ಗ ವಿ ಠ್ಠ ಲ ಗೆ ಸರಿಯೆಂಬೋರಯ್ಯಾ || ೩ ||

## ೧೯೪. ಜಗತ್ತಿನಲ್ಲಿ ನಡೆದುದು

ಶಂಕರಾಭರಣ ರಾಗ ಅಟತಾಳ

ಕೇಶವನೊಲಿಮೆಯಾಗುವನಕ ಹರಿ
ದಾಸರೊಳಿರು ಸದಾ ಹೇಮನುಜಾ || ಪ ||
ಕ್ಲೇಶಪಾಶಂಗಳ ಹರಿದು ವಿಲಾಸದಿ
ಶ್ರೀಶನ ನುತಿಗಳ ಪೊಗುಳುತ ಮನದೊಳು || ಅ. ಪ. ||
ಮೋಸದಿ ಜೀವರ ಘಾಸಿ ಮಾಡಿದ ಪಾಪ
ಕಾಶಿಗೆ ಹೋದರೆ ಹೋದೀತೆ ||
ಶ್ರೀಶನ ಭಕುತರ ದೂಷಿಸಿದ ಫಲ
ಕಾಸು ಕೊಟ್ಟರೆ ಪೋದೀತೇ ||
ಭಾಷೆಯ ಕೊಟ್ಟು ನಿರಾಶೆ ಮಾಡಿದ ಫಲ
ಕ್ಲೇಶಗೊಳಿಸದೆ ಇದ್ದೀತೆ ||
ಭೂಸುರರ ಸ್ವವ ಹ್ರಾಸಮಾಡಿದ ಫಲ
ವಿಸೇಸು ಜನುಮಕೂ ಬಿಟ್ಟೀತೇ || ೧ ||
ದೀನನ ವಶದೊಳು ನಾನಾ ದ್ರವ್ಯವಿರೆ
ದಾನಧರ್ಮಕೆ ಮನಸಾದೀತೆ ||

ಹೀನ ಮನುಜನಿಗೆ ಜ್ಞಾನವ ಬೋಧಿಸೆ
ಹೀನ ವಿಷಯವಳಿದ್ಹೋದೀತೆ ||
ಮಾನಿನಿ ಮನಸು ನಿಧಾನವು ಇರದಿರೆ
ಮಾನಾಭಿಮಾನವು ಉಳಿದೀತೆ ||
ಭಾನುವಿಕಾಸ ಶ್ರೀಹರಿಯ ಭಜಿಸದಲೆ
ಹೀನ ಭವಭವಣೆ ಅಳಿದೀತೇ || ೨ ||

ನ್ಯಾಯಬಿಟ್ಟ ನ್ಯಾಯವ ಪೇಳುವ | ನ್ಯಾಯಿಗೆ ನರಕವು ತಪ್ಪೀತೆ ||
ತಾಯಿ ತಂದೆಗಳ ನೋಯಿಸಿದ-
ನ್ಯಾಯಿಗೆ ಮುಕುತಿಯು ದೊರಕೀತೇ ||
ಬಾಯಿ ಕೊಬ್ಬಿ ಬಯ್ಯುವ ಮನುಜಗೆ
ಘಾಯವು ಆಗದೆ ಬಿಟ್ಟೀತೆ ||
ಮಾಯಾವಾದಗಳ ಬೋಧಿಪ ಮನುಜಗೆ
ಹೇಯ ನರಕವು ತಪ್ಪೀತೇ || ೩ ||

ಸತ್ಯದ ಧರ್ಮವ ನಿತ್ಯದಿ ಬೋಧಿಸೆ
ತೊತ್ತಿನ ಮನಸಿಗೆ ಸೊಗಸೀತೆ ||
ತತ್ವದ ಅರ್ಥ ಸಚಿತ್ರದಿ ಪೇಳಲು
ಕತ್ತೆಯ ಚಿತ್ತಕೆ ತಿಳಿದೀತೇ ||
ಪುತ್ಥಳಿ ಬೊಂಬೆಯ ಚಿತ್ರದಿ ಬರೆದರೆ
ಮುತ್ತನು ಕೊಟ್ಟರೆ ನುಡಿದೀತೇ ||
ಕಸ್ತುರಿ ತಿಲಕವನೊತ್ತಿ ಫಣೆಯೊಳಿಡೆ
ಅರ್ತಿಯು ತೋರದೆ ಇದ್ದೀತೇ || ೪ ||
ಸಾಧುಸಜ್ಜನರ ಬಂಧಿಸುತಲಿ ಬಲು
ವೇದಿಪನಿಗೆ ದೋಷ ತಪ್ಪೀತೇ ||
ಬಾಧಿಸಿ ಬಡವರ ಅರ್ಥವನೊಯ್ವಗೆ | ವ್ಯಾಧಿಭೋಗವು ಬಿಟ್ಟೀತೇ ||
ಮೇದಿನಿಯೊಳು ಬಹು ಕ್ಷುದ್ರವ ಕಲಿತರೆ
ವೇದವು ಎಂದಿಗು ಆದೀತೇ ||
ಓದಿ ಕುತರ್ಕವ ವಾದಿಸಿ ಸಭೆಯಲಿ
ವೇಧಿಸುವಗೆ ಸುಖವಾದೀತೇ || ೫ ||

ಅಂಗಜ ವಿಷಯಗಳನು ತೊರೆದಾತಗೆ
ಅಂಗನೆಯರ ರತಿ ಸೊಗಸೀತೇ ||
ಸಂಗ ದುಃಖಗಳ ಹಿಂಗಿದ ಮನುಜಗೆ
ಶೃಂಗಾರದ ಬಗ್ಗೆ ಸೊಗಸೀತೇ ||
ಇಂಗಿತವರಿಯುವ ಸಂಗಿ ಶರೀರ ವ-
ಜ್ರಾಂಗಿಯಾಗದೆ ತಾನಿದ್ದೀತೇ ||
ಮಂಗಳಮಹಿಮನ ಅಂಘ್ರಿಯ ಕಾಣದ
ಭಂಗಗೆ ಮುಕುತಿಯು ದೊರಕೀತೇ || ೬ ||
ಕರುಣಾಮೃತದಾಭರಣವ ಧರಿಸಿದ
ಪರಮಗೆ ಸರಗಳಿದಿರಾದೀತೇ ||
ಕರಣಪಾಶದುರವಣು ತೊರೆದಾತಗೆ ಶರಣಪದ್ಧತಿ ತಪ್ಪಿತೇ ||
ಅರಿತು ಶಾಸ್ತ್ರವನಾಚರಿಪ ಯೋಗಿಗೆ
ಗುರು ಉಪದೇಶವು ತಪ್ಪೀತೇ ||
ವರದ ವೇಲಾಪುರ ಚನ್ನಕೇಶವನ
ಸ್ಮರಿಸುವವನಿಗೆ ಮೋಕ್ಷ ತಪ್ಪೀತೇ || ೭ ||

## ೧೯೫. ಎಲ್ಲರೂ ದುರ್ಬಲ ಘಾತಕರು

ಕಾಂಬೋಧಿ ರಾಗ ಝಂಪೆತಾಳ

ಶಕ್ತನಾದರೆ ನೆಂಟರೆಲ್ಲ ಹಿತರು ಅ-
ಶಕ್ತನಾದರೆ ಆಪ್ತಜನರೆ ವೈರಿಗಳು || ಪ ||
ಕಮಲಾರ್ಕನಿಗೆ ನಿರುತ ಕಡು ನಂಟತನವೆಂದು
ಕಮಲಜಲದೊಳಗೆ ತಾನಾಡುತಿರಲು ||
ಕ್ರಮಗೆಟ್ಟು ನೀರಿನಿಂದ ತಡಿಗೆ ಬೀಳಲು ರವಿಯ
ಅಮಿತ ಕಿರಣಗಳಿಂದ ಕಂದಿ ಹೋಗುವದೂ || ೧ ||
ವನವ ಸುಡುವಾಗ ಅಗ್ನಿಗೆ ವಾಯು ತಾ ಸೋಂಕೆ
ಘನ ಪ್ರಜ್ವಲಿಸುತಿಹುದು ಗಗನಕಡರಿ ||
ಮನೆಯೊಳಿಹ ದೀಪಕೆ ಮಾರುತನು ಸೋಂಕಲು
ಘನಶಕ್ತಿ ಕ್ಷಯಗೊಂಡು ಕುಂದಿಹೋಗುವದು || ೨ ||

ಭುಜಗವರಶಾಯಿ ಪು ರಂ ದ ರ ವಿ ಠ ಲ ಒಲಿದಿರಲು
ಭಜಿಪಂಗೆ ಸರ್ವಜನರೆಲ್ಲ ಹಿತರೂ ||
ಗಜವ ಕಾಯ್ದ ಹರಿಯ ಕರುಣ ತಪ್ಪಿದ ಮೇಲೆ
ಮುಜ್ಜಗದಿ ಮೊರೆಯಿಡಲು ಕಾಯ್ವರಾರೂ || ೩ ||

## ೧೯೬. ಹಣದ ಗುಣ

ಸುರಟ ರಾಗ ಛಾಪುತಾಳ

ಹಣವೇ ನಿನ್ನಯ ಗುಣವೆನಿತು ಬಣ್ಣಿಪೆನಯ್ಯ
ಹಣವಿಲ್ಲದವನೊಬ್ಬ ಹೆಣಕಿಂತ ಕಡೆಯಯ್ಯ || ಪ ||
ಬೆಲೆಯಾಗದನೆಲ್ಲ ಬೆಲೆಯ ಮಾಡಿಸುವಿ
ಎಲ್ಲಾ ವಸ್ತುಗಳನ್ನು ಇದ್ದಲ್ಲೆ ತರಿಸುವಿ
ಕುಲಗೆಟ್ಟವರ ಸತ್ಕುಲಕೆ ಸೇರಿಸುವಿ
ಹೊಲೆಯನಾದರು ತಂದು ಒಳಗೆ ಸೇರಿಸುವಿ || ೧ ||
ಅಂಗನೆಯರ ಸಂಗವನು ಮಾಡಿಸುವಿ
ಶೃಂಗಾರಾಭರಣಂಗಳ ತರಿಸುವಿ ಮಂಗನಾದರು ಅನಂಗನೆಂದೆನಿಸುವಿ
ಕಂಗಳಿಲ್ಲದವಂಗೆ ಮಗಳ ಕೊಡಿಸುವಿ || ೨ ||
ಹರಣಕ್ಕೆ ಬಂದಂಥ ದುರಿತವ ಬಿಡಿಸುವಿ
ಪರುವರಿಗೆ ಶ್ರೇಷ್ಠನರನೆನಿಸುವಿ
ಅರಿಯದ ಶುಂಠನ ಅರಿತವನೆನಿಸುವಿ
ಸಿರಿ ಹ ಯ ವ ದ ನ ನ ಸ್ಮರಣೆ ಮರೆಯಿಸುವಿ || ೩ ||

## ೧೯೭. ರೊಕ್ಕದ ಮಹಿಮೆ

ಪಂತುರಾವಳಿ ರಾಗ ಮಟ್ಟೆತಾಳ

ರೊಕ್ಕವರಡಕ್ಕು ದುಃಖ ಕಾಣಕ್ಕ
ಮಕ್ಕಳ ಮರಿಗಳ ಮರೆಸೋದೆ ರೊಕ್ಕ
ಸಕ್ಕರೆ ತುಪ್ಪವ ಸವಿಸೋದೆ ರೊಕ್ಕ ||
ಕಕ್ಕುಲಿತೆಯ ಬಹು ಬಡಿಸೋದು ರೊಕ್ಕ
ಫಕ್ಕನೆ ಹೋದರೆ ಘಾತ ಕಾಣಕ್ಕ || ೧ ||

ನೆಂಟರ ಇಷ್ಟರ ಇರಿಸೋದು ರೊಕ್ಕ
ಕಂಟಕಗಳ ಪರಿಹರಿಸೋದು ರೊಕ್ಕ ||
ಗಂಟ ಕಟ್ಟಲಿಕ್ಕೆ ಕಲಿಸೋದು ರೊಕ್ಕ
ತುಂಟತನಗಳನು ಬಲಿಸೋದು ರೊಕ್ಕ || ೧ ||
ಇಲ್ಲದ ಗುಣಗಳ ಬರಿಸೋದು ರೊಕ್ಕ
ಬಲ್ಲಿದನಿವನೆನಿಸೋದು ರೊಕ್ಕ
ಸಲ್ಲದ ಮಾತನು ನುಡಿಸೋದು ರೊಕ್ಕ
ಇಲ್ಲದಿರಲು ಬಹು ದುಃಖ ಕಾಣಕ್ಕ || ೨ ||
ಉಂಟಾದ ಗುಣಗಳ ಮೆರಿಸೋದು ರೊಕ್ಕ
ಬಂಟರನೆಲ್ಲರ ಕರೆಸೋದು ರೊಕ್ಕ
ಒಂಟೆಕುದುರೆ ಆನೆ ತರಿಸೋದು ರೊಕ್ಕ
ಸೊಂಟಕಟ್ಟಿ ಮುಂದೆ ನಿಲಿಸೋದು ರೊಕ್ಕ || ೩ ||
ವಿದ್ಯೆಯ ಮನುಜರ ತರಿಸೋದು ರೊಕ್ಕ
ಪೊದ್ದಿದ ಜನರನು ಬಿಡಿಸೋದು ರೊಕ್ಕ
ಮುದ್ದು ಪುರಂದರವಿಠಲನ ಮರೆಸುವ
ಬಿದ್ದೋಗೊ ರೊಕ್ಕವ ಸುಡು ನೀನಕ್ಕ || ೪ ||

## ೨೧. ರೀತಿನೀತಿಗಳು



ಜಗತ್ತು ಈ ತರಹದ್ದಿದೆ, ಎಂದು ಹೇಳಿ ಸುಮ್ಮನಿದ್ದು ಉಪಯೋಗ ವೇನು ? ಈ ಬಗೆಯ ಜಗತ್ತಿನಲ್ಲಿ ನಾವು ಹೇಗೆ, ಯಾವ ರೀತಿ ನಡೆದುಕೊಳ್ಳ ಬೇಕು ಎಂಬುದು ಮಹತ್ತ್ವದ ಪ್ರಶ್ನೆಯು. ಆ ರೀತಿನೀತಿಗಳನ್ನು ಕುರಿತು ಈ ಕೆಳಗೆ ಹಲವು ಪದ್ಯಗಳನ್ನು ಕೊಟ್ಟಿದ್ದೇವೆ. ಅವುಗಳನ್ನು ಚನ್ನಾಗಿ ಪರಿಕಿಸಿ ನೋಡಿದರೆ ಹರಿದಾಸರ ಅನುಭವ ಹಾಗೂ ಸೂಕ್ಷ್ಮವ್ಯವಹಾರಿಕ ವಿಚಾರಗಳು ನಮ್ಮ ಕಣ್ಣಿಗೆ ಬೀಳುವವು.

### ೧೯೮. ನಾವು ಹೇಗೆ ಇರಬೇಕು ?

ಕಾಂಬೋಧಿ ರಾಗ ಝಂಪೆತಾಳ

ಇದು ಭಾಗ್ಯ ಇದು ಭಾಗ್ಯ ಇದು ಭಾಗ್ಯವಯ್ಯ || ಪ ||
ಪದುಮನಾಭನ ಪಾದ ಭಜನೆ ಸುಖವಯ್ಯ || ಅ. ಪ. ||
ಕಲ್ಲಾಗಿರಲುಬೇಕು ಕಠಿಣ ಭವತೊರೆಯೊಳಗೆ
ಬಿಲ್ಲಾಗಿರಲುಬೇಕು ಬಲ್ಲವರೊಳಗೆ ||
ಮೆಲ್ಲನೆ ಮಾಧವಗೆ ಮನವ ಮೆಚ್ಚಿಸಬೇಕು
ಬೆಲ್ಲವಾಗಲುಬೇಕು ಬಂಧುಜನರೊಳಗೇ || ೧ ||
ಬುದ್ಧಿಯಲಿ ತನುಮನವ ತಿದ್ದಿಕೊಳ್ಳಲುಬೇಕು
ಮುದ್ದಾಗಿ ಇರಬೇಕು ಮುನಿಯೋಗಿಗಳಿಗೆ ||
ಮಧ್ವಮತಾಬ್ಧಿಯೊಳು ಮೀನವಾಗಿರಬೇಕು
ಶುದ್ಧನಾಗಲುಬೇಕು ಕರಣತ್ರಯಗಳಲಿ || ೨ ||
ವಿಷಯಭೋಗದ ತೃಣಕೆ ಉರಿಯಾಗಿರಲುಬೇಕು
ನಿಶಿಹಗಲು ಶ್ರೀಹರಿಯ ನೆನೆಯಬೇಕು ||
ವಸುಧೀಶ ಪು ರಂ ದ ರ ವಿ ಠ್ಠ ಲ ರಾಯನ
ಹಸನಾದ ದಾಸರ ಸೇವಿಸಲುಬೇಕು

## ೧೯೯. ನರನು ಹೇಗಿರಬೇಕು ?

ಮುಖಾರಿ ರಾಗ ಆದಿತಾಳ

ನರನಾದಮೇಲೆ ಹರಿನಾಮ ಜಿಹ್ವೆಯೊಳಿರಬೇಕು || ಪ ||
ಭೂತದಯಾಪರನಾಗಿರಬೇಕು
ಪಾತಕವೆಲ್ಲವ ಕಳೆಯಬೇಕು ||
ಮಾತುಮಾತಿಗೆ ಹರಿಯೆನಬೇಕು || ೧ ||
ಶಾಂತಿ ಶಮ ದಮ ಹಿಡಿಯಲುಬೇಕು
ಭ್ರಾಂತಿ ಅವಗುಣ ಕಳೆಯಲುಬೇಕು ||
ಸಂತತ ಸನ್ಮಾರ್ಗದಲ್ಲಿ ಇರಲುಬೇಕು || ೨ ||
ಕಾಮಕ್ರೋಧವ ತಾ ಬಿಡಬೇಕು
ಮಮತೆ ಅಹಂಕಾರವ ನೀಗಲುಬೇಕು ||
ಸೌಮ್ಯರ ಸಂಗದೊಳಿರಲುಬೇಕು || ೩ ||
ವೇದಶಾಸ್ತ್ರವನೋದಲುಬೇಕು
ಬೋಧತತ್ವವ ತಿಳಿಯಲುಬೇಕು ||
ಮಾಧವನ ಸ್ಮರಣೆಯ ಮಾಡಲುಬೇಕು || ೪ ||
ತಂದೆ ಕೃಷ್ಣನ ದಯಾ ಪಡೆಯಬೇಕು
ಬಂದದುಂಡು ಸುಖಪಡಬೇಕು ||
ಚಂದವಾಗಿ ಜಗದೊಳಿರಬೇಕು || ೫ ||

## ೨೦೦. ಎಂಥ ಸ್ನಾನವ ಮಾಡಬೇಕು ?

ಪೂರ್ವಿ ರಾಗ ಅಟತಾಳ

ಸ್ನಾನವ ಮಾಡಿರೊ ಜ್ಞಾನತೀರ್ಥದಲಿ || ಪ ||
ನಾನು ನೀನೆಂಬ ಅಹಂಕಾರವ ಬಿಟ್ಟು || ಅ. ಪ. ||
ತಂದೆತಾಯ್ಗಳ ವಂದಿಸಲೊಂದು ಸ್ನಾನ
ಬಂಧನದವರ ಬಿಡಿಸಲೊಂದು ಸ್ನಾನ ||
ಮುಂದಣ ಮಾರ್ಗವ ನೋಡುವದೊಂದು ಸ್ನಾನ
ಇಂದಿರೇಶನ ಧ್ಯಾನವೇ ಗಂಗಾಸ್ನಾನಾ || ೧ ||

ಪರಸತಿಯ ಬಯಸದಿದ್ದರೆ ಒಂದು ಸ್ನಾನ
ಪರರ ನಿಂದಿಸದಿರುವದು ಒಂದು ಸ್ನಾನ
ಪರರೊಡವೆಯಪಹರಿಸದಡೊಂದು ಸ್ನಾನ
ಪರತತ್ವ ತಿಳಿದುಕೊಂಡರೆ ಗಂಗಾಸ್ನಾನಾ || ೨ ||
ತನ್ನೊಳು ತಾನೇ ತಿಳಿದರೊಂದು ಸ್ನಾನ
ಅನ್ಯಾಯ ನುಡಿಯದಿದ್ದರೆ ಒಂದು ಸ್ನಾನ
ಅನ್ಯಾಯವಮಾಡದಿರಲು ಒಂದು ಸ್ನಾನ
ಚನ್ನಾಗಿ ಹರಿಯ ನೆನೆಯೆ ಗಂಗಾಸ್ನಾನಾ || ೩ ||
ಸುಕ್ಷೇತ್ರದಲಿ ವಂದಿಸಲೊಂದು ಸ್ನಾನ ಉ-
ಪೇಕ್ಷೆಯ ಮಾಡದಿರುವದೊಂದು ಸ್ನಾನ
ಅಕ್ಷಿದೋಷವ ಭೇದಿಸಲದೊಂದು ಸ್ನಾನ
ಲಕ್ಷ್ಮೀಪತಿಯ ಧ್ಯಾನವೆ ಗಂಗಾಸ್ನಾನಾ || ೪ ||
ವೇದಶಾಸ್ತ್ರವನೋದುವದೊಂದು ಸ್ನಾನ
ಭೇದಾಭೇದವ ತಿಳಿದರೊಂದು ಸ್ನಾನ
ಸಾಧು ಸಜ್ಜನರ ಸಂಗವೆ ಒಂದು ಸ್ನಾನ
ಧ್ಯಾನವೇ ಪು ರಂ ದ ರ ವಿ ಠ ಲ ನ ದೆ ಗಂಗಾ ಸ್ನಾನಾ || ೫ ||

## ೨೦೧. ಧರ್ಮದಿಂದಲೇ ಜಯ

ಕಾಂಬೋಧಿ ರಾಗ ಝಂಪೆತಾಳ

ಧರ್ಮವೇ ಜಯವೆಂಬ ದಿವ್ಯಮಂತ್ರ
ಮರ್ಮವನು ತಿಳಿದು ಆಚರಿಸುವದು ಕೇಳು || ಪ ||
ವಿಷವನುಣಿಸಿದವಗೆ ಷಡ್ರಸವನುಣಿಸಲು ಬೇಕು
ಅಸೂಯೆಪಡುವವನ ಪೋಷಿಸಲು ಬೇಕು |
ಹುಸಿದು ಮನೆಕೊಂಬುವನ ಹಾಡಿಹರಸಲು ಬೇಕು
ಅಸಿಯಲಿರಿದವನ ಮುಗನ್ಹೊಸರಿಡಲು ಬೇಕು || ೧ ||
ಎಂದಿಗೂ ಸೇರದವನ ಹಾಡಿಹರಸಲು ಬೇಕು
ಕೊಂದವನ ಗೆಳೆತನವ ಮಾಡಬೇಕು |
ಹಿಂದೆ ನಿಂದಿಸುವವನ ವಂದಿಸುತ್ತಿರಬೇಕು
ಬಂಧನದೊಳಿದ್ದವನ ಬಿಡಿಸಬೇಕು || ೨ ||

ಕೊಂಡೊಯ್ದು ಕೊಲಿಸುವರ ಕೊಂಡಾಡುತಿರಬೇಕು
ಕಂಡರಾಗದವನ ಹೊಗಳಬೇಕು ||
ಕಂಡು ಭಜಿಸಿರೊ ನಮ್ಮ ಪು ರಂ ದ ರ ವಿ ಠ ಲ ನ್ನ
ಅ-ಖಂಡ ಮಹಿಮೆಯನರಿತು ಅರಿಯದಿರಬೇಕು || ೩ ||

## ೨೦೨. ನೀತಿಯ ಮಾತು

ಮೋಹನ ರಾಗ ಝಂಪೆತಾಳ

ಅಜ್ಞಾನಿಗಳ ಕೂಡ ಅಧಿಕ ಸ್ನೇಹದಕ್ಕಿಂತ
ಸುಜ್ಞಾನಿಗಳ ಕೂಡ ಜಗಳವೇ ಲೇಸು || ಪ ||
ಉಂಬುಡುವುದಕ್ಕಿರದ ಅರಸನೋಲಗಕಿಂತ
ತುಂಬಿದೂರೊಳಗೆ ತಿರಿದುಂಬುವದೇ ಲೇಸು ||
ಹಂಬಲಿಸಿ ಹಾಳು ಹರಟೆಗಳ ಹರಟೇಗಿಂತ
ನಂಬಿ ಹರಿದಾಸರೊಳು ಪೊಂದುವದೆ ಲೇಸು || ೧ ||
ಒಡನೆ ಹಂಗಿಸುವವನ ಪಾಲೋಗರದಕಿಂತ
ಕುಡಿನೀರು ಕುಡಿದುಕೊಂಡಿರುವದೇ ಲೇಸು ||
ಕಡು ಕುಹಕನೊಡನೆ ಸಂಗವ ಮಾಡುವದಕಿಂತ
ಅಡವಿಯೋಳಜ್ಞಾತವಾಸವೇ ಲೇಸು || ೨ ||
ಮುಸದು ಮತ್ಸರಿಪ ಸತಿಯೊಡನೆ ಸಂಸಾರಕಿಂತ
ಹಸನಿಲ್ಲದಾ ಹಾಳು ಗುಡಿಯೇ ಲೇಸು ||
ಎಸೆದು ಭಜಿಸಲು ನಮ್ಮ ಪು ರಂ ದ ರ ವಿ ಠ ಲ ನ್ನ
ವಶವಹಗೆ ಮುಕ್ತಿಯು ವಶವಹುದೆ ಕೇಳಿ || ೩ ||

## ೨೦೩. ಮಾವನ ಮನೆ

ಕಾಂಬೋಧಿ ರಾಗ ರೂಪಕತಾಳ

ಮಾವನ ಮನೆಯೊಳಗೆ ಇರಬಹುದೆ ಕೋವಿದರು || ಪ ||
ಹಾವು ಹಿಡಿಯಲುಬಹುದು ಹರನ ನೋಡಲುಬಹುದು
ಬೇವನಕಿಚ್ಚನು ಹಿಡಿದು ನುಂಗಬಹುದು ||
ಭಾವೆಯುಳ ತಂದೆ ಮನೆಯಲ್ಲಿ ಜೀವಿಪದಕಿಂತ
ಸಾಯ್ವುದೇ ಲೇಸು ಅಭಿಮಾನಿಗಳಿಗೆ || ೧ ||

ಪರರ ಸೇರಲುಬಹುದು ಪತಿತರಲ್ಲಿರಬಹುದು
ಕೊಲೆಪಾತಕರ ರಸಕೆ ಸೆರಗೊಡ್ಡಬಹುದು ||
ತರುಣಿಯುಳ ಎಳೆತಂದ ಮನೆಯ ವಾಸದಕಿಂತ
ತರುಗಿರಿ ಗುಹದಿ ಇದ್ದು ಜೀವಿಸಲುಬಹುದು || ೨ ||
ಮಾವ ಅತ್ತೆಯು ನೊಂದು ಅತ್ತಿಗೆಯು ತಾ ಜರೆದು
ಹ್ಯಾವ ನಾನಿಕ್ಕಿ ಚೂರ್ಣವ ಮಾಡಲು ||
ಯಾವಾಗ ನೋಡಿದರು ಎನಗೆ ಹಿತರಿಲ್ಲೆಂದು
ಮಾವ ಹೊರನಾಡುವನು ಚಿಕ್ಕ ನುಡಿಗಳನು || ೩ ||
ಬಂದೊಂದು ತಿಂಗಳು ಬಹುಮಾನ ನಡತೆಗಳು
ಬಂದೆರಡು ತಿಂಗಳೊಳಗೆ ಹಿತವಾದನಾ ||
ಒಂದೊಂದ ಪದ್ಧನುಡಿ ಒಳಒಳಗೆ ಹುಟ್ಟಿದವು
ಸಂದೇಹವು ಏಕೆ ಸಂಸಾರಿಗಳಿಗೆ || ೪ ||
ಈ ಪರಿಯಲುಂಬಂಥ ಅಳಿಯ ಭೋಜನಕಿಂತ
ಗೋಪಾಳವೇ ಲೇಸು ಅಭಿಮಾನಿಗಳಿಗೆ ||
ಶ್ರೀಪತಿ ಕಾ ಗಿ ನೆ ಲೆ ಯಾ ದಿ ಕೇ ಶ ವ ನ ಚರಣ ಬ–
ಹೂ ಪರಿಯಲಿ ಭಜಿಸಿ ಸುಖಿಯಾಗು ಮನವೇ || ೫ ||

# ೨೨. ಮನಸ್ಸಿಗುಪದೇಶ

ಸಾಧಕರು ಈ ನಮ್ಮ ಮನಸ್ಸಿಗೆ ಉಪದೇಶ ಕೊಟ್ಟು ಅದನ್ನು ಶುದ್ಧಗೊಳಿಸಿ ತನ್ಮುಖಾಂತರವೆ ಜ್ಞಾನಭಕ್ತಿಗಳ ಸಾಧನವನ್ನು ಮಾಡಬೇಕಾಗುವದು. ಮನಸ್ಸು ಮಂಗನಂತೆ ಅತಿಶಯ ಚಂಚಲವಾದುದು, ಅದು ಎಲ್ಲ ದಿಕ್ಕುಗಳಿಗೂ ಹರಿಯುವದು, ಅದನ್ನು ಏಕಾಗ್ರಮಾಡುವದು, ಕಟ್ಟುವದು, ಅತಿಶಯ ಕಠಿಣ ಎಂಬುದು ಎಲ್ಲರಿಗೂ ಗೊತ್ತಿದ್ದ ಮಾತು. ಆದುದರಿಂದ ಆ ಮನಸ್ಸನ್ನು ಬಿಗಿಹಿಡಿಯುವ ಬಗ್ಗೆ ದಾಸರು ಬಗೆಬಗೆಯಾಗಿ ಹೇಳಿರುವರು. ಈ ವಿಷಯವನ್ನು ಕುರಿತು ಅವರು ಕಟ್ಟಿದ ಅನೇಕ ಪದ್ಯಗಳಲ್ಲಿ ಹಲವನ್ನು ಇಲ್ಲಿ ಆಯ್ದುಕೊಂಡಿದ್ದೇವೆ.

## ೨೦೪. ಚಂಚಲ ಮನಸು

ಕೇದಾರಗೌಳ ರಾಗ ಝಂಪೆತಾಳ

ಮನಸು ನಿಲಿಸುವದು ಬಹಳ ಕಷ್ಟ || ಪ ||
ಗುಣಿಸುವದು ನಿಮ್ಮೊಳಗೆ ನೀವು ನೆರೆ ಬಲ್ಲವರು || ಅ. ಪ. ||
ಮುರಿದೋಡಿ ಬರುವ ರಣರಂಗ ನಿಲಿಸಬಹುದು
ಹರಿವ ನದಿಗಳನು ತಿರುಗಿಸಲುಬಹುದು ||
ಕರಿಸೊಕ್ಕಿ ಬರುತಿರಲು ತಡೆದು ನಿಲಿಸಲುಬಹುದು
ದುರುಳಮನ ನಿಲಿಸುವದು ಸುರರಿಗಳವಲ್ಲ || ೧ ||
ಭೈರವನ ದಾಡಿಯನು ಬಡಿದು ನಿಲಸಲುಬಹುದು
ಮಾರುತ ತರುಬಿ ನಿಲ್ಲಿಸಲುಬಹುದು ||
ಮಾರಿಗಳ ಮುಂಜೆರಗು ತುಡುಕಿ ನಿಲ್ಲಿಸಬಹುದು
ಹಾರಿಹಾರುವ ಮನಸು ನಿಲಿಸಲೆನ್ನಳವಲ್ಲ || ೨ ||
ಶರಧಿಗಳ ಭೋರ್ಗರೆವ ಧ್ವನಿಯ ನಿಲಿಸಲುಬಹುದು
ಸುರಿವ ಬಿರುಮಳೆಯನ್ನು ನಿಲಿಸಬಹುದು ||

ಹರಿ । ದೋಡುವ ಮನಸು ನಿಲಿಸೆನ್ನಳವಲ್ಲ
ಸಿರಿಯರಸ ವಿ ಜ ಯ ವಿ ಠ ಲ ತಾನೆ ಬಲ್ಲ || ೩ ||

## ೨೦೫. ಮನಸು ನಿರ್ಮಲಗೊಳಿಸಬೇಕು

ನಾದನಾಮಕ್ರಿಯಾ ರಾಗ ಛಾಪುತಾಳ

ಮನವಶೋಧಿಸಬೇಕು ನಿಚ್ಚಾ, ದಿನ-
ದಿನದಿ ಮಾಡುವ ಪಾಪಪುಣ್ಯದ ವೆಚ್ಚಾ || ಪ ||
ಧರ್ಮ ಅಧರ್ಮ ವಿಂಗಡಿಸಿ, ಅ-
ಧರ್ಮದ ನರಗಳ ಬೇರಕತ್ತರಿಸಿ ||
ನಿರ್ಮಲಾಚಾರದಿ ಬೆರಸಿ, ವರ-
ಬರ್ಮ ಮೂರುತಿ ಪಾದಕಮಲವ ಭಜಿಸಿ || ೧ ||
ಮನವ ಖಂಡಿಸಿ ಒಮ್ಮೆ ಮಾಣೋ, ನಿನ್ನ
ತನುವ ದಂಡಿಸಿ ಪರಮಾತ್ಮನ ಕಾಣೊ
ಕೊನೆಗೆ ನಿನ್ನೊಳಗೆ ನೀ ಜಾಣೊ, ಮುಕ್ತಿ
ನಿನಗೆ ದೂರಿಲ್ಲವೊ ಒಂದೇ ಗೇಣೋ || ೨ ||
ಆತನವರಿಗೆ ಕೇಡಿಲ್ಲ, ಅವ
ಪಾತಕ ಪತಿತ ಸಂಗವ ಮಾಡ್ವನಲ್ಲ ||
ನೀತಿವಂತರು ಕೇಳಿರೆಲ್ಲ, ನಮ
ಗಾತನೆಗತಿ ಈವ ಪು ರಂ ದ ರ ವಿ ಠ ಲಾ

## ೨೦೬. ಸ್ಥಿರಮನಸು ಇರಬೇಕು

ಪೂರ್ವಿ ರಾಗ ಛಾಪುತಾಳ

ನಿಶ್ಚಲಾಗಿರಬೇಕು ತಿಳಿದು || ಪ ||
ತಾ ನೆಚ್ಚಿಮಾಡುವ ಪಾಪರಾಶಿಗಳಳಿದು || ಅ. ಪ. ||
ಪಾಪವೆಂಬೊದು ಬೇರೆ ಇಹುದೇ, ತನ್ನ
ಕೋಪವಲ್ಲದೆ ಮತ್ತೆ ಹೊಸದಾಗಿಬಹುದೆ ||
ಅಪವರ್ಗಕ್ಕೆ ಮಾರ್ಗವಹುದೆ, ಬಲು
ತಪಸಿಯಾದರು ಸಾಧನವಹುದೇ || ೧ ||

ಪುಣ್ಯವೆಂಬೊದು ಬೇರೆಯಿಲ್ಲ, ನಾನಾ
ರಣ್ಯಚರಿಸಿದರು ದೊರಕುವದಲ್ಲಾ ||
ಮನ್ನ್ಯಬಿಡದೆ ಮತ್ತೊಂದಿಲ್ಲಾ, ನಿರುತ
ಅನ್ನದಾಸೆಯ ಪಡಲು ಗತಿಗಾವ ಸಲ್ಲಾ || ೨ ||
ವೈಕುಂಠವೆಂಬೋದೆ ಅಲ್ಲೆ, ಬರಿದೆ
ಲೌಕಿಕ ತೊರೆದರೆ ಇಪ್ಪೊದೆ ಇಲ್ಲೆ ||
ಈ ಕಲಿಯೊಳಗೆ ಈ ಸೊಲ್ಲೆ, ಒಲಿಸ
ಬೇಕಿನ್ನ ವಿಠಲ ನಾ ಓಡುವದು ಸೊಲ್ಲೆ || ೩ ||

## ೨೦೭. ಮನಸ್ಸಿಗುಪದೇಶ

ನೀಲಾಂಬರಿ ರಾಗ ಆದಿತಾಳ

ಯಾಕೆ ಚಿಂತಿಸುತಿದ್ದಿ ಕೋತಿ ಮನವೇ ನೀ
ಶ್ರೀಕೃಷ್ಣರಾಯನ ಸ್ತುತಿಸಲೊಲ್ಲದೆ || ಪ ||
ಹುಟ್ಟುವಾಗುತ್ಪತ್ತಿಗಾರು ಚಿಂತಿಸಿದರು
ಹೊಟ್ಟೆಯಿಂದಾಚೆಗೆ ಯಾರು ತಂದರು ||
ನಟ್ಟನಡುವಿನ ಬದುಕಿಗ್ಯಾಕೆ ಚಿಂತಿಸುತ್ತಿ
ಕಟ್ಟಕಡೆಯಲಿ ಮೂರು ಬಟ್ಟೆ ತಾನಲ್ಲದೆ || ೧ ||
ನವಿಲಿಗೆ ಚಿತ್ರಪತ್ರಗಳ್ಯಾರು ಬರೆದರು
ಹವಳದ ಸಲ್ಲತೆಗೆ ಕೆಂಪಾರಿತ್ತರು ||
ಸವಿಮಾತಿನ ಗಿಳಿಗೆ ಹಸುರಾರು ಬರೆದರು
ಇವು ಮಾಡಿದ ಕೃಷ್ಣನು ನಿನ್ನ ಮರೆತಿಹನೆ || ೨ ||
ಬಸುರೊಳಗಿಪ್ಪಾಗ ಶಿಶುವಾರು ಪೊರೆದರು
ವಸುಧೆಯ ಬಸಿರೊಳು ಯಾರ್ಪೇತ್ತರು ||
ವಸುದೇವಸುತ ನಮ್ಮ ಪು ರಂ ದ ರ ವಿ ಠ್ಠ ಲ ನ
ಪೆಸರ ಬಸಿರೋಳಿಟ್ಟು ಸ್ತುತಿಸುತಿರು ಮನವೆ || ೩ ||

## ೨೦೮. ತಾಳ್ಮೆ

ಕಾಂಬೋಧಿ ರಾಗ ಝುಂಪೆತಾಳ

ತಾಳುವಿಕೆಗಿಂತ ತಪವು ಇಲ್ಲ || ಪ ||
ಕೇಳಬಲ್ಲವರಿಗೆ ಹೇಳುವೆನು ಸೊಲ್ಲ || ಅ. ಪ. ||

ದುಷ್ಟ ಮನುಜರು ಪೇಳ್ವ ನಿಷ್ಠುರದ ನುಡಿ ತಾಳು
ಕಷ್ಟ ಬಂದರೆ ತಾಳು ಕಂಗೆಡದೆ ತಾಳು ||
ನೆಟ್ಟ ಸಸಿಫಲ ಬರುವತನಕ ಶಾಂತಿಯ ತಾಳು
ಕಟ್ಟು ಬುತ್ತಿಯ ಮುಂದೆ ಉಣಲುಂಟು ತಾಳು || ೧ ||
ಹಳಿದು ಹಂಗಿಸುವಂಥ ಹಗೆಯ ಮಾತನು ತಾಳು
ಸುಳಿನುಡಿ ಕುಹಕ ಕುಮಂತ್ರವನು ತಾಳು ||
ಅಳುಕದಲೆ ಬಿರಿಸು ಬಿಂಕದ ನುಡಿಯ ನೀ ತಾಳು
ಹಲಧರಾನುಜನನ್ನು ಹೃದಯದಲಿ ತಾಳು || ೨ ||
ನಕ್ಕು ನುಡಿವರ ಮುಂದೆ ಮುಕ್ಕರಿಸದೇ ತಾಳು
ಅಕ್ಕಸವ ಮಾಡುವರ ಅಕ್ಕರದಿ ತಾಳು
ಪಕ್ಷೀಶ ಹ ಯ ವ ದ ನ ಶರಣೆಂದು ಬಾಳು || ೩ ||

---

## ೨೩. ಕುಲವಿಚಾರ



ನಮ್ಮ ಸಮಾಜದಲ್ಲಿ ಈಗ ಜಾತಿಜಾತಿಗಳಲ್ಲಿ ಕುಲಕುಲಗಳಲ್ಲಿ ನೀಚೋಚ್ಚ ಭಾವವು, ದ್ವೇಷಾಸೂಯೆಗಳು ಕಂಡುಬರುವವು. ಇಲ್ಲಿ ದಾಸರು ವಚನಕಾರರಂತೆಯೇ ಜನ್ಮಕ್ಕೆ, ಜಾತಿಗೆ, ಕುಲಕ್ಕೆ ಮಹತ್ವಕೊಡಬೇಡಿರಿ, ಅವರವರ ಗುಣಕರ್ಮಗಳನ್ನು ನೋಡಿರಿ ಎಂದು ಬಹಳ ಮಾರ್ಮಿಕವಾಗಿ ಹೇಳಿರುವರು.

### ೨೦೯. ಹೊಲೆಯರೆಲ್ಲಿ ?

ನಾದನಾಮಕ್ರಿಯಾ ರಾಗ ಆದಿತಾಳ

ಹೊಲತಿ ಹೊಲೆಯು ಇವರವರಲ್ಲ || ಪ ||
ಹೊಲೆಗೇರಿಲಿ ಹೊಲೆಯು ಹೊಲೆತಿಯಿಲ್ಲ || ಅ. ಪ. ||

ಸತಿ ವಶನಾಗಿ ಜನನಿ ಜನಕಗೆ
ಅತಿ ನಿಷ್ಠುರ ನುಡಿವವ ಹೊಲೆಯು ||
ಸುತರ ಪಡೆದು ವಾರ್ಧಿಕ ಮದವೇರಿ
ಪತಿದ್ವೇಷ ಮಾಡುವವಳೆ ಹೊಲೆತಿ || ೧ ||

ಗುರುವಿದ್ಯೆ ಕಲಿತು ಸುಖದಲ್ಲಿ ಜೀವಿಸಿ
ಹಿರಿಯರ ಬಳಲಿಸುವವ ಹೊಲೆಯು ||
ಪುರುಷರಿಗೊಲಿದು ಸ್ವಪುರುಷನ ಸರ್ವದಾ
ವಿರಸ ಮಾಡುವವಳೆ ಹೊಲೆತಿ || ೨ ||

ಒಡೆಯನನ್ನವನುಂಡು ಆವನ ಕೂಡ
ಬಡದಾಡಿ ರೋಷತಾಳ್ವನೇ ಹೊಲೆಯು ||
ಬಡತನ ಬಂದರೆ ಅಡಿಗಡಿಗೊಮ್ಮೆ
ಹೊಡೆದಾಡಿ ಪತಿಯ ಬೈವಳೇ ಹೊಲೆತಿ || ೩ ||

ನೂರೊಂದು ಕುಲ ಕುಂಭೀಪಾಕಕಟ್ಟುವ ಪರ-
ನಾರಿಲಿ ವೀರ್ಯವಿಟ್ಟವ ಹೊಲೆಯ ||
ಯಾರೊಳು ಕಲಹ ಅಪಸ್ಮಾರಿ ದುರ್ವಾದಿ
ಕರಾಳ ಕುಮತಿ ಇಹಳೇ ಹೊಲತಿ || ೪ ||
ದುರ್ಬಲ ಜನರು ಕಂಡು ಮರುಗದೆ
ನಿರ್ಭೀತಿಲಿ ಇರುವವ ಹೊಲೆಯ ||
ಅರ್ಭಕತನದಲ್ಲಿ ಮದನಚೇಷ್ಟೆಯಲ್ಲಿ
ದುರ್ಬುದ್ಧಿಮಾಡುವವಳು ಶುದ್ಧ ಹೊಲತಿ || ೫ ||
ಹರಿಪಾದತೀರ್ಥವು ಹರಿನಿರ್ಮಾಲ್ಯವು
ಹರಿಪ್ರಸಾದವರಿಯದವ ಹೊಲೆಯ ||
ಪರಧರ್ಮಕೆ ಅನುಕೂಲವಾಗದೆ ಸಾಧು-
ವರರ ಮರೆಯುವವಳೆ ಹೊಲತಿ || ೬ ||
ಅಜನ ಪಿತ ನಾರಾಯಣನ ಪಾದದ
ಭಜನೆಮಾಡದವನತಿ ಹೊಲೆಯ ||
ನಿಜವಾದ ಪು ರಂ ದ ರ ವಿ ಠ್ಠ ಲ ರಾಯನ
ತ್ಯಜಿಸಿ ಬಾಳ್ವಳೆ ಅಂತ್ಯಜೆಯು ಹೊಲತಿ || ೭ ||

## ೨೧೦. ಗುಣದಿಂದ ಹೊಲೆಯರು

ಕೇದಾರಗೌಳ ರಾಗ ಝಂಪೆತಾಳ

ಹೊಲೆಯ ಹೊರಗಿಹನೆ ಊರೊಳಗಿಲ್ಲವೇ || ಪ ||
ಹೊಲೆಗೇರಿಯೊಳು ಹೊಲೆಯ ಹೊಲತಿಲ್ಲವೇ || ಅ. ಪ. ||
ಶೀಲವನು ಕೈಕೊಂಡು ನಡೆಸದಾತನೆ ಹೊಲೆಯ
ಕೇಳಿ ಹರಿಶಾಸ್ತ್ರಗಳ ಹೇಳದವ ಹೊಲೆಯ ||
ಆಳಾಗಿ ಅರಸನೊಳು ಮುನಿವವನೆ ಹೊಲೆಯ
ಸೂಳೆಯರ ಹೋಗುವವ ಶುದ್ಧ ಹೊಲೆಯಾ || ೧ ||
ಇದ್ದಾಗ ದಾನಧರ್ಮವ ಮಾಡದವ ಹೊಲೆಯ
ಕದ್ದು ತನ್ನೊಡಲು ಪೊರೆವವನೆ ಹೊಲೆಯಾ ||
ಪದ್ಧತಿಯ ಬಿಟ್ಟು ನುಡಿಗಳಾಡುವವ ಹೊಲೆಯ
ಮದ್ದಿಕ್ಕಿ ಕೊಲ್ಲುವವ ಮಾರಿ ಹೊಲೆಯ || ೨ ||

ಕೊಂಡ ಋಣವನು ತಿರುಗಿ ಕೊಡದಿದ್ದವನೆ ಹೊಲೆಯ
ಬಂಧುಮಾತುಗಳ ಬಯಲಿಗಿಕ್ಕುವವ ಹೊಲೆಯ ||
ಗಂಡ ಹೆಂಡರ ಮಧ್ಯ ಭೇದಹಚ್ಚುವವ ಹೊಲೆಯ
ಹೆಂಡತಿಯ ಇಚ್ಛೆಯಲಿ ನಡೆವವ ಹೇಡಿ ಹೊಲೆಯಾ || ೩ ||
ಆಸೆಯನು ಹುಟ್ಟಿಸಿ ಭಾಷೆ ತಪ್ಪುವವ ಹೊಲೆಯ
ಲೇಸು ಉಪಕಾರವನು ಅರಿಯದವ ಹೊಲೆಯ ||
ವೀಸಕೊಟ್ಟು ಬಹಳ ಕೊಟ್ಟೆನೆಂಬವ ಹೊಲೆಯ
ಹೇಸದಲೆ ಹುಸಿಯಾಡುವವ ಹುಚ್ಚು ಹೊಲೆಯ || ೪ ||
ಅರಿತು ಅನ್ಯಾಯವನು ಮರೆಮಾಳ್ಪನೇ ಹೊಲೆಯ
ಗುರುಹಿರಿಯರೆನ್ನದವ ಹಿರಿಯ ಹೊಲೆಯ ||
ಪರನಿಂದೆ ಆತ್ಮಸ್ತುತಿ ಮಾಡುವವನತಿ ಹೊಲೆಯ
ಪು ರಂ ದ ರ ವಿ ಠ ಲ ನೆನ್ನದವ ಪಾಪಿ ಹೊಲೆಯ || ೫ ||

## ೨೧೧. ಕುಲವೆಂದರೇನು?

ಕೇದಾರಗೌಳ ರಾಗ ಝಂಪೆತಾಳ

ಕುಲಕುಲ ಕುಲವೆನ್ನುತಿಹರೋ || ಪ ||
ಕುಲಯಾವದು ಸತ್ಯಸುಖ ಸಜ್ಜನರಿಗೆ || ಅ. ಪ. ||
ಕೆಸರೊಳು ತಾವರೆ ಪುಟ್ಟಲು ಅದು ತಂದು | ಬಿಸಜನಾಭನಿಗರ್ಪಿಸಲಿಲ್ಲವೇ||
ಹಸುವಿನ ಮಾಂಸದೊಳುತ್ಪತ್ತಿ ಕ್ಷೀರವು
ವಸುಧೆಯೊಳಗೆ ಭೂಸುರರುಣಲಿಲ್ಲವೇ || ೧ ||
ಮೃಗಗಳ ಮೈಯ್ಯಲ್ಲಿ ಪುಟ್ಟಿದ ಕಸ್ತೂರಿ
ತೆಗೆದು ಪೂಸುವರು ಭೂಸುರರೆಲ್ಲರೂ ||
ಬಗೆಯಿಂದ ನಾರಾಯಣನ್ಯಾವಕುಲದವ
ಅಗಜೆವಲ್ಲಭನ್ಯಾತರಕುಲದವನು || ೨ ||
ಆತ್ಮ ಯಾವ ಕುಲ ಜೀವ ಯಾವ ಕುಲ
ತತ್ವ ಪಂಚೇಂದ್ರಿಯ ಕುಲವಾವುದು ||
ಆತ್ಮಾಂತರಾತ್ಮನೆಲೆ ಯಾ ದಿ ಕೇ ಶ ವ
ಆತನೊಲಿದಮ್ಯಾಲೆ ಯಾತರ ಕುಲವೋ || ೩ ||

---

# ೨೩. ಸಿದ್ಧಾಂತ ಹಾಗೂ ಸಂಪ್ರದಾಯ

ಕೊನೆಯದಾದ 'ಸಂಕೀರ್ಣ' ಪ್ರಕರಣವನ್ನು ಬರೆಯುವದಕ್ಕೂ ಮೊದಲು ದ್ವೈತ ಸಿದ್ಧಾಂತವನ್ನು ಕುರಿತು ಬರೆಯುವದವಶ್ಯ. ಶ್ರೀಮನ್ಮಧ್ವಾಚಾರ್ಯರು ಪ್ರತಿಪಾದಿಸಿದ ದ್ವೈತಸಿದ್ಧಾಂತವನ್ನೆ ದಾಸಕೂಟದವರು ಸಾಮಾನ್ಯವಾಗಿ ಅನುಸರಿಸುತ್ತ ಬಂದಿರುವರು. ಆದುದರಿಂದ ಆ ಸಿದ್ಧಾಂತದ ಮುಖ್ಯ ಮುಖ್ಯ ಸಂಗತಿಗಳನ್ನೂ ಇಲ್ಲಿ ಕೊಡುವದು ಅವಶ್ಯವು. ಈ ಬಗ್ಗೆ ಸಂಕ್ಷೇಪದಿಂದ ಹೇಳಬೇಕಾದರೆ ಈ ಕೆಳಗಿನ ಸಂಸ್ಕೃತ ಶ್ಲೋಕವಿದೆ:—

**ಶ್ರೀಮನ್ಮಧ್ವಮತೇ ಹರಿಃ ಪರತರಸ್ಸತ್ಯಂ ಜಗತ್ತತ್ವತೋ |**
**ಭೇದೋ ಜೀವಗಣಾ ಹರೇರನು ಚರಾ ನೀಚೋಚ್ಚಭಾವಂ ಗತಾಃ ||**
**ಮುಕ್ತಿರ್ನೈಜಸುಖಾನುಭೂತಿ ರಮಲಾ ಭಕ್ತಿಶ್ಚ ತತ್ಸಾಧನಂ |**
**ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾ ಮ್ನಾಯೈಕವೇದ್ಯೋಹರಿಃ ||**

## ಮೇಲಿನ ಶ್ಲೋಕದ ಅರ್ಥ

ಶ್ರೀಮನ್ಮಧ್ವಮತದಲ್ಲಿ ಹರಿಯು ಸರ್ವೋತ್ತಮನು, ಜಗತ್ತು ಸತ್ಯವು, ಭೇದಗಳು (ಪಂಚಭೇದಗಳು) ತತ್ವತಃ ನಿಜವಾದವುಗಳು, ಜೀವಗಳು ಪರಮಾತ್ಮನ ವಶವರ್ತಿಗಳಾಗಿದ್ದು ತಾರತಮ್ಯದಿಂದ ನೀಚೋಚ್ಚಭಾವವುಳ್ಳವುಗಳು. ನೈಜಸುಖದ ಅನುಭೂತಿಯೇ ಮುಕ್ತಿಯು, ಅಮಲವಾದ ಭಕ್ತಿಯೇ ಅದಕ್ಕೆ ಸಾಧನವು. ಪ್ರತ್ಯಕ್ಷ, ಅನುಮಾನ, ಮತ್ತು ಶಬ್ದ ಇವೇ ಪ್ರಮಾಣಗಳು ಅಥವಾ ಸತ್ಯಜ್ಞಾನದ ಸಾಧನಗಳು ಹಾಗೂ ಅಖಿಲ ವೇದಗಳ ಸಹಾಯದಿಂದಲೆ ಹರಿಯು ಜ್ಞೇಯನು.

ಸೂತ್ರರೂಪವಾಗಿ ಈ ಒಂದೇ ಒಂದು ಶ್ಲೋಕದಲ್ಲಿ ಮಧ್ವಸಿದ್ಧಾಂತವು ಅಡಕವಾಗಿದೆ ಎಂದು ಹೇಳಬಹುದು. ಈ ಸಿದ್ಧಾಂತವು ಶಾಂಕರಾದ್ವೈತ ಹಾಗೂ ರಾಮಾನುಜರ ವಿಶಿಷ್ಟಾದ್ವೈತ ಈ ಎರಡೂ ಮತಗಳಿಂದ ಭಿನ್ನವಾಗಿದೆ.

ಆ ಎಲ್ಲ ಭಿನ್ನತೆಗಳನ್ನು ಇಲ್ಲಿ ತೋರಿಸುವದು ಅಶಕ್ಯವಿಲ್ಲ. ಯಥಾವಕಾಶ ಹಾಗೂ ಯಥಾಸ್ಥಲದಲ್ಲಿ ಆ ವಿಷಯವನ್ನು ವಿವರಿಸಬಹುದು.

ಈ ಮತದಂತೆ ಹರಿಯು ಸರ್ವೋತ್ತಮನು. ಲಕ್ಷ್ಮೀ ಬ್ರಹ್ಮಾದಿ ದೇವತೆಗಳು ಅವರವರ ತಾರತಮ್ಯದ ಪ್ರಕಾರ ಶ್ರೇಷ್ಠ ಕನಿಷ್ಠರು. ಹರಿಯು ಅಥವಾ ಪರಮಾತ್ಮನು ಸರ್ವಜ್ಞನು ಪೂರ್ಣ ಸ್ವತಂತ್ರನು, ಹಾಗೂ ಸರ್ವಗುಣಸಂಪನ್ನನು, ಅವನು ನಿರ್ಗುಣನಲ್ಲ. ಅವನೇ ಸ್ವೇಚ್ಛೆಯಿಂದ ಲಕ್ಷ್ಮಿಯ ಮುಖಾಂತರ ಸೃಷ್ಟಿಯನ್ನು ಸೃಜಿಸುವನು.

ಲಕ್ಷ್ಮೀ ಮುಂತಾದ ದೇವತೆಗಳಿಗೆ ಹಾಗೂ ಜೀವರುಗಳಿಗೆ ದತ್ತ ಸ್ವಾತಂತ್ರ್ಯವಿರುವದು. ಆ ನುಟ್ಟಿಗೆ ಮಾತ್ರ ಅವರು ಸ್ವತಂತ್ರರು. ಅವರು ಪರಮಾತ್ಮನಿಗೆ ಅಧೀನರು. ಜೀವಗಳೆಲ್ಲ ಪರಮಾತ್ಮನ ಪ್ರತಿಬಿಂಬಗಳು ಪರಮಾತ್ಮನು ಬಿಂಬಮೂರ್ತಿಯು.

ಚೇತನಗಳಲ್ಲಿ ಕ್ಷರ ಹಾಗೂ ಅಕ್ಷರ ಎಂದು ಎರಡು ವಿಧ. ಲಕ್ಷ್ಮಿಯು ಅಕ್ಷರಚೇತನಳು, ಉಳಿದವರೆಲ್ಲರು ಕ್ಷರಚೇತನರು. ಲಕ್ಷ್ಮಿಯು ಎರಡೂ ವಿಧದ ಚೇತನರಲ್ಲಿ ವ್ಯಾಪ್ತಳು. ಪರಮಾತ್ಮನು ಎಲ್ಲೆಲ್ಲಿಯೂ ವ್ಯಾಪ್ತನು.

ಸೃಷ್ಟಿಯು ಸತ್ಯವು, ಅದಕ್ಕೆ ಅಸ್ತಿತ್ವವಿದೆ. ಅದು ಪ್ರಕೃತಿಯ ವಿಸ್ತಾರವು.

ಜೀವಗಳು ಪ್ರಕೃತಿ ಬಂಧನದಿಂದ ಸುಖದುಃಖ, ಜನ್ಮಮರಣ ಮುಂತಾದವುಗಳಿಗೀಡಾಗುವವು. ಜೀವಗಳಲ್ಲಿ ಸಾತ್ವಿಕ, ರಾಜಸ, ತಾಮಸ ಎಂದು ಮೂರು ಭೇದಗಳು: ಸಾತ್ವಿಕ ಜೀವಗಳು ಮಾತ್ರ ಮುಕ್ತಿಯೋಗ್ಯರು. ಪ್ರಕೃತಿಬಂಧದಿಂದ ಪಾರಾದರೆಂದರೆ ಅವರು ಮುಕ್ತರಾಗುವರು. ಇತರ ಜೀವಗಳಿಗೆ ನಿಜವಾದ ಮುಕ್ತಿ ಇಲ್ಲ.

ಪರಮಾತ್ಮ ಪ್ರಸಾದದಿಂದಲೆ ಈ ಮುಕ್ತಿ ದೊರಕುವದು. ಈ ಪ್ರಸಾದಕ್ಕೆ ಸರ್ವಾರ್ಪಣಯುಕ್ತ ಭಕ್ತಿಯೇ ಮುಖ್ಯ ಸಾಧನ. ಅದು ಜ್ಞಾನಪೂರ್ವಕವಿದ್ದರೆ ದೃಢವಾಗುವದು, ನೈಷ್ಠಿಕವಾಗುವದು.

ಇನ್ನೊಂದು ಮಹತ್ವದ ಸಂಗತಿಯೇನಂದರೆ ವೈಷ್ಣವಸ್ವೈತ ಸಾಂಪ್ರದಾಯದಲ್ಲಿ ವಾಯುದೇವರಿಗೆ ಅತ್ಯಂತ ಮಹತ್ವದ ಸ್ಥಾನವಿದೆ. ವಾಯು

ದೇವರಿಗೆ ಪ್ರಾಣದೇವರು, ಮುಖ್ಯಪ್ರಾಣ, ಎಂಬ ಹೆಸರುಗಳಿವೆ. ವಾಯು ದೇವರೇ ಗುರುಗಳು ಅವರ ಮುಖಾಂತರವೆ ಮುಕ್ತಿಯು ಎಂಬ ದೃಢಭಾವನೆಯಿಂದ ಭಕ್ತರು ಸಾಗುವರು. ಶ್ರೀಮನ್ಮಧ್ವರಾಯರಾದರೂ ವಾಯುದೇವರ ಅವತಾರವೆಂದು ಭಾವನೆಯಿದೆ.

ದುರ್ಮತಗಳನ್ನು ಖಂಡಿಸಿ ದ್ವೈತಮತವನ್ನು ಸ್ಥಾಪಿಸುವವನೆ ನಿಜವಾದ ಗುರುವು. ಗುರುಶುಶ್ರೂಷೆ ಮುಂತಾದವುಗಳಿಂದ ಅಂತಃಕರಣ ಶುದ್ಧಿಯಾಗುವದು. ಅದರಿಂದ ಜ್ಞಾನೋದಯ ಭಕ್ತಿ ಮುಂತಾದವುಗಳುಂಟಾಗಿ ಮುಂದೆ ಮುಕ್ತಿ ಅಳವಡುವದು.

ಜೀವಗಳಲ್ಲಿಯೂ ತಾರತಮ್ಯವಿರುವದು. ಅದನ್ನು ಹೆಚ್ಚು ಕಡಿಮೆ ಮಾಡುವದು ಸಾಧ್ಯವಿಲ್ಲ. ಯಾವ ಹೆಚ್ಚು ಕಡಿಮೆಗಳೂ ಆಗವೆಂಬುದನ್ನು ತೋರಿಸಲು ಪಂಚಭೇದಗಳನ್ನು ಹೇಳಿರುವರು. ಅವಾವೆಂದರೆ ಜೀವಜೀವಕೆ ಭೇದ, ಜೀವ ಜಡಕೆ ಭೇದ, ಜೀವ ಈಶಗೆ ಭೇದ, ಜಡಜಡಕೆ ಭೇದ, ಜಡ ಈಶಗೆ ಭೇದ. ಇವು ಅನಾದಿ ಇದ್ದು ಕಾಯಂ ಇರುವವು. ಜಗನ್ನಾಥ ದಾಸರ ಹರಿಕಥಾಮೃತಸಾರದಲ್ಲಿ ಈ ಸಿದ್ಧಾಂತವು ಚನ್ನಾಗಿ ವಿವರಿಸಲ್ಪಟ್ಟಿದೆ.

## ಸಾಂಪ್ರದಾಯ

ಈ ಮೇಲಿನ ಸಿದ್ಧಾಂತವನ್ನನುಸರಿಸಿ ನಡೆಯುವವರದೊಂದು ಸಂಪ್ರದಾಯವುಂಟಾಗುವದು ಸ್ವಾಭಾವಿಕವು. ವಿಶಿಷ್ಟಕರ್ಮ, ನಡಾವಳಿ, ವ್ರತಾಚರಣೆ, ಲಾಂಛನ ಇವುಗಳಿಗೆ ಆ ಸಂಪ್ರದಾಯದವರು ಹೆಚ್ಚಿನ ಮಹತ್ವ ಕೊಡುವುದುಂಟು. ಗೋಪೀಚಂದನ, ತುಲಸೀ, ಚಕ್ರಶಂಖ ಗದಾಪದ್ಮಾದಿ ಮುದ್ರೆಗಳ ಧಾರಣ ಇವುಗಳಿಗೆ ಈ ಸಂಪ್ರದಾಯದಲ್ಲಿ ವಿಶೇಷ ಮಹತ್ವವಿರುವದು. ವ್ರತಗಳಲ್ಲಿ ಏಕಾದಶಿ ವ್ರತವೇ ಅತ್ಯಂತ ಶ್ರೇಷ್ಠವು. ಅದಕ್ಕೆ ಹರಿದಿನವೆಂದು ಹೆಸರು. ಪೂರ್ಣ ಉಪವಾಸವನ್ನು ಮಾಡಿ ಆ ದಿನ ರಾತ್ರಿಯನ್ನು ಭಕ್ತರು ಜಾಗರದಲ್ಲಿ ಕಳೆಯುವರು ಹಾಗೂ ಭಕ್ತಿಪರವಾಗಿ ಪರಮಾತ್ಮ ಸಾನ್ನಿಧ್ಯದ ಪರಮಾನಂದವನ್ನು ಅನುಭವಿಸುವರು.

ಇಲ್ಲಿ ಈ ವಿಷಯವನ್ನು ಹೆಚ್ಚು ವಿವರಿಸುವದು ಸಾಧ್ಯವಿಲ್ಲ.

## ೨೧೨. ಮಧ್ವಸಿದ್ಧಾಂತ

ನಾದನಾಮಕ್ರಿಯಾ ರಾಗ ಆದಿತಾಳ

ಮಧ್ವಮತದ ಸಿದ್ಧಾಂತದ ಪದ್ಧತಿ ಬಿಡಬೇಡಿ । ಬಿಟ್ಟು ಕೆಡಬೇಡಿ ॥ ಪ ॥

ಹರಿಸರ್ವೋತ್ತಮನಹುದೆಂಬೋ ಜ್ಞಾನವ
ತಾರತಮ್ಯದಿಂದ ತಿಳಿಸೋ ಮಾರ್ಗವ ॥ ೧ ॥

ಘೋರ ಯಮನಭಯ ದೂರ ಓಡಿಸಿ ಮು-
ರಾರಿಯ ಚರಣವ ತೋರೋ ಮಾರ್ಗವ ॥ ೨ ॥

ಭಾರತೀಶ ಮುಖ್ಯಪ್ರಾಣಾಂತರ್ಗತ
ನೀರಜಾಕ್ಷ ನಮ್ಮ ಪುರಂದರವಿಠಲನ ॥ ೩ ॥

## ೨೧೩. ಹರಿಸರ್ವೋತ್ತಮ

ಸುಳಾದಿ ರಾಗ ಧ್ರುವತಾಳ

ಹರಿಯೆ ಸರ್ವೋತ್ತಮ ಸಿರಿಯು ಆತನ ರಾಣಿ
ಸರಸಿಜೋದ್ಭವ ಮಾರುತ ಪುತ್ರರಯ್ಯ
ಸರಸ್ವತಿ ಭಾರತಿ ಗರುಡ ಶೇಷ ರುದ್ರ
ಹರಿಯ ರಾಣಿಯರು ನಾಲ್ಕೆರಡುಮುಂದಿ ಸೌ
ಪರಣಿ ವಾರುಣಿ ಗಿರಿಜಾ ಸುರಪತಿ ಕಾಮಾದ್ಯರ
ತಾರತಮ್ಯ ಜ್ಞಾನದಿಂದ ತಿಳಿಯಬೇಕು
ಸುರನದಿ ಪಿತ ನಮ್ಮ ಮೋಹನ್ನ ವಿಠ್ಠಲ
ಶರಣನೆನಿಸಿದವಗೆ ಇನ್ನು ಸಿರಿಯಕಾಣೆ ॥ ೧ ॥

ಜೀವ ಜೀವಕೆ ಭೇದ ಜಡಕೆ ಜಡಕೆ ಭೇದ
ಜೀವ ಜಡಕೆ ಭೇದ ಹರಿಗೆ ಜಡಕೆ ಭೇದ
ಜೀವ ಈಶಗೆ ಭೇದ ದೇವ ನಾರಾಯಣನ
ಭಾವಕ್ರಿಯೆಗಳಿಗೆ ಅಭೇದವನ್ನು ತಿಳಿದು
ಶ್ರೀವಲ್ಲಭ ನಮ್ಮ ಮೋಹನ್ನ ವಿಠ್ಠಲನ
ಪಾವನ್ನ ಚರಣ ನಾಮ ತೀವ್ರದಲಿ ಭಜಿಸು ॥ ೨ ॥

## ೨೧೪. ವಿಶ್ವವ್ಯಾಪಿತ್ವ

ನಾದನಾಮಕ್ರಿಯಾ ರಾಗ ತ್ರಿಪುಟತಾಳ

ವಿಶ್ವತೋಮುಖ ನೀನೆ ವಿಶ್ವತಃಚಕ್ಷು ನೀನೆ
ವಿಶ್ವತೋ ಬಾಹು ನೀನೆ ವಿಶ್ವತೋ ಹಸ್ತನೀನೆ || ೧ ||
ವಿಶ್ವತೋ ಶ್ರವಣ ನೀನೆ ವಿಶ್ವಾಧಾರಕನೀನೆ
ವಿಶ್ವವ್ಯಾಪಕ ಸರ್ವ ವಿಶ್ವಮಯನು ನೀನೆ || ೨ ||
ವಿಶ್ವನಾಮಕ ಹರಿ ಗೋ ಪಾ ಲ ವಿ ಠ ಲ
ವಿಶ್ವಾಸಕೊಡು ನಿನ್ನ ವಿಶ್ವಚರಣದಲ್ಲಿ || ೩ ||

## ೨೧೫. ಪರಮಾತ್ಮ ವ್ಯಾಪ್ತಿ

ಭಾಮಿನಿಷಟ್ಪದಿ

ನಿತ್ಯನಿಗಮಾತೀತ ನಿರ್ಗುಣ । ಭೃತ್ಯವತ್ಸಲಭಯ ವಿನಾಶನ ।
ಸತ್ಯಕಾಮ ಶರಣ್ಯ ಶಾಮಲ ಕೋಮಲಾಂಗ ಸುಖಿ ॥
ಮತ್ತನಂದದಿ ಮತ್ಸ್ಯರೊಳಹೊರ । ಗೆತ್ತನೋಡಲು ಸುತ್ತುತಿಪ್ಪನು ।
ಅತ್ಯಧಿಕ ಸಂತೃಪ್ತತ್ರಿಜಗದ್ವ್ಯಾಪ್ತ ನಿರ್ಲಿಪ್ತ || ೧ ||

ಎಲ್ಲಿ ಕೇಳಿದರೆಲ್ಲಿ ನೋಡಿದ । ರೆಲ್ಲಿ ಬೇಡಿದರೆಲ್ಲಿ ನೀಡಿದ ।
ರೆಲ್ಲಿ ಓಡಿದರೆಲ್ಲಿ ಆಡಿದರಲ್ಲಿ ಇರುತಿಹನು ॥
ಬಲ್ಲಿದರಿಗತಿ ಬಲ್ಲಿದನು ಸರಿ । ಯಿಲ್ಲಯಿವಗಾವಲ್ಲಿ ನೋಡಲು ।
ಖುಲ್ಲಮಾನವನೊಲ್ಲ ನಪ್ರತಿ ಮಲ್ಲ ಜಗಕೆಲ್ಲ || ೨ ||

ಮಳಲ ಮನೆಗಳ ಮಾಡಿ ಮಕ್ಕಳು । ಕೆಲವು ಕಾಲದಲಾಡಿ ಮೋದದಿ ।
ತುಳಿದು ಕೆಡಿಸುವ ತೆರದಿ ಲಕ್ಷ್ಮೀರಮಣಲೋಕಗಳ ॥
ಹಲವು ಬಗೆಯಲಿ ನಿರ್ಮಿಸುವ ನಿ । ಶ್ಚಲನು ತಾನಾಗಿದ್ದು ಸಲಹುವ ।
ಎಲರುಣಿಯುವೊಲು ನುಂಗುವಗೆ ಎಲ್ಲಿಹುದೋ ಸುಖದುಃಖ || ೩ ||

ಎಲ್ಲರೊಳು ತಾನಿಪ್ಪ ತನ್ನೊಳ । ಗೆಲ್ಲರನು ಧರಿಸಿಹನು ಅಪ್ರತಿ ।
ಮಲ್ಲ ಮನ್ಮಥ ಜನಕ ಜಗದಾದ್ಯಂತಮಧ್ಯಗಳ ॥
ಬಲ್ಲ ಬಹುಗುಣಭರಿತ ದಾನವ । ದಲ್ಲಣ ಜ ಗ ನ್ನಾ ಥ ವಿ ಠ ಲ ನು ।
ಸೊಲ್ಲ ಲಾಲಿಸಿ ಸ್ತಂಭದಿಂದಲಿ ಬಂದ ಭಕತನಿಗೆ ॥ || ೪ ||

## ೨೧೬. ಪಂಚಭೇದಗಳು ಹಾಗೂ ತಾರತಮ್ಯ

ಸೌರಾಷ್ಟ್ರ ರಾಗ ಝಂಪೆತಾಳ

ಸತ್ಯ ಜಗಕಿದು ಪಂಚ ಭೇದವು ನಿತ್ಯ ಶ್ರೀ ಗೋವಿಂದನ
ಕೃತ್ಯ ತಿಳಿದು ತಾರತಮ್ಯದಿ ಕೃಷ್ಣನಧಿಕೆಂದು ಸಾರಿರೈ || ಪ ||

ಜೀವ ಈಶಗೆ ಭೇದ ಸರ್ವತ್ರ ಜೀವಜೀವಕೆ ಭೇದವು
ಜೀವ ಜಡರೊಳ್ ಜಡಜಡಕ್ಕೆ ಭೇದ ಜಡಪರಮಾತ್ಮಗೆ || ೧ ||

ಮಾನುಷೋತ್ತಮರಧಿಕ ಕ್ಷಿತಿಪರು ಮನುಷ್ಯ ದೇವ-ಗಂಧರ್ವರು
ಜ್ಞಾನಿ-ಪಿತ್ರಾಜಾನ ಕರ್ಮಜ ದಾನವಾರಿ ತತ್ವಾತ್ಮರು || ೨ ||

ಗಣಪಮಿತ್ರರು ಸಪ್ತಋಷಿಗಳು ವಹ್ನಿನಾರದ ವರುಣನು
ಇನಜಗೆ ಸಮ ಚಂದ್ರಸೂರ್ಯರು ಮನುಸುತೆಯು
ಹೆಚ್ಚು ಪ್ರವಾಹರು || ೩ ||

ದಕ್ಷಸಮ ಅನಿರುದ್ಧ ಗುರು ಶಚಿ ರತಿ ಸ್ವಾಯಂಭುವರಾರ್ವರು
ಪಕ್ಷ ಪ್ರಾಣನಿಂದಧಿಕ ಕಾಮನು ಕಿಂಚಿದಧಿಕನು ಇಂದ್ರನು || ೪ ||

ದೇವೇಂದ್ರನಕಿಂತಧಿಕ ಮಹಾರುದ್ರ ದೇವಸಮರು ಶೇಷಗರುಡರು
ಕೇವಲಧಿಕರು ಗರುಡ ಶೇಷಗೆ ದೇವಿ ಭಾರತಿ ಸರಸ್ವತಿ || ೫ ||

ವಾಯುವಿಗೆ ಸಮರಿಲ್ಲ ಜಗದೊಳು ವಾಯುದೇವರೆ ಬ್ರಹ್ಮರು
ವಾಯು ಬ್ರಹ್ಮಗೆ ಕೋಟಿಗುಣದಿಂದಧಿಕಳಕ್ಕಳು ಶ್ರೀರಮಾ || ೬ ||

ಅನಂತಬಲದಿಂದ ಲಕುಮಿಗಿಂತ ಅಧಿಕ ಪು ರಂ ದ ರ ವಿ ಠ ಲ ನು
ಘನಸಮರು ಇವಗಿಲ್ಲ ಜಗದೊಳು ಹನುಮಹೃತ್‌ಪದ್ಮವಾಸಿಗೆ || ೭ ||

## ೨೧೭. ಪರಮಾತ್ಮಕ್ರೀಡಾ

ಭಾಮಿನಿಷಟ್ಪದಿ

ಕ್ರೀಡೆಗೋಸುಗ ಅನವರತರಗತಿ | ನೀಡಲೋಸುಗ ದೇಹಗಳಕೊ |
ಟ್ಟಾಡುವನು ಸ್ವೇಚ್ಛೆಯಲಿ ಬ್ರಹ್ಮೇಶಾದ್ಯರೊಳು ಪೊಕ್ಕು ||
ಮಾಡುವನು ವ್ಯಾಪಾರ ಬಹುವಿಧ | ಮೂಢದೈತ್ಯರೊಳಿದ್ದು ಪ್ರತಿದಿನ |
ಕೇಡುಲಾಭಗಳಿಲ್ಲ ನಿರ್ವಿಕಾರ ಕಾಲದಲಿ || ೧ ||

ಕೋಲುಕುದುರೆಯುಮಾಡಿ ಆಡುವ । ಬಾಲಕರ ತೆರನಂತೆ ಲಕ್ಷ್ಮೀ ।
ಲೋಲ ಸ್ವಾತಂತ್ರ್ಯಗುಣವ ಬ್ರಹ್ಮಾದ್ಯರೊಳಗಿಟ್ಟು ॥
ಲೀಲೆಗೈವನು ತನ್ನವರಿಗನು । ಕೂಲನಾಗಿದ್ದಲ್ಲ ಕಾಲದಲಿ ।
ಖೂಳರಿಗೆ ಪ್ರತಿಕೂಲನಾಗಿಹ ಪ್ರಕಟನಾಗದಲೆ ॥ ೨ ॥

## ೨೧೮. ದತ್ತಸ್ವಾತಂತ್ರ್ಯ

ಭಾಮಿನಿಷಟ್ಪದಿ

ಕಾರುಣಿಕಹರಿ ತನ್ನೊಳಿಪ್ಪಾ । ಪಾರಸ್ವಾತಂತ್ರ್ಯಗುಣದಿನಾ ।
ನೂರುತೆಗೆದು ಸಪಾದ ಆರೊಂದಧಿಕ ಅರವತ್ತು ॥
ನಾರಿಗಿತ್ತ ದ್ವಿಷೋಡಶಾಧಿಕ । ನೂರುಪಾದತ್ರಯವ ತನ್ನ ಶ- ।
ರೀರದೊಳಗೀಪರಿ ವಿಭಾಗವಮಾಡಿ ತ್ರಿಪದಾಹ್ವ ॥ ೧ ॥
ಅವನಿಪ ಸ್ವಾಮಿತ್ವಧರ್ಮವ । ಸ್ವವಶಮಾತ್ಯರಿಗಿತ್ತು ತಾಮು ।
ತ್ತವರಮುಖದಲಿ ರಾಜಕಾರ್ಯವ ಮಾಡಿಸುವ ತೆರದಿ ॥
ಕವಿವಿರೀಡಿತ ತನ್ನ ಕಳೆಗಳ । ದಿವಿಜದಾನವಮಾನವರೊಳಿ ।
ಟ್ಟವಿರಥ ಗುಣತ್ರಯಜ ಕರ್ಮವಮಾಡಿ ಮಾಡಿಸುವ ॥ ೨ ॥
ತನ್ನ ಸ್ವಾತಂತ್ರ್ಯ ಗುಣಗಳಹಿ । ರಣ್ಯಗರ್ಭಾದ್ಯರಿಗೆ ಕಲಿಮುಖ ।
ದಾನವರ ಸಂತತಿಗೆಯುವರಧಿಕಾರವನು ಸರಿಸೀ ॥
ಪುಣ್ಯಪಾಪಗಳೀವ ಬಹುಕಾ । ರುಣ್ಯಸಾಗರ ನಲ್ಪಶಕ್ತಿಗ ।
ಳುಣ್ಣಲರಿಯದೆಯಿರಲುಣಗಲಿಸಿದನು ಸರ್ವರಿಗೆ ॥ ೩ ॥

## ೨೧೯. ಹಲವು ಪ್ರಮೇಯಗಳು

ಮೋಹನ ರಾಗ ಝಂಪೆತಾಳ

ಏನು ಶಪಥವ ಮಾಡಲೀ ಮತವು ಹಿರಿದೆಂದು
ಜ್ಞಾನಿಗಳ ಸಮ್ಮತವೋ ಪ್ರಾಣೀ ॥
ವರಮಧ್ವಶಾಸ್ತ್ರವೇ ಸಕಲ ಶಾಸ್ತ್ರಾಧಿಕೆಂದು....
ಪರಮತ ಜಾಲಗಳು ವೇದವಿರುದ್ಧವೆಂದು....
ಭಾಗವತ ಶಾಸ್ತ್ರವೇ ಬಹು ಭಾಗ್ಯವೆಂತೆಂದು....
ಭಾಗವತ ನಿಂದಕಗೆ ಬಹುನರಕವೆಂತೆಂದು....

ಪರಲೋಕ ಸಾಧನೆಗೆ ತಾರತಮ್ಯಮತವೆಂದು....
ಹರಿದಿನಕೆ ಮರುದಿನ ಸರಿಯಿಲ್ಲವೆಂತೆಂದು....
ವಿದಿತ ದೈವಗಳೊಳಗೆ ವಿಷ್ಣು ಉತ್ತಮನೆಂದು....
ಅಧಿಕಾರಿಗಳೊಳಗೆ ಅಬುಜಸಂಭವನೆಂದು....
ಗುರು ಮಧ್ವರಾಯರೇ ಆತ್ಮರಕ್ಷಕರೆಂದು....
ಸಿರಿಹಯವದನನೆ ಅಮಿತಗುಣಪೂರ್ಣನೆಂದು....

## ೨೨೦. ಧ್ಯಾನಯೋಗ

ಕಾಂಬೋದಿ ರಾಗ ಝಂಪೆತಾಳ

ಧ್ಯಾನವನು ಮಾಡು ಬಿಂಬಮೂರುತಿಯ || ಪ ||
ಆನಂದದಲಿ ಕುಳಿತು ಅಂತರಂಗದಲಿ || ಅ. ಪ. ||

ಸದಾಚಾರನಾಗಿ ದ್ವಾದಶ ಗುರುಗಳಿಗೆರಗಿ
ಮುದದಿಂದ ಮೂಲ ಮಂತ್ರವನು ಜಪಿಸಿ
ಸದಮಲ ಭಕುತಿಯಲಿ ದೇಹಸ್ಥಿತಿಯನೆ ತಿಳಿದು
ಪದುಮಾಸನವ ಹಾಕಿ ಪರಮ ವಿಶ್ವಾಸದಲಿ || ೧ ||

ಅಂಗವನು ಚಲಿಸದೆ ಚನ್ನಾಗಿ ದೃಢವಾಗಿ
ಕಂಗಳನೆ ಮುಚ್ಚಿ ಇಂದ್ರಿಯಗಳನೆ ತೆರೆದು
ಮಂಗಳ ಶೋಭಿತ ಅಖಂಡ ಧ್ಯಾನದಂತ
ರಂಗದೊಳಗೆ ನಿಲಿಸಿ ಎಲ್ಲವನು ಕಾಣೊ || ೨ ||

ಭಗವದ್ರೂಪಗಳೆಲ್ಲ ಒಂದು ಬಾರಿ ಸ್ಮರಿಸಿ
ಮುಗುಳೆ ಪರಮ ಗುರುವಿನ ಮೂರ್ತಿಗೆ
ತೆಗೆದು ಆವ್ಹಾನಮಾಡಿ ಅಲ್ಲಿಂದ ಹರುಷದಿ
ಸ್ವಗುರು ಬಿಂಬಮೂರ್ತಿಯಲಿ ಐಕ್ಯವನೆ ಮಾಡು || ೩ ||

ತಿರುಗಿ ಮೆಟ್ಟಿಕೆ ಮೂರು ವೇಗದಿಂದಲಿ ಎನ್ನ
ಲ್ಲಿರುವ ಮೂರ್ತಿಯಲ್ಲಿ ಚಿಂತನೆಯ ಮಾಡೊ
ಭರದಿಂದ ಎಲ್ಲವನು ತಂದು ಹೃದಯದಲ್ಲಿ
ಸ್ಥಿರವಾಗಿ ಇಪ್ಪ ಮೂರುತಿಯೊಡನೆ ಕಲೆಸು || ೪ ||

ಆತನೆ ಬಿಂಬಮೂರುತಿ ಎಂದು ತಿಳಿದುಕೊ
ಆ ತರುವಾಯ ನಾಡಿಗಳ ಗ್ರಹಿಸಿ
ಆ ತೈಜಸನ ತಂದು ವಿಶ್ವಮೂರ್ತಿಯಲ್ಲಿ
ಪ್ರೀತಿಯುಳ್ಳವನಾಗಿ ಪತಿಕರಿಸು ಮರುಳೆ || ೫ ||
ಜ್ಞಾನಪ್ರಕಾಶದಲಿ ಇದ್ದು ನಿನ್ನ ಹೃದಯ
ಸ್ಥಾನದಲಿ ಅಷ್ಟದಳ ಕಮಲಮಧ್ಯ
ಶ್ರೀನಿವಾಸನ ಮೂರ್ತಿ ನಿಲ್ಲಿಸಿ ಬಾಹ್ಯದಲಿ
ಏನೇನು ಪೂಜೆಯನು ಉಳ್ಳದನು ಮಾಡೊ || ೬ ||
ಸತ್‌ಚಿತ್ ಆನಂದ ಆತ್ಮ ಉಪಾಸನವನೆ ಮಾಡು
ಕ್ಷಣಕ್ಷಣಕೆ ಹರಿಪಾದವನು ನೋಡುತ
ಅಣುರೇಣು ಚೇತನಾಚೇತನಕೆ ನೇಮಕ
ಫಣಿಶಯನನಲ್ಲದೆ ಮತ್ತೊಬ್ಬರಿಲ್ಲವೆಂದು || ೭ ||
ಮಮತೆಯನ್ನೂ ತೊರೆದು ಮೇಲೊಂದಪೇಕ್ಷಿಸಿದೆ
ಸಮವಿಷಮ ತಿಳಿದೊಂದೆ ಭಕುತಿಯಲ್ಲಿ
ಸ-ಮಾಧಿಗೊಳಗಾಗಿ ದಿವ್ಯದೃಷ್ಟಿಲಿ ಸರ್ವ
ಕ್ರಮ ಅನುಕ್ರಮದಿಂದ ಭರಿತಭಾವುಕನಾಗೊ || ೮ ||
ಈ ಪರಿ ಧೇನಿಸಲು ದೇವ ಕರುಣವ ಮಾಡೆ
ಪಾಪಸಂಚಿತವು ಪ್ರಾರಬ್ಧ ನಾಶ
ಅಪರೋಕ್ಷಿತನಾಗಿ ತನ್ನ ಯೋಗ್ಯತದಷ್ಟು
ಗೋಪಾಲ ವಿ ಜ ಯ ವಿ ಠ ಲ ನೊಲಿವನಾಗ || ೯ ||

## ೨೨೧. ಏಕಾದಶಿವ್ರತ

ಮಧ್ಯಮಾವತಿ ರಾಗ ಆದಿತಾಳ

ಏಕಾದಶಿವ್ರತವ ಸಾಧಿಸಿ, ಏಕಾದಶಿವ್ರತವ || ಪ ||
ಏಕಾದಶಿವ್ರತ ಸಾಧಿಸಿ ಶೋಧಿಸಿ| ಏಕಭಕುತಿಯಿಂದ ಮಾಡಿರೊ ಪಾಡಿರೊ|
ಲೋಕದೊಳಗೆ ಇದೆ ಬೀರುತ ಸಾರುತ | ಶ್ರೀಕಾಂತನ ನೆನೆಸಿ || ಅ. ಪ. ||
ದಶಮಿ–ಏಕಾದಶಿ–ದ್ವಾದಶಿ ದಿನತ್ರಯ | ವಸುಧೆಯೊಳಗೆ
ಮಹಾವ್ರತವೆಂದು ತಿಳಿದುತ್ರಿ– |

ದಶರೆಲ್ಲ ಕೈಕೊಂಡು ಮಾಡಿಹರಂದು ಋ | ಜಿಸುವ ಪಕ್ಷಮಾಸದಲಿ ||
ಬಿಸಜನಾಭನು ಲಕುಮಿಗೆ ಹೇಳಿದ ವ್ರತ | ಹಸನಾಗಿ ಬೊಮ್ಮಗೆ
ಅರಿವು ಮಾಡಲು ದೇವ- |
ಋಷಿಗೆ ಅಜನುಪೇಳಲಾ ಮುನಿಬೀರಿದ | ದಶದಿಶೆಯೊಳಗಂದು || ೧ ||
ಉದಯ ಪೂರ್ವದಲೆದ್ದು ಸಂಸಾರಯಾತ್ರೆಯೆಂದು | ಬದಿಯಲಿದ್ದ
ವರೆಲ್ಲ ಹರಿದಾಸ ದಾಸಿಯರು | ಹೃದಯದೊಳೀ ಪರಿಯೋಚಿಸಿ ಅಜ್ಞಾನ |
ಒದೆದು ಕಡೆಗೆ ನೂಕೀ
ಸದಮಲರಾಗಿ ಸ್ನಾನಾದಿಯ ಮಾಡಿ ಮ- | ತ್ತದರ ತರುವಾಯ
ದೇವತಾರ್ಚನೆ ಬಲು |
ವಿಧತಂತ್ರ ಸಾರದಿ ಮುಗಿಸಿ ಪ್ರಣವಸಾರ | ಹೃದಯದಿಂದಲಿ ಕೇಳಿ || ೨ ||
ಸಂಧ್ಯಾವಂದನೆ ದಿವ್ಯಮಂಗಳಾರತಿ ಗೋ- | ವಿಂದನ ಚರಣಕ್ಕೆ ಎತ್ತಿ
ನಿರ್ಮಲಚಿತ್ತ |
ದಿಂದ ಕೂಡುತ್ತ ಆಡುತ್ತ ಪಾಡುತ್ತಾ- | ನಂದ ವಾರಿಧಿಯಲ್ಲಿ ||
ಕುಂದದೆ ಸೂಸುತ ಗೆಳೆಯರ ಒಡಗೂಡಿ | ತಂದುಪುಷ್ಪಗಳಿಂದ
ಮಂಟಪ ವಿರಚಿಸಿ
ನಂದನಕಂದ ಗೋವಿಂದನ ಮಧ್ಯದಿ | ನಿಂದು ಸ್ಥಾಪಿಸಿ ತುತಿಸಿ || ೩ ||
ಜ್ಞಾನಿಗಳೊಡನೆ ಕುಳ್ಳಿರ್ದು ಸುತ್ತಲು ಶುದ್ಧ | ಗಾನವ ಮಾಡುವ
ಹರಿಯ ಮಹಿಮೆಯನ್ನು |
ಆನನ ತೂಗುತ ಹಾಡುತ ಪಾಡುತ | ಧ್ಯಾನವಗೆಯ್ಯುತಲಿ ||
ಮಾನಸ ಪೂಜೆಯ ಒಳಗೆ ರಚಿಸಿ ಮೇಲೆ | ಕಾಣಬಾರಧಂತೆ
ಪ್ರಜರುಗಳಿಗೆ ತೋರಿ |
ಆನೆಂಬೊ ಅಹಂಕೃತಿ ತೊರೆದು ಮಗುವಿನಂತೆ |
ಶ್ರೀನಿವಾಸನ ಒಲಿಸಿ || ೪ ||
ತಾಳ-ಮದ್ದಲಿ-ಜಾಂಗಟೆ-ತಂಬೂರಿ ಸ- | ಮ್ಮೇಳದಿಂದಲಿ ಕೂಡಿ
ಸೊಬಗು ಒಯ್ಯಾರದಿ |
ಕಾಲಿಗೆ ಗೆಜ್ಜೆಯ ಕಟ್ಟಿ ಒಲಿಯಾಕಾರದಿ | ಮೇಲು ಚಪ್ಪಳಿ ಇಡುತಾ- ||
ಬಾಲವೃದ್ಧರು ನಿಂದು ಕುಣಿಕುಣಿದಾಡಿ ವೈ- | ಯಾಳಿಲಿ ಹರಿಯ
ಸಂಕೀರ್ತನೆ ಮಾಡುತ |
ಸೋಲದೆ ಘನಸ್ವರದಿಂದ ಕೂಗುತಲಿ ನಿ- | ಶಾಲ ಭಕುತಿ ಫಲಿಸಿ || ೫ ||

ಕಿರಿಬೆವರೋದಕ ಮೊಗದಿಂದಿಳಿಯಲು |
ಉರದಲ್ಲಿದ್ದ ದೇವಗೆ ಅಭಿಷೇಚನ |

ಪರವಶನಾಗಿ ಮೈಮುರಿದು ತಮ್ಮೊಳು ತಾವೆ | ಹಿರಿದು ತಕ್ಕೈಸುತಲಿ |
ಕಿರಿನಗೆಯಿಂದ ತೋಳುಗಳಲ್ಲಾಡಿಸಿ |
ಎರಡು ಭುಜವ ಚಪ್ಪಳಿಸಿ ಏಕಾದಶಿ |
ದುರಿತರಾಶಿಗೆ ಪಾವಕನೆಂದು ಬೀರಿ ಬೊ– | ಬ್ಬಿರಿದು ಬಿರಿದು ಸಾರಿ || ೬ ||

ಮಧ್ಯಮಧ್ಯದಲ್ಲಿ ಮಂಗಳಾರತಿ ಎತ್ತಿ |
ಸದ್ ವೈಷ್ಣವರ ಕೂಡ ಹರಿ ಪರದೇವತೆ |
ಮಧ್ವರಾಯರೆ ಮೂರುಲೋಕಕೆ ಗುರುಗಳು | ಸಿದ್ಧಾಂತಮುನಿ ಸಮ್ಮತವು |
ಈ ಧರೆಯೊಳಗೆ ಇದನೆ ಮಾಡದ ನರ |
ಮಧ್ಯ–ಮಾಂಸ–ಮಲ– ಮೂತ್ರ–ವರ್ಮ–ಕ್ರಿಮಿ |
ಮೆದ್ದವ ಸದ್ದ್ವೇಷಿ ಚಾಂಡಾಲ ವೀರ್ಯಕ್ಕೆ | ಬಿದ್ದವ ನಿಜವೆನ್ನಿ || ೭ ||

ಸಾಗರ ಮೊದಲಾದ ತೀರ್ಥಯಾತ್ರೆಯ ಫಲ |
ಭೂಗೋಳ ಮೊದಲಾದ ದಾನ ಕೊಡುವ ಫಲ |
ಆಗಮ ವೇದಾರ್ಥ ಒಲಿಸಿ ಓದಿದ ಫಲ | ಯೋಗಮಾರ್ಗದ ಫಲವೋ ||
ಭಾಗವತರ ಕೂಡ ಝಾಮಚತುರ್ಥದ |
ಜಾಗರ ಮಾಡಿದ ಮನುಜನ ಚರಣಕೆ|
ಬಾಗಿದವಗೆ ಇಂಥ ಫಲ ಪ್ರಾಪ್ತಿ ನಿರ್ದೋಷಿ | ಆಗು ವೈರಾಗ್ಯದಲಿ || ೮ ||

ನಿತ್ಯ ನೈಮಿತ್ತಿಕ ಮಾಡು ಮಾಡದಲಿರು |
ತತ್ವವಿಚಾರದಿ ತುತಿಸಿ ದ್ವಾದಶಿ ದಿನ |
ಹೊತ್ತ ಹೋಗಗೊಡದಲೆ ಸದಾಚಾರ ಸ್ಮೃತಿಯಂತೆ |
ಅತ್ಯಂತ ಪಂಕ್ತಿ ಪಾವನರ ||
ಉತ್ತಮ ರೊಡಗೂಡಿ ಮಿಷ್ಟಾನ್ನ ಭುಂಜಿಸೆ |
ಮೃತ್ಯು ಜಯಿಸೆ ಸದ್ಗತಿಗೆ ಪಥವ ಮಾಡೆ |
ಸತ್ಯ ಮೂರುತಿ ಸಿರಿ ವಿ ಜ ಯ ವಿ ಠ್ಠ ಲ ರೇಯ |
ನಿತ್ಯ ಬಿಡದೆ ಕಾಯ್ವ || ೯ ||

## ೨೨೨. ಸಾರ್ಥಕ ಬಾಳ್ವೆ

ನಾದನಾಮಕ್ರಿಯ ರಾಗ ಆದಿತಾಳ

ಫಲವಿದ್ದು ಬಾಳ್ವುದಕೆ- ಸಿರಿ | ನಿಲಯನಗುಣಗಳ ತಿಳಿದು ಭಜಿಸುವದೆ-
ಫಲವಿದು ಬಾಳ್ವುದಕೆ || ಪ ||
ಸ್ವೋಚಿತ ಕರ್ಮಗಳಾಚರಿಸುತ ಬಲು | ನೀಚರಲ್ಲಿ ಪೋಗಿಯಾಚಿಸದೆ ||
ಖೇಚರವಾಹ ಚರಾಚರಬಂಧಕ |
ಮೋಚಕನಹುದೆಂದ್ಯೋಚಿಸುತಿಪ್ಪುದೆ || ೧ ||
ನಿಚ್ಚಸುಭಕುತಿಯೊಳಚ್ಯುತನಂಘ್ರಿ ಗ | ಳರ್ಚಿಸಿ ಮೆಚ್ಚಿಸುತೆಚ್ಚರದಿ ||
ತುಚ್ಛ ವಿಷಯಗಳ ನಿಚ್ಛೈಸದೆ ಯ |
ದೃಚ್ಛಾಲಾಭದಿ ಪ್ರೋಚ್ಚನಾಗುವದೆ || ೨ ||
ಮನವಾಕ್ಕಾಯದೊಳನುಭವಿಸುವ ದಿನ |
ದಿನದ ವಿಷಯ ಸಾಧನಗಳನು |
ಅನಿಲಾಂತರ್ಗತ ವನರುಹದಳಲೋ |
ಚನಗರ್ಪಿಸಿ ದಾಸನು ನಾನೆಂಬುದೆ || ೩ ||
ವಾಸವ ಮುಖ್ಯ ವಿಬುಧಾಸುರನಿಚಯಕೆ |
ವಾಸುದೇವನೆ ಶುಭಾಶುಭದಾ |
ಈ ಸಮಸ್ತ ಜಗಕೀಶ ಕೇಶವಾ |
ನೀಶ ಜೀವರೆಂಬೀ ಸುಜ್ಞಾನವೆ || ೪ ||
ಪಂಚ ಭೇದ ಪ್ರಪಂಚ ಸುಸತ್ಯವಿ |
ರಿಂಚ ಮುಖರು ಬಲಿವಂಚಕಗೆ ||
ಚಂಚಲಪ್ರತಿಮೆಯು ಚಂಚಲ ಪ್ರಕೃತಿಯ |
ಸಂಚಿಂತಿಸಿ ಮುದಲಾಂಛನ ನಾಹುದೆ || ೫ ||
ಪಂಚ ಋತುಗಳಲಿ ಪಂಚಾಗ್ನಿಗಳಲಿ |
ಪಂಚಪಂಚ ರೂಪವ ತಿಳಿದು ||
ಪಂಚ ಸಂಸ್ಕಾರಾಂಚಿತನಾಗಿದ್ದಿ |
ಪಂಚಕರಣದಲಿ ಪಂಚಕನರಿವುದೆ || ೬ ||
ಹೃದಯದಿ ರೂಪವು ವದನದಿನಾಮವು |
ಉದರದಿ ನೈವೇದ್ಯವು ಶಿರದಿ ||

ಪದಜಲ ನಿರ್ಮಾಲ್ಯಧರಿಸಿ ನಿರುಪಕೋ ।
ವಿದರಸದನ ಹೆಗ್ಗದವನು ಕಾಯ್ವುದೆ ॥ ೭ ॥
ಪಾತ್ರರಸಂಗಡ ಯಾತ್ರೆಯಚರಿಸಿವಿ ।
ಧಾತೃಪಿತನ ಗುಣಸ್ತೋತ್ರಗಳ ॥
ಶ್ರೋತ್ರದಿ ಸವಿದು ವಿಚಿತ್ರಾನಂದದಿ ।
ಗಾತ್ರವ ಮರೆದು ಪರತ್ರವಪಡೆವುದೆ ॥ ೮ ॥
ಹಂಸ ಮೊದಲು ಹದಿನೆಂಟು ರೂಪಗಳ ।
ಸಂಸ್ಥಾನವ ತಿಳಿದನು ದಿನದಿ ॥
ಸಂಸೇವಿಸುವ ಮಹಾಪುರುಷರ ।
ಪದಪಾಂಸುವ ಧರಿಸಿ ಅಸಂಶಯನಾಹುದೆ ॥ ೯ ॥
ವರಗಾಯಿತ್ರೀನಾಮಕ ಹರಿಗೀ ।
ರೆರಡಂಘ್ರಿಯ ವಿವರವ ತಿಳಿದು ॥
ತರುವಾಯಾದಿ ಷಡ್ವಿಧ ರೂಪವಸಾ ।
ದರದಲಿ ಅನುದಿನ ಧ್ಯಾನಿಸು ತಿಪ್ಪುರೆ ॥ ೧೦ ॥
ಬಿಗಿದ ಕಂಠದಿಂದ್ಯಗ್ಭಾಷ್ಪಗಳಿಂ ।
ನಗೆಮೊಗದಿಂರೋಮಗಳೊಗೆದು ॥
ಮಿಗೆ ಸಂತೋಷದಿ ನೆಗೆದಾಡುತಾಸಾ ।
ಲ್ಮೊಗನಯ್ಯನ ಪದಹೊಗಳಿ ಹಿಗ್ಗುವದೆ ॥ ೧೧ ॥
ಗೃಹಕರ್ಮವ ಬ್ಯಾಸರದಲೆ ಪರನೋ ।
ತ್ಸಹದಲಿ ಮಾಡುತ ಮೂರ್ಜಗದ ॥
ಮಹಿತನ ಸೇವೆಯಿದೆನುತಲಿ ಮೋದದಿ ।
ಅಹರಹರ್ಮನದಿ ಸಮರ್ಪಿಸುತಿಪ್ಪುದೆ ॥ ೧೨ ॥
ಕ್ಲೇಶಾನಂದಗಳೀಶಾಧೀನಸ ।
ಮಾಸಮ ಬ್ರಹ್ಮಸದಾಶಿವರು ॥
ಈಶಿತವ್ಯರು ಪರೇಶನಲ್ಲದೆ ।
ಶ್ವಾಸಬಿಡುವ ಶಕ್ತಿಲೇಸಿಲ್ಲೆಂಬೋದೆ ॥ ೧೩ ॥
ಆ ಪರಮಾತ್ಮಗೆ ರೂಪದ್ವಯವುಪ ।
ರಾಪರತತ್ವಗಳಿದರೊಳಗೆ ॥



೨೫—೧೪೧೧

ಸ್ತ್ರೀಪುಂ ಭೇದದಿ ಈ ಪದ್ಮಜಾಂಡನ |
ವ್ಯಾಪಿಸಿ ಇಹನೆಂದೀಪರಿ ತಿಳಿವುದೆ || ೧೪ ||
ಏಕೋತ್ತರ ಪಂಚಾಶದ್ವರ್ಣಗ |
ಳೇಕಾತ್ಮನ ನಾಮಂಗಳಿವು ||
ಮಾಕಮಲಾಸನ ಮೊದಲಾದ ಮರರು |
ಸಾಕಲ್ಯದಿ ಇವನರಿಯರೆಂತೆಂಬುದೆ || ೧೫ ||
ಒಂದು ರೂಪದೊಳನಂತ ರೂಪವು |
ಪೊಂದಿಪ್ಪುವು ಗುಣಗಣಸಹಿತ ||
ಹಿಂದೆಮುಂದೆ ಎಂದೆಂದಿಗೆ ಶ್ರೀ ಗೋ |
ವಿಂದನೆ ಸರಿಮಿಗಿಲಿಲ್ಲೆಂತೆಂಬುದೆ || ೧೬ ||

ಹರಿಕಥೆ ಪರಮಾದರದಲಿ ಕೇಳುತ |
ಮರೆದು ತನುವ ಸುಖಸುರಿಯುತಲಿ ||
ಉರುಗಾಯನ ಸಂದರುಶನ ಹಾರೈ |
ಸಿರುಳು ಹಗಲು ಜರಿಜರಿದು ಬಾಳುವುದೆ || ೧೭ ||
ವಿಷಯೇಂದ್ರಿಗಳ ತದಭಿಮಾನಿಸುಮ ||
ನಸರಲಿ ನಿಂದು ನಿಯಾಮಿಸುವ |
ಶ್ವಸನಾಂತರ್ಗತ ವಾಸುದೇವಶಾ |
ವಿಷಯಂಗಳ ಭೋಗಿಸುತಿಹನೆಂಬುದೆ || ೧೮ ||

ಮೂಜಗದೊಳಗಿಹ ಭೂಜಲ ಖೇಚರ |
ಈ ಜೀವರೊಳಗೆ ಮಹೌಜಸನ ||
ಸೋಜಿಗ ಬಹುವಿಧ ನೈಜವಿಭೂತಿಯು |
ಪೂಜಿಸುತನುದಿನರಾಜಿಸುತಿಪ್ಪುದೆ || ೧೯ ||
ಮೇದಿನಿ ಪರಮಾಣಾಂಬುಕಣಂಗಳ |
ನೈದಬಹುದು ಪರಿಗಣನೆಯನು ||
ಮಾಧವನಾನಂದಾದಿ ಗುಣಂಗಳ- |
ನಾದಿಕಾಲದಿಂದಗಣಿತವೆಂಬುದೆ || ೨೦ ||
ಗುಣಕಾಲಾಹ್ವಯ ಆಗಮಾರ್ಣವ ಕುಂ- |
ಭಿಣಿ ಪರಮಾಣ್ವಂಬುಧಿಗಳಲಿ ||

ವನಗಿರಿನಿಧಿ ಮೊದಲಾದದರೊಳಗಿಂ- |
ಧನಗತ ಪಾವಕನಂತಿಹನೆಂಬುದೆ || ೨೧ ||
ಅನಲಾಂಗಾರದೊಳಿಪ್ಪೋಪಾದಿಲಿ |
ಅನಿರುದ್ಧನುಚೇತನರೊಳಗೆ ||
ಕ್ಷಣಬಿಟ್ಟಗಲದೆ ಏಕೋ ನಾರಾ |
ಯಣ ಶ್ರುತಿಪ್ರತಿಪಾದ್ಯನು ಇಹನೆಂಬುದೆ || ೨೨ ||
ಪಕ್ಷ್ಮಗಳಕ್ಷಿಗಳ ಗಲದ ಲಿಪ್ಪಂ |
ತಕ್ಷರ ಪುರುಷನಪೇಕ್ಷೆಯಲಿ ||
ಕುಕ್ಷಿಯೊಳಬ್ಜಜ ತ್ರ್ಯಕ್ಷಾದ್ಯಮರರ |
ಈಕ್ಷಿಸಿ ಕರುಣದಿ ರಕ್ಷಿಪನೆಂಬುದೆ || ೨೩ ||
ಪವನ ಮತಾನುಗರವ ನಾನಹುದೆಂ- |
ದವನಿಯೊಳಗೆ ಸತ್ಕವಿಜನರ ||
ಭವನಗಳಲಿ ಸಂಚರಿಸುತ ಸುಕಥಾ |
ಶ್ರವಣವಮಾಡುತ ಪ್ರವರನಾಗುವುದೆ || ೨೪ ||
ತಾರಣ ಕಾರ್ಯಾಂತರ್ಗತ ಅಂಶವ | ತಾರಾವೇಶವಿಹಿತ ಸಹಜ |
ಪ್ರೇರಕ ಪ್ರೇರ್ಯಾಹ್ವಯ ಸರ್ವತ್ರವಿ |
ಕಾರವಿಲ್ಲದಲೆ ತೋರುವನೆಂಬುದೆ || ೨೫ ||
ಪ್ರತಿದಿವಸ ಶ್ರುತಿಸ್ಮೃತಿಗಳಿಂದ ಸಂ |
ಸ್ತುತಿಸುತ ಲಕ್ಷ್ಮೀಪತಿಗುಣವ ||
ಕೃತಿಪತಿ ಸೃಷ್ಟಿ ಸ್ಥಿತಿಲಯಕಾರಣ |
ಇತರ ದೇವತೆಗಳಿಗಿನಿತಿಲ್ಲೆಂಬುದೆ || ೨೬ ||
ಪನ್ನಗಾಚಲ ಸನ್ನಿವಾಸಪಾ | ವನ್ನಚರಿತ ಸದ್ಗುಣಭರಿತ ||
ಜನ್ಯಜನಕ ಲಾವಣ್ಯಾನೇಕ ಜ |
ಗನ್ನಾಥವಿಠಲ ನಾನ್ಯತನೆಂಬುದೆ || ೨೭ ||

# ೨೫. ಸಂಕೀರ್ಣ

ಇದು ಕೊನೆಯ ಪ್ರಕರಣವು. ಈ ಗ್ರಂಥದಲ್ಲಿ ಸೇರಿಸುವುದು ಅವಶ್ಯವಿದ್ದರೂ ಯಾವ ಕೀರ್ತನೆಗಳನ್ನು ಮೇಲಿನ ಇಪ್ಪತ್ತುಮೂರು ವರ್ಗಗಳಲ್ಲಿ ಹಾಕುವದು ಸಾಧ್ಯವಿದ್ದಿಲ್ಲವೊ ಅವುಗಳನ್ನು ಈ ಸಂಕೀರ್ಣ ಪ್ರಕರಣದಲ್ಲಿ ಸೇರಿಸಿದ್ದೇವೆ. ಇದರಲ್ಲಿ ಬಂದ ವಿಷಯುಗಳು ವಿವಿಧವಿರುವವು. ದಾಸರು ಈ ವಿವಿಧ ವಿಷಯುಗಳನ್ನು ಕುರಿತು ತಮ್ಮ ವಿಚಾರಗಳನ್ನು ಯಾವ ರೀತಿ ಪ್ರಕಟ ಮಾಡಿರುವರೆಂಬುದನ್ನು ನೋಡುವದು ಬಳ್ಳೇ ಮನೋರಂಜಕವೂ ಬೋಧಪ್ರದವೂ ಇದೆ.

ವಿಷಯುಗಳು ಬಹಳೇ ವಿವಿಧವಿರುವುದರಿಂದ ಆಯಾ ಪದ್ಯಗಳಲ್ಲಿ ಉಕ್ತವಾದ ವಿಷಯುಗಳನ್ನು ಕುರಿತು ಇಲ್ಲಿ ಏನೂ ಬರೆಯುವದು ಸಾಧ್ಯವಿಲ್ಲ. ಆದರೆ ಈ ಪ್ರಕರಣದಲ್ಲಿ ಪದ್ಯಗಳನ್ನು ಸೇರಿಸುವಾಗ ಹಲವು ಗುಂಪುಗಳು ಮಾಡಲ್ಪಟ್ಟಿವೆಯೆಂದು ಹೇಳಬಹುದು. ಆಯಾ ಗುಂಪಿನ ಪದ್ಯಗಳನ್ನು ಕುರಿತು ಪ್ರಾರಂಭದಲ್ಲಿ ಒಂದೆರಡು ಸಂಗತಿಗಳನ್ನು ಹೇಳಿ ಅವುಗಳಲ್ಲಿರುವ ವಿಷಯುದ ದಿಗ್ದರ್ಶನವನ್ನು ಮಾಡಿದ್ದೇವೆ. ಮೊದಲನೆಯ ಗುಂಪಿನಲ್ಲಿ ಐದು ಪದ್ಯಗಳಿವೆ. ಭಕ್ತನು ದೇವರೊಡನೆ ಸಲಿಗೆಯಿಂದ ಚೇಷ್ಟೆಮಾಡಿದ್ದು ಈ ಪದ್ಯಗಳಲ್ಲಿ ಕಂಡು ಬರುವದು. ಕೊನೆಯ ಎರಡು ಪದ್ಯಗಳಲ್ಲಿ ಸುಂದರವಾದ ಉತ್ಪ್ರೇಕ್ಷೆ ಇದೆ.

ಈ ಪದ್ಯಗಳು ಸಖ್ಯಭಾವದಲ್ಲಿಯೂ ಸೇರಬಹುದಾಗಿತ್ತು. ಆದರೆ ದಾಸರು ದೇವರೊಡನೆ ಮಾಡುವ ಸರಸ ಸಲ್ಲಾಪವನ್ನು ಪ್ರತ್ಯೇಕವಾಗಿ ತೋರಿಸುವ ಉದ್ದೇಶದಿಂದ ಅವುಗಳನ್ನು ಇಲ್ಲಿ ಕೊಟ್ಟಿದ್ದೇವೆ.

## ೨೨೩. ನಿನ್ನ ನಂಬಿ ಫಲವಿಲ್ಲ!

ಕಾಂಬೋಧಿ ರಾಗ ಝಂಪೆತಾಳ

**ಆರು ಬದುಕಿದರಯ್ಯ ಹರಿ ನಿನ್ನ ನಂಬಿ || ಪ ||**

**ತೋರು ಈ ಜಗದೊಳಗೆ ಒಬ್ಬರನು ಕಾಣೆ || ಅ. ಪ. ||**

ಕರಪತ್ರದಿಂದ ತಾಮ್ರಧ್ವಜನ ತಂದೆಯ
ಕೊರಳ ಕೊಯಿಸಿದೆ ನೀನು ಕುಂದಿಲ್ಲದೆ ||
ಮರುಳನಂದದಿ ಪೋಗಿ ಭೃಗುಮುನಿಯ ಕಣ್ಣೊಡೆದೆ
ಅರಿತು ತ್ರಿಪುರಾಸುರನ ಹೆಂಡಿರನು ಬೆರೆದೆ || ೧ ||

ಕಲಹಬಾರದಹಾಗೆ ಕರ್ಣನನು ನೀ ಕೊಂದೆ
ಸುಲಭದಲಿ ಕೌರವರ ಮನೆಯ ಮುರಿದೆ ||
ನೆಲವ ಬೇಡುತ ಪೋಗಿ ಬಲಿಯ ತನುವನು ತುಳಿದೆ
ಮೊಲೆಯನುಣಿಸಲು ಬಂದ ಪೂತಣಿಯ ಕೊಂದೆ || ೨ ||

ತಿರಿದುಂಬ ದಾಸರ ಕೈಲಿ ಕಪ್ಪವಕೊಂಬೆ
ಗರುಡವಾಹನ ನಿನ್ನ ಚರಿಯುವರಿಯೋ ||
ಧೊರೆ ಪುರಂದರ ವಿಠಲ ನಿನ್ನನು ನಂಬಿದರೆ
ತಿರುಪೆಯು ಹುಟ್ಟಲೊಲ್ಲದು ಕೇಳೊ ಹರಿಯೇ || ೩ ||

## ೨೨೪. ನಾನು ನಿನ್ನನು ಬಿಡೆನು!

ಮೋಹನ ರಾಗ ಏಕತಾಳ

ಬಿಡೆ ನಿನ್ನ ಪಾದವ ಬಿಂಕವಿನ್ಯಾಕೊ
ಕೊಡು ಮನದಿಷ್ಟವ ಕೋಪವಿದೇಕೊ || ಪ ||
ನೀರ ಪೊಕ್ಕರೆ ಬಿಡೆ ಬೆನ್ನಿನೊಳು ಬಹು
ಭಾರ ಪೊತ್ತೆನೆಂದು ಬಿದ್ದರು ಬಿಡೆನೋ ||
ಕೋರೆಯ ಮಸೆಯುತ ಕೆರಕೊಂಡರು ಬಿಡೆ
ಘೋರರೂಪವ ತಾಳಿ ಘುಡಿಘುಡಿಸಲು ನಾನು || ೧ ||

ತಿರುಕನೆಂದರೂ ಬಿಡೆ ತಿಳಿದು ತಾಯ ಕೊರಳ
ತರಿದೆನೆಂದರು ನಿನ್ನ ನಾ ಬಿಡೆನೋ ||
ಪೊರೆಯೆ ಪಿತನ ವಾಕ್ಯ ಕಾಡಸೇರಲು ಬಿಡೆ
ಗರಳ ಮಡುವಿನಲ್ಲಿ ಧುಮುಕಿದರೆಯು ನಾನು || ೨ ||

ಕಡು ಬತ್ತಲಾಗಿ ನನ್ನ ಕೈಲಿ ಕಾಸಿಲ್ಲೆಂದರೆ
ಒಡನೆ ಹಯವೇರಿ ಓಡಿದರೂ ಬಿಡೆನು ||

ಪೊಡವಿಯೊಳಗೆ ನಮ್ಮ ಪು ರಂ ದ ರ ವಿ ಠ ಲ ನೇ
ಕಡೆಹಾಯಿಸುವ ಭಾರ ನಿನ್ನದಾದುದಕೆ ನಾನು ‖ ೩ ‖

## ೨೨೫. ನೀನೆಂಥ ಚೆಲುವ !

ಕೇದಾರಗೌಳ ರಾಗ ಅಟತಾಳ

ಯಾತರ ಚೆಲುವ ರಂಗಯ್ಯ ಇನ್ಯಾತರ ಚೆಲುವ
ಹರಿಯೆಂಬ ಮಾತಿಗೆ ಬರಿದೆ ಮರುಳಾದೆವಲ್ಲದೆ ‖ ಪ ‖
ದೇಶಕೋಶವುಂಟಾದರೆ ಮನೆಯ ವಾರಿ-
ರಾಶಿಯಲ್ಲಿ ತಾನು ಕಟ್ಟುವನೇ ‖
ಹಾಸುಮಂಚವಿದ್ದರೇ ಕಿವಿಯಿಲ್ಲದ
ಶೇಷನ ಮೇಲೊರಗುವನೇ ರಂಗಯ್ಯ ‖ ೧ ‖
ಪಡೆದ ತಾಯಿ ತನಗುಳ್ಳಡೆ ಗೋಪನ
ಮಡದಿಯ ಮೊಲೆಯನೆ ಉಣ್ಣುವನೇ ‖
ಮಡದಿಯು ಉಳ್ಳಡೆ ಅಡವಿಯ ಗೊಲ್ಲರ
ಹುಡುಗಿಯರ ಸಂಗ ಮಾಡ್ತನೇ ರಂಗ ‖ ೨ ‖
ಬುದ್ಧಿ ಹೇಳುವ ಪಿತನುಳ್ಳಡೆ ತಾಬೆಣ್ಣೆ
ಕದ್ದು ತಿಂದು ಚೋರನೆನಿಸುವನೇ ‖
ಬದ್ಧವಾಹನ ತನಗಿದ್ದರೆ ಹಾರುವ
ಹದ್ದಿನ ಮೇಲೇರಿ ತಿರುಗುವನೇ ರಂಗ ‖ ೩ ‖
ಸಿರಿಯುಳ್ಳಡೆ ಪೋಗಿ ಬಲಿಯ ಬಾಗಿಲಕಾಯ್ದು
ಧರೆಯ ದಾನಕ್ಕೆ ಕೈಯೊಡ್ಡುವನೇ ‖.
ಧೊರೆಯು ತಾನಾದರೆ ಪಾಂಡುಕುಮಾರನ
ತುರಗಭಂಡಿಯ ಬೋವನಾಗುವನೆ ರಂಗ ‖ ೪ ‖
ಮದನ ಜನಕ ತಾನು ಸೊಬಗುಳ್ಳನಾದರೆ
ಮುದುಕೆ ಕುಬುಜೆಯನ್ನು ಕೂಡುವನೇ ‖
ಮುದದಿಂದ ತಾ ಪರದೈವ ವೆನಿಸಿಕೊಂಡ
ಚದುರ ಶ್ರೀ ಪು ರ ಂ ದ ರ ವಿ ಠ ಲ ಅಮ್ಮಮ್ಮ ‖ ೫ ‖

## ೨೨೬. ಏಕೆ ಮಲಗಿರುವಿ ?

ಆಹೇರಿ ರಾಗ ಝಂಪೆತಾಳ

ಏನು ಕಾರಣ ಮಲಗಿದೆಯಾ || ಪ ||
ಶ್ರೀನಾಥ ರಘೂದ್ಭವ ದರ್ಭಶಯನಾ || ಅ. ಪ. ||
ಸೀತೆ ಪೋದಳು ಎಂದು ಚಿಂತೆಯಲಿ ಮಲಗಿದೆಯಾ
ಕೋತಿಗಳ ಕೈಲಿ ರಣರಂಗವಾಗದೆಂದು ಮಲಗಿದೆಯಾ ||
ಪಾತಕಹರ ದೈತ್ಯಭಂಜಕಂ ತಿಳುಪುವದು
ಜ್ಯೋತಿರ್ಮಯರೂಪಿ ಶ್ರೀದರ್ಭಶಯನಾ || ೧ ||

ವನವಾಸ ತಿರುಗಲಾರೆನು ಎಂದು ಮಲಗಿದೆಯಾ
ವನಧೀಶ ಮಾರ್ಗವನು ಕೊಡನೆಂದು ಮಲಗಿದೆಯಾ ||
ದನುಜ ಬಲಿದನೆಂಬೊ ವ್ಯಾಕುಲದಿ ಮಲಗಿದೆಯಾ
ಜನನ ಮರಣ ರಹಿತ ರಾವು ತಿಳಿಸುವುದು
ಹನುಮಂತ ವಂದಿತಪದ ಶೀದರ್ಭಶಯನಾ || ೨ ||

ಅನಿಲಾರಿಹರನೆ ಕರುಣಿಸಿ ಮಲಗಿದೆಯಾ
ವನಜಸಂಭವಗೆ ನೀ ಒಲಿದು ಬಂದು ಮಲಗಿದೆಯಾ ||
ಮುನಿಗಳು ಸ್ತೋತ್ರಮಾಡಲು ಹಿಗ್ಗಿ ಮಲಗಿದೆಯಾ
ಜನನಾಥ ಜಾನಕೀಕಾಂತ ತಿಳಿಸುವದು
ಎನಗೊಲಿದು ವಿ ಜ ಯ ವಿ ಠ ಲ ದರ್ಭಶಯನಾ || ೩ ||

## ೨೨೭. ಯಾಕೆ ಮಲಗಿರುವಿ ?

ಭೂಪಾಳಿ ರಾಗ ಝಂಪೆತಾಳ

ಯಾಕೆ ನೀನಿಲ್ಲಿ ಪವಡಿಸಿದ್ಯೋ ಹರಿಯೇ, ಜಗ-
ದೇಕವಿಖ್ಯಾತ ಪಶ್ಚಿಮ ರಂಗನಾಥಾ || ಪ ||
ತಮನೊಡನೆ ಹೋರಿ ಬೆಟ್ಟವನು ಬೆನ್ನಿಲಿ ಪೊತ್ತು
ರಮಣ ಭೂದೇವಿ ತಂದಾಲಸ್ಯವೊ ||
ಅಮರವೈರಿಯ ಕರುಳಕಿತ್ತ ಕಡು ಧಾವತಿಯೊ
ಕ್ಷಮೆಯನಳೆದೀ ಪಾದಕಮಲ ನೊಂದಿಹವೋ || ೧ ||

ಪೊಡವಿಪಾಲಕರ ವಂಶವನು ಒಬ್ಬನೆ ಕಡಿದು
ಕೊಡಲಿಯನು ಬಿಸುಟು ಮಲಗಿದ ಭಾವವೋ ||
ಮಡದಿಯನು ಕದ್ದೊಯ್ದವನ ಶಿರವನೇ ತಂದು
ಬಿಡದೆ ಸಾಸಿರ ಗೋಪಿರೊಡನೆ ಮಲಗಿದ್ಯೋ ದೇವಾ || ೨ ||
ವಾಲಿ ಮೊದಲಾದವರ ಎದುರಾಂತ ದೈತ್ಯರ–ಕೊಂದು
ಕಾಳಿಯ ಹೆಡೆ ತುಳಿದು ಮೈಯ್ಯಲಸಿತೊ ||
ಲೀಲೆಯಿಂದಲಿ ಬಂದು ನಿರ್ವಾಣದಲಿ ನಿಂದು
ಆ ಲಜ್ಜೆಗಾಗಿ ತಲೆಬಾಗಿ ಮಲಗಿದ್ಯೊ ದೇವಾ || ೩ ||
ನಾಲ್ಕು ಯುಗದಾಧಾರಿ ಕಡೆಗೆ ತುರಗವನೇರಿ
ಸಾಕಾರಿಯಾಗಿ ಭರದಲಿ ಮಲಗಿದ್ಯೋ ||
ಸಾಕಾರಿಯಾದ ಗೌತಮ ಮುನೀಶ್ವರಗಂದೆ
ನೀ ಕೊಟ್ಟ ಭಾಷೆಗಾಗಿಂದು ಮಲಗಿದೆಯೋ || ೪ ||
ಇನ್ನೆಷ್ಟು ಕಾಲ ನೀ ಮೈಮರೆಯಿ ಮಲಗಿದರೆ
ನಿನ್ನನೆಬ್ಬಿಸುವರೊಬ್ಬರ ಕಾಣೆಸು ||
ಉನ್ನಂತ ಕಾಗಿನೆಲೆ ಯಾ ದಿ ಕೇ ಶ ವ ರಾ ಯ

---

# ಹರಿಭಕ್ತಿ ಸುಧೆ

ಇದು ಎರಡನೆಯ ಗುಂಪು. ಇದರಲ್ಲಿಯೂ ಐದು ಪದ್ಯಗಳಿವೆ. ಇದರಲ್ಲಿಯೂ ದಾಸರು ವಿನೋದದಿಂದಲೆ ಹಲವು ಮಹತ್ವದ ವಿಷಯಗಳನ್ನು ಬಹಳ ಮನೋಹರವಾಗಿ ವರ್ಣಿಸಿರುವರು.

## ೨೨೮. ರಾಗೀ ತಂದಿರಾ !

ನಾದನಾಮಕ್ರಿಯಾ ರಾಗ ಛಾಪುತಾಳ

ರಾಗೀ ತಂದೀರಾ, ಭಿಕ್ಷಕೆ, ರಾಗೀ ತಂದೀರಾ || ಪ ||
ಯೋಗ್ಯರಾಗಿ ಭೋಗ್ಯರಾಗಿ ಭಾಗ್ಯವಂತರಾಗಿ ನೀವು || ಅ. ಪ. ||
ಅನ್ನದಾನ ಮಾಡುವರಾಗಿ ಅನ್ನಛತ್ರವನಿಟ್ಟವರಾಗಿ
ಅನ್ಯವಾರ್ತೆಯ ಬಿಟ್ಟವರಾಗಿ ಅನುದಿನ ಭಜನೆಯ ಮಾಡುವರಾಗಿ || ೧ ||
ಮಾತಾಪಿತೃಗಳ ಸೇವಿಪರಾಗಿ ಪಾಪಕಾರ್ಯ ಬಿಟ್ಟವರಾಗಿ
ಜಾತಿಯಲ್ಲಿ ಮಿಗಿಲಾದವರಾಗಿ ನೀತಿಮಾರ್ಗದಲಿ ಖ್ಯಾತರಾಗಿ || ೨ ||
ಗುರುಕಾರುಣ್ಯವ ಪಡೆದವರಾಗಿ ಗುರುವಿನ ಮರ್ಮವನು ತಿಳಿದವರಾಗಿ
ಗುರುವಿನ ಪಾದವ ಸ್ಮರಿಸುವರಾಗಿ ಪರಮ ಪುಣ್ಯವ ಮಾಡುವರಾಗಿ || ೩ ||
ಶ್ರೀನಿವಾಸನ ಸ್ಮರಿಸುವರಾಗಿ ಪ್ರಾಣರಾಯನ ದಾಸರಾಗಿ
ದಾನಕೆಂದು ಬಲು ಹೆದರಿ ಇಂಥ ದೀನವೃತ್ತಿಯಲಿ ಹೀನರಾಗಿ || ೪ ||
ಪಕ್ಷಮಾಸ ವ್ರತಮಾಡುವರಾಗಿ ಪಕ್ಷಿವಾಹನಗೆ ಪ್ರಿಯರಾಗಿ
ಕುಕ್ಷಿಲಿ ಕಲುಷ ಇಲ್ಲದವರಾಗಿ ಭಿಕ್ಷುಕರು ಅತಿ ತುಚ್ಛರಾಗಿ || ೫ ||
ವೇದಪುರಾಣವ ತಿಳಿದವರಾಗಿ ಮೇದಿನಿ ಆಳುವಂಥವರಾಗಿ
ಸಾಧುಧರ್ಮಗಳ ಚರಿಸುವರಾಗಿ ಓದಿ ಗ್ರಂಥಗಳ ಪಂಡಿತರಾಗಿ || ೬ ||
ಆರು ಮಾರ್ಗವ ಅರಿತವರಾಗಿ ಮೂರು ಮಾರ್ಗವ ತಿಳಿದವರಾಗಿ
ಭೂರಿತತ್ವವ ಬೆರೆದವರಾಗಿ ಕ್ರೂರರ ಸಂಘ ಬಿಟ್ಟವರಾಗಿ || ೭ ||
ಕಾಮಕ್ರೋಧವ ಅಳಿದವರಾಗಿ ನೇಮ ನಿತ್ಯವ ಮಾಡುವರಾಗಿ
ಆ ಮಹಾ ಪದವಿಯ ಸುಖಿಸುವರಾಗಿ ಪ್ರೇಮದಿ
ಕುಣಿಕುಣಿದಾಡುವರಾಗಿ || ೮ ||
ಸಿರಿರಮಣನ ಸದಾ ಸ್ಮರಿಸುವರಾಗಿ ಗುರುತಿಗೆ ಬಾಹೋರಂಥವರಾಗಿ
ಕರಕರೆ ಸಂಸಾರವ ನೀಗುವರಾಗಿ
ಪುರಂದರವಿಠಲನ ಸೇವಿಪರಾಗಿ || ೯ ||



೨೬–೧೪೧೧

## ೨೩೯. ಹೊಟ್ಟೆ ಎಲ್ಲರ ದೇವರು

ಹುಸೇನಿ ರಾಗ ಆದಿತಾಳ

ಎಲ್ಲಾರು ಮಾಡುವದು ಹೊಟ್ಟೆಗಾಗಿ-ಗೇಣು-ಬಟ್ಟೆಗಾಗಿ || ಪ ||
ಸಿರಿ-ವಲ್ಲಭನ ಭಜಿಸುವದು ಮುಕ್ತಿಗಾಗಿ || ಅ. ಪ. ||

ಪಲ್ಲಕ್ಕಿಯ ಹೊರುವದು ಹೊಟ್ಟೆಗಾಗಿ | ದೊಡ್ಡ
ಮಲ್ಲರೊಡನಾಡುವದು ಹೊಟ್ಟೆಗಾಗಿ ||
ಸುಳ್ಳಾಗಿ ಪೊಗಳುವದು ಹೊಟ್ಟೆಗಾಗಿ | ಸಿರಿ
ವಲ್ಲಭನ ಧ್ಯಾನವು ಮುಕ್ತಿಗಾಗಿ || ೧ ||

ಧೊರೆತನವ ಮಾಡುವದು ಹೊಟ್ಟೆಗಾಗಿ | ಕರಿ
ತುರಗವೇರುವದು ಹೊಟ್ಟೆಗಾಗಿ ||
ದುರಿತವ ಮಾಡುವದು ಹೊಟ್ಟೆಗಾಗಿ | ಸಿರಿ
ಹರಿಯ ಭಜಿಸುವದು ಮುಕ್ತಿಗಾಗಿ || ೨ ||

ಬೆಟ್ಟವ ಹೊರುವದು ಹೊಟ್ಟೆಗಾಗಿ | ಗಟ್ಟಿ
ಗಟ್ಟ್ಯಾಗಿ ಕೂಗುವದು ಹೊಟ್ಟೆಗಾಗಿ ||
ದಿಟ್ಟವಾಗಿ ನಮ್ಮ ಸಿರಿ ಪು ರಂ ದ ರ
ವಿ ಠ ಲ ನ ಧ್ಯಾನವು ಮುಕ್ತಿಗಾಗಿ || ೩ ||

## ೨೪೦. ಲಂಗೋಟಿ ಮಹಾತ್ಮ್ಯವು

ನಾದನಾಮಕ್ರಿಯಾ ರಾಗ ಅಟತಾಳ

ಲಂಗೋಟಿ ಬಲು ಒಳ್ಳೇದಣ್ಣ, ಒಬ್ಬ-
ರ್ಹಂಗಿಲ್ಲದೆ ಮಡಿಗೆ ಒದಗುವದಣ್ಣ || ಪ ||

ಬಡವರಿಗಾಧಾರವಣ್ಣ, ಈ ಲಂಗೋಟಿ
ವೈರಾಗಿಗಳ ಭಾಗ್ಯವಣ್ಣ ||
ಕಡುಕಳ್ಳರಿಗೆ ಗಂಡ ಮಡಿಧೋತ್ರಗಳ ಮಿಂಡ
ನಡುಗುವ ಸಮಯಕ್ಕೆ ಮಡಿಗೆ ಒದಗುವಂಥ || ೧ ||

ಜಿತಮನ ಸನ್ಯಾಸಿಗಳಿಗಿದೇ, ಕೌಪೀನ
ವ್ರತವುಳ್ಳ ಬ್ರಹ್ಮಚಾರಿಗೆ ಮುಖ್ಯವು ||

ಅತಿಶಯವಿದೆ ಆಂಜನೇಯ ನಾರದರಿಗೆ
ಗತಿಯಿಲ್ಲದವರಿಗೆ ಹಿತವಾಗಿ ಇರುವಂಥ ॥ ೨ ॥
ದುಡ್ಡು ಮುಟ್ಟದಂತೆ ದೊರಕುವ, ವಸ್ತ್ರವು
ದೊಡ್ಡ ಅರಣ್ಯದಿ ಭಯವಿಲ್ಲವು ॥
ಹೆಡ್ಡರೆಂಬುವರೇನೋ ಲಂಗೋಟಿ ಜನರನ್ನು
ದೊಡ್ಡವರೆಂದು ವಂದಿಸುವರು ಯತಿಗಳ ॥ ೩ ॥
ಮೋಕ್ಷ ಮಾರ್ಗಕೆ ಕಲ್ಪವೃಕ್ಷವೀ ಲಂಗೋಟಿ
ಭಿಕ್ಷಗಾರರಿಗೆಲ್ಲ ಅನುಕೂಲವು ॥
ತಕ್ಷಣದೊಳಗೆ ಕಾರ್ಯಗಳ ಮುಗಿಸಿಮಾನ
ರಕ್ಷಣೆಗೆ ಬಹು ರಮ್ಯವಾಗಿರುವಂಥ ॥ ೪ ॥
ಮಡಿವಾಳರಿಗೆ ಶತ್ರು ಮಠದಯ್ಯಗಳ ಮಿತ್ರ
ಪೊಡವಿಯೊಳ್ ಯಾಚಕರಿಗೆ ನೆರವು ॥
ದೃಢಭಕ್ತ ಬಲಿಚಕ್ರವರ್ತಿಗೋಸ್ಕರ ನಮ್ಮ
ಒಡೆಯ ಶ್ರೀ ಪುರಂದರವಿಠಲ ಧರಿಸಿದಂಥ ॥ ೫ ॥

## ೨೩೧. ಅದ್ವೈತದ ಚೇಷ್ಟೆ

ನಾದನಾಮಕ್ರಿಯಾ ರಾಗ ಆದಿತಾಳ

ಶಿವ ನೀನ್ಹ್ಯಾಗಾದ್ಯೋ ತಾಯಿಗಂಡ ಹರ ನೀನ್ಹ್ಯಾಗಾದ್ಯೋ ॥ ಪ ॥
ಶಿವ ನೀನಾದರೆ ಶಿವನರ್ಧಾಂಗಿಗೆ ಧವನಾಗಬೇಕಲ್ಲೋ ಅವಿವೇಕಿ
ಮೂಢ ॥ ಅ. ಪ. ॥

ಗಂಗೆಯ ಶಿರದಲ್ಲಿ ಧರಿಸಿದ ನಮ್ಮ ಶಿವ
ಕುಂಭವ ಹೊರದೇ ಬಡಕೊಂಬೆ ಖೋಡಿ ॥ ೧ ॥
ಮಂಟಿಯಲ್ಲಿ ಮನೆ ಮಾಡಿದ ನಮ್ಮ ಶಿವ
ಉಂಟಾದ ಮಕ್ಕಳಿಗಳವಲ್ಲೊ ಖೋಡಿ ॥ ೨ ॥
ಕಾಳಕೂಟ ವಿಷ ಧರಿಸಿದ ನಮ್ಮ ಶಿವ
ಚೇಳು ಕಡಿದರೆ ಹೊಡಕೊಂಬೆ ಖೋಡಿ ॥ ೩ ॥
ಕೆಂಡಗಣ್ಣ ನೊಸಲೊಳಗಿಟ್ಟ ನಮ್ಮ ಶಿವ
ಕೆಂಡವ ಸೋಂಕಲು ಅಳುವೆಲ್ಲೋ ಖೋಡಿ ॥ ೪ ॥

ಕರುಣಾಸಾಗರ ಶ್ರೀ ಪು ರ ಂ ದ ರ ವಿ ಠ ಲ ನ್ನ
ಚರಣವ ಸ್ಮರಿಸುತ ನೀ ಬಾಳೋ ಜೋಡಿ || ೫ ||

## ೨೩೨. ನಾವು ನಿಜ ಜಂಗಮರು

ನಾದನಾಮಕ್ರಿಯಾ ರಾಗ ಏಕತಾಳ

ಜಂಗಮರು ನಾವು ಜಗದೊಳು || ಪ ||
ಜಂಗಮರು ನಾವು ಲಿಂಗಾಂಗಿಗಳು
ಮಂಗಳವಂತರು ಭವಿಗಳೆಂತೆಂಬಿರಿ || ಅ. ಪ. ||
ಹರಗುರುದೈವ ಕೇಶವ ನಮ್ಮ ಮನೆ ದೈವ
ವರದ ಮೋಹನ ಗುರು ಶಾಂತೇಶ ||
ಹರಗುರುದ್ರೋಹ ಮಾಡಿದ ಪರವಾದಿಯು
ರೌರವ ನರಕದಿ ಮುಳುಗುವದೆ ಸಿದ್ಧ || ೧ ||
ವಿಭೂತಿ ನಮಗುಂಟು ವಿಶ್ವೇಶ ನಮಗುಂಟು
ಶೋಭನ ನಾಮ ಮುದ್ರೆಗಳುಂಟು ||
ಶ್ರೀ ಭಾಗೀರಥಿಯಗಣಿತ ಮಜ್ಜನವುಂಟು
ಸೌಭಾಗ್ಯವೀವ ಮಹಂತನ ಮಠದವರು || ೨ ||
ವಿರಕ್ತರು ನಾವು ಶೀಲವಂತರು ನಾವು
ವೀರಭದ್ರ ಪ್ರಿಯ ಭಕ್ತರು ನಾವು ||
ಕಾರಣ ಕರ್ತ ಶ್ರೀ ಪು ರ ಂ ದ ರ ವಿ ಠ ಲ ನ
ಕಾರುಣ್ಯಕೆ ಮುಖ್ಯ ಪಾತ್ರರು ನಾವು || ೩ ||

ಈ ಮೂರನೆಯ ಗುಂಪಿನಲ್ಲಿ ನಾಲ್ಕು ಪದ್ಯಗಳಿರುವವು. ಮಡಿ, ನಿಜವಾದ ಮಡಿ, ಬಾಹ್ಯಾಡಂಬರದ ಜೊಳ್ಳುತನ ಇವುಗಳನ್ನು ಇಲ್ಲಿ ದಾಸವರರು ಮಾರ್ಮಿಕವಾಗಿ ವರ್ಣಿಸಿರುವರು.

## ೨೩೩. ಮಡಿ

ನಾದನಾಮಕ್ರಿಯೆ ರಾಗ ಆದಿತಾಳ

ಮಡಿಮಡಿ ಮಡಿಯೆಂದು ಮೂರ್ಮೂರು ಹಾರುತಿ
ಮಡಿಯೆಲ್ಲಿ ಬಂತೇ ಬಿಕನಾಸಿ ||

ಮಡಿಯೂ ನೀನೆ ಮೈಲಿಗೆ ನೀನೆ
ಸುಡಲಿ ನಿನ್ನ ಮಡಿ ಬಿಕನಾಸಿ || ಅ. ಪ. ||
ಎಲುವು ಚರ್ಮ ಮಲಮೂತ್ರ ಗುಂಡಿಯಲಿ
ನಲಿವುತ ನಿಂತೇ ಬಿಕನಾಸಿ ||
ನೆಲೆಗೊಂಡಿಹ ನವದ್ವಾರದ ಹೊಲೆಯೊಳು
ನರಳುತ ನೀ ಬಿದ್ದಿ ಬಿಕನಾಸಿ || ೧ ||
ಹುಟ್ಟುತ ಸೂತಕ ಸಾಯುತ ಸೂತಕ
ನಟ್ಟನಡುವೆ ನಿಂತೆ ಬಿಕನಾಸಿ ||
ಬಿಟ್ಟುಬಿಡದೆ ಕಾವೇರಿಲಿ ಮುಳುಗಲು
ಮುಟ್ಟು ಹೋದೀತೇ ಬಿಕನಾಸಿ || ೨ ||
ಚರ್ಮವ ತೊಳೆದರೆ ಕರ್ಮವು ಹೋಗೊದೆ
ಮರ್ಮವ ತಿಳಿಯದೆ ಬಿಕನಾಸಿ ||
ಬರ್ಮನಯ್ಯ ಪುರಂದರವಿಠಲನ ಪಾಡಿ
ನಿರ್ಮಲದಿಂ ಬಾಳೇ ಬಿಕನಾಸಿ || ೩ ||

## ೨೩೪. ನಿಜವಾದ ಮಡಿ

ಶಂಕರಾಭರಣ ರಾಗ ಆದಿತಾಳ

ಮಡಿ ಮಡಿ ಮಡಿಯೆಂದು ಅಡಿಗಡಿ ಹಾರುವಿ
ಮಡಿ ಮಾಡುವ ಬಗೆ ಬ್ಯಾರುಂಟು || ಪ ||
ಪೊಡವಿಪಾಲಕನ ಪಾದ ಧ್ಯಾನವನು
ಬಿಡದೆ ಮಾಡುವದದು ಮಡಿಯೂ || ಅ. ಪ. ||
ಬಟ್ಟೆ ನೀರೊಳಗಿಟ್ಟು ಮುಣುಗಿ ನೀ ಉಟ್ಟರೆ ಅದು ಬೇರೆ ಮಡಿಯಲ್ಲ ||
ಹೊಟ್ಟೆ ಒಳಗಿನ ಕಾಮ-ಕ್ರೋಧ ಮದ-ಮತ್ಸರ
ಬಿಟ್ಟು ಬಿಡುವದು ಅದು ಮಡಿಯೂ || ೧ ||
ದಶಮಿ ದ್ವಾದಶಿ ಪುಣ್ಯದಿನದಲಿ
ವಾಸುದೇವನ ಪೂಜೆ ವಿಶೇಷ ಮಾಡದೆ ||
ಅಲ್ಲಾ ಖುದಾ ಎಂದು ಆತ್ಮದಲಿ ತಿಳಿಯದೆ
ಮುಲ್ಲಶಾಸ್ತ್ರದ ನೆಲೆಯ ಗುರುತರಿಯದೆ ||

ದೋಷಕಂಜದೆ ಪರರನ್ನ ಭುಂಜಿಸಿ ಯಮ-
ಪಾಶಕೆ ಸಿಲುಕವದು ಅದು ಮಡಿಯೋ ॥ ೨ ॥

ಭೂಸುರರು ಮಧ್ಯಾಹ್ನಕಾಲಕೆ
ಹಸಿದು ಬಸಿದು ಮನೆಗೆ ಬಂದರೆ ॥
ಮಸುಳಿಗೊಂಡು ಗತಿಯಿಲ್ಲವೆಂದು ತಾ
ಹಸನಾಗಿ ಉಂಬೊದು ಹೊಲೆ ಮಡಿಯೂ ॥ ೩ ॥

ಇಚ್ಛೆಯಿಂದ ಮಲಮೂತ್ರ ಶರೀರವ
ನೆಚ್ಚಿ ಕೆಡಲು ಬೇಡ ಎಲೆ ಜೀವನೇ ॥
ಅಚ್ಯುತಾನಂತನ ನಾಮಸ್ಮರಣೆಲಿ
ಸಂಚಿತ ಕಳೆವದು ಅದು ಮಡಿಯೂ ॥ ೪ ॥

ಹಿರಿಯರ ಗುರುಗಳ ಹರಿದಾಸರ ಕಂಡು
ಚರಣಕ್ಕೆರಗಿ ಭಕ್ತಿಯಲಿ ತರ
ಹರಿಸದೆ ಪುರಂದರವಿಠಲನ ಭರದೆ
ಸ್ಮರಿಸುವದೂ ಅದು ಮಡಿಮಡಿಯೂ ॥ ೫ ॥

## ೨೩೫. ಬಾಹ್ಯಾಡಂಬರ

ಶಂಕರಾಭರಣ ರಾಗ ಆದಿತಾಳ

ತೀರ್ಥವನು ಪಿಡಿದವರೆಲ್ಲ ತಿರುನಾಮಧಾರಿಗಳೇ, ಜನ್ಮ
ಸಾರ್ಥಕವಿಲ್ಲದವರೆಲ್ಲ ಭಾಗವತರೇ ॥ ಪ ॥
ಮೂಗ್ಹಿಡಿದು ನೀರೊಳಗೆ ಮುಳುಗಿ ಜಪತಪವಮಾಡಿ
ವೇದಶಾಸ್ತ್ರ ಪುರಾಣಗಳನೋದಿ ತಿಳಿದು ॥
ಬಾಗಿ ಪರಸ್ತ್ರೀಯರಿಗೆ ಭ್ರಮಿಸಿ ಕಣ್ಣಿಡುವಂಥ
ನೀತಿತಪ್ಪಿದವರೆಲ್ಲ ದೇವಬ್ರಾಹ್ಮರೇ ಕೃಷ್ಣಾ ॥ ೧ ॥

ಪಟ್ಟೆನಾಮವ ಬಳಿದು ಪಾತ್ರೆ ಕೈಯಲಿಪಿಡಿದು
ಗುಟ್ಟನಲಿ ರಹಸ್ಯವ ಗುರುತರಿಯದೇ ॥
ಕೆಟ್ಟ ಕೂಗನು ಕೂಗಿ ಜೊಗಳಿ ಬಾಯಾರುವಂಥ
ಹೊಟ್ಟೆಗುಡ ಮೃಗಗಳೆಲ್ಲ ಶ್ರೀ ವೈಷ್ಣವರೆ ಕೃಷ್ಣಾ ॥ ೨ ॥

ಅಂಗಲಿಂಗದೊಳಗಿರುವ ಚಿನ್ಮಯವ ತಿಳಿಯದೆ
ಲಿಂಗಾಂಗದ ನೆಲೆಯ ಗುರುತರಿಯದೆ ||
ಜಂಗಮ ಸ್ಥಾವರದ ಭಾವವನು ತಿಳಿಯದೆ
ಭಂಗಿಮುಕ್ಕಗಳೆಲ್ಲ ಲಿಂಗವಂತರಹರೇ || ೩ ||
ಅಲ್ಲಾ ಖುದಾ ಎಂದು ಆತ್ಮದಲಿ ತಿಳಿಯದೆ
ಮುಲ್ಲಾ ಶಾಸ್ತ್ರದ ನೆಲೆಯ ಗುರುತರಿಯದೆ
ಜೊಳ್ಳುಕೂಗನು ಕೂಗಿ ಬೊಗಳಿ ಬಾಯಾರುವಂಥ
ಕಳ್ಳ ತುರುಕರಿಗೆಲ್ಲ ಚೀರಸ್ವರ್ಗವುಂಟೆ ಕೃಷ್ಣಾ || ೪ ||
ಹಾಸ್ಯಗಳನು ಕಲಿತು ಘೋಷವಸ್ತ್ರಗಳಾಕಿ
ಆಸೆಗಳ ತೊರೆದೆವೆಂದು ತಪಸು ಕುಳಿತು ||
ವಾಸುದೇವ ಗುರುಕೃಪಾ ಗುರುತರಿಯದಂಥ
ವೇಷಧಾರಿಗಳೆಲ್ಲ ಸನ್ಯಾಸಿಗಳಾಗಬಲ್ಲರೇ ಕೃಷ್ಣಾ || ೫ ||
ಆರುಚಕ್ರದನೆಲೆಯ ಅಷ್ಟಾಂಗ ಯೋಗದಲಿ
ಮೂರು ಮೂರ್ತಿಯ ಮೂರು ಕಡೆಯೊಳಿರಿಸಿ ||
ಮಾರನಯ್ಯ ಕಾ ಗಿ ನೆ ಲೆ ಯಾ ದಿ ಕೇ ಶ ವ ನ
ಸಾರಿಭಜಿಸಿದವರಿಗೆ ಮನದ ಕೊರತೆಯುಂಟೇ || ೬ ||

## ೨೩೬. ದಂಭದಿಂದೇನು ?

ಬೇಹಾಗ ರಾಗ ಏಕತಾಳ

ಬೇವು ಬೆಲ್ಲದೊಳಿಡಲೇನು ಫಲ ನಿತ್ಯ
ಹಾವಿಗೆ ಹಾಲೆರೆದೇನು ಫಲ || ಪ ||
ಕುಟಿಲವ ಬಿಡದಿಹ ಕುಜನರು ಮಂತ್ರದ
ಪಠನೆಯ ಮಾಡಿದರೇನು ಫಲ ||
ಪಟಿಯನ್ನಾಡುವ ಮನುಜರು ಮನದಲಿ
ವಿಠಲನ ನೆನೆದರೇನು ಫಲ || ೧ ||
ಕಪಟತನದಿ ವಂಚಿಸುವ ಮನುಜರು
ಜಪಗಳ ಮಾಡಿದರೇನು ಫಲ ||
ಕುಪಿತಬುದ್ಧಿಯನು ತ್ಯಜಿಸದೆ ನಿತ್ಯದಿ
ಉಪವಾಸವಿದ್ದರಿನ್ನೇನು ಫಲ || ೨ ||

ಮಾತಾಪಿತರನು ಬಳಲಿಸುವ ಮಗ
ಯಾತ್ರೆಯ ಮಾಡಿದರೇನು ಫಲ ||
ಘಾತಕತನವನು ಬಿಡದೆ ನಿರಂತರ
ಶ್ರೀತಿಯನೋದಿದರೇನು ಫಲ || ೩ ||
ಪತಿಯನು ನಿಂದಿಸಿ ಬೊಗಳುವ ಸತಿಯಳು
ವ್ರತಗಳ ಮಾಡಿದರೇನು ಫಲ ||
ಅತಿಥಿಗಳೆಡೆಯಲಿ ಭೇದವ ಮಾಡುತ
ಗತಿಯನು ಬಯಸಿದರೇನು ಫಲ || ೪ ||
ಹೀನ ಕೃತ್ಯಗಳ ಮಾಡುತ ನದಿಯಲಿ
ಸ್ನಾನಮಾಡಿದರೇನು ಫಲ ||
ಶ್ರೀನಿಧಿ ಪುರಂದರವಿಠಲನ ನೆನೆಯದೆ
ಮೌನವ ಮಾಡಿದರೇನು ಫಲ || ೫ ||

ಇದು ನಾಲ್ಕನೆಯ ಗುಂಪು. ಇದರಲ್ಲಿ ಎರಡೇ ಪದ್ಯಗಳು ಇರುವವು. ಈ ಗುಂಪಿನಲ್ಲಿ ದಾಸಶ್ರೇಷ್ಠರು ಮುಖ್ಯವಾಗಿ ಸ್ತ್ರೀಯರ ಕರ್ತವ್ಯಗಳನ್ನು ಆ ಕಾಲದ ವಿಚಾರಪದ್ಧತಿಯಂತೆ ವಿವರಿಸಿರುವರು. ಕಾಲಮಹಿಮೆಯಿಂದ ಈಗ ಎಷ್ಟೋ ಬದಲಾವಣೆಗಳಾಗಿದ್ದರೂ ಈ ಪದ್ಯಗಳು ಓದಲರ್ಹವಾಗಿವೆಯೆಂದು ಇಲ್ಲಿ ಕೊಟ್ಟಿದೆ.

## ೨೩೭. ಸ್ತ್ರೀಯರು ಹೇಗಿರಬೇಕು ?

ಪಂತುವರಾಳಿ ರಾಗ ಅಟತಾಳ

ಸಾರಿದ ಡಂಗುರ ಯಮನು, ಪಾಪಿ
ನಾರಿಯರೆಳತಂದು ನರಕದೋಳಿಡಿರೆಂದು || ಪ ||
ಹೊತ್ತಾರೆದ್ದು ಪತಿಗೆರಗದವಳ
ಮೃತ್ತಿಕೆ ಶೌಚ ಮಾಡದಿಪ್ಪಳ ||
ಬತ್ತಲೆ ಕುಳಿತು ಮೈತೊಳೆವಳ ನಾದಿನಿ
ಅತ್ತೆ ಮಾವನ ಬೈವಳೆಳತನ್ನಿರೊ ಎಂದು || ೧ ||
ತಿಲಕಾಯುಧವ ಬಿಟ್ಟು ಕುಂಕುಮವಿಡುವಳ
ಬೆಳಗಾದಕಾಲಕ್ಕು ಮಲಗಿಪ್ಪಳ ||

ಮಲಿನವಸ್ತ್ರದಿ ಪತಿ ಬಳಿಗೆ ಪೋಗುವ
ಕಲಹಕಾರಿಯಃ ಪಿಡಿದೆಳೆದು ತನ್ನಿರೊ ಎಂದು || ೨ ||
ಉತ್ತಮ ಗುರುಹಿರಿಯರ ನಿಂದಿಸುವಳ
ಹೆತ್ತಮಕ್ಕಳ ಮಾರಿ ಜೀವಿಸುವಳ ||
ಪ್ರತ್ಯೇಕ ಶಯ್ಯದಿ ಮಲಗಿಪ್ಪಳ ಪಿಡಿ-
ದೊತ್ತಿ ಒದರಿ ಕೂಗಿ ಎಳೆದುತನ್ನಿರೊ ಎಂದು || ೩ ||
ಜಲಜಕ್ಕಿ ಸಾಳಿ ಕಂಬಳಿ ಬಾಳಿ ಬಾಕಿ ಗೋಂ
ದಲ ಮೊದಲಾದವು ದೈವವೆಂದು ||
ತಿಳಿದು ಪಿಶಾಚಿ ಎಂಜಲ ಉಂಡು ಹಿಗ್ಗುವ
ಲಲನೇರನಾಲಸ್ಯಗೊಳದೆ ತನ್ನಿರೊ ಎಂದು || ೪ ||
ಒಲುಮೆ ಔಷಧ ಮಾಡಿ ಪತಿಯನೊಲಿಸುವಳ
ಮಲಮಕ್ಕಳೊಳು ಮತ್ಸರಿಸುತಿಪ್ಪಳ ||
ಕಳವಿಲಿ ಕಾಂತನ ಧನ ವಂಚಿಸುವಳ
ಗಳಕೆ ಪಾಶವ ಕಟ್ಟಿ ಎಳೆದು ತನ್ನಿರೊ ಎಂದು || ೫ ||
ನಾಗೇಂದ್ರಶಯನನ ದಿನದಲಿ ಉಪವಾಸ
ಜಾಗರ ಮಾಡದೆ ಮಲಗಿಪ್ಪಳ ||
ಭಾಗವತಾದಿ ಶಾಸ್ತ್ರವ ಕೇಳದೆ ಮತ್ತ-
ಳಾಗಿ ತಿರುಗುವಳ ಎಳೆದು ತನ್ನಿರೊ ಎಂದು || ೬ ||
ಉಡಲಿಲ್ಲ ಉಣಲಿಲ್ಲ ಇಡಲಿಲ್ಲ ತೊಡಲಿಲ್ಲ
ಸುಡಲಿ ಗಂಡನ ಒಗೆತನವೆನ್ನುತ ||
ಹಡೆದವರ ನುಡಿನುಡಿಗೆ ಬೈಯುತಲಿಪ್ಪ
ಕಡು ಪಾಪಿಗಳ ಹೆಡಮುಡಿಕಟ್ಟಿ ತಾ ಎಂದು || ೭ ||
ಗಂಡ ನಿರ್ಧನಿಕನೆಂದಪಮಾನ ಮಾಳ್ಪಳ
ಉಂಡು ಶೇಷಾನ್ನವನುಳಿಸುವಳ ||
ಕೊಂಡೆ ಮಾತುಗಳಿಂದ ಕಳವಳಗೊಳಿಪಳ
ಮಂಡೆ ಕೂದಲು ಹಿಡಿದೆಳೆದು ತನ್ನಿರೊ ಎಂದು || ೮ ||
ಸಾಲೆಲೆಗಳ ಭೇದಮಾಡಿ ಬಡಿಸುವಳ
ನೀಲಾಂಬರವನುಟ್ಟು ಮಡಿಯೆಂಬಳ ||



೨೭-೧೪೧೧

ಬಾಲಕರನು ಬಡಿದಳಿಸುತಿಹಳ ಹಿಂ-
ಗಾಲ ತೊಳೆಯದವಳೆಳೆದು ತನ್ನಿರೊ ಎಂದು || ೯ ||
ಮೊಸಲ ಮಡಿಯನ್ನದಲೆ ಭಕ್ಷಿಸುವಳ ಸ-
ಕೇಶಿಯೊಡನೆ ಗೆಳೆತನ ಮಾಳ್ಪಳ ||
ದಾಸೇರಿಂದಲಿ ಪಾಕಪಾತ್ರೆ ಮುಟ್ಟಿಸುವಳ
ಪಾಶದಿಂದಲಿ ಬಿಗಿದೆಳೆದು ತನ್ನಿರೊ ಎಂದು || ೧೦ ||
ಪತಿಗೆ ಬೇಕಾದವರೊಳು ಮತ್ಸರಿಸುವಳ
ಮೃತವತ್ಸ ಗೋವಿನ ಪಾಲುಂಬಳ ||
ಹುತವಹನನು ಪಾದ ತಳದಿ ನೊಂದಿಸುವಳ
ಮತಿಗೇಡಿಯ ಬಿಡದೆಳೆದು ತನ್ನಿರೊ ಎಂದು || ೧೧ ||
ಮಿಥ್ಯಾವಾದಿಯ ಕೂಡತಿ ಸ್ನೇಹವಮಾಳ್ಪಳ
ಸತ್ತವರ ನೆನೆದಳುತಿಪ್ಪಳ ||
ದತ್ತಾಪಹಾರವ ಮಾಡುತಿಪ್ಪಳ ನೀಚ-
ವೃತ್ತಿಲಿ ಬದುಕುವಳೆಳೆದು ತನ್ನಿರೊ ಎಂದು || ೧೨ ||
ಲಶುನ ವೃಂತಾಕಾದಿಗಳನು ಭಕ್ಷಿಸುವಳ
ಸೊಸೆಯೊಡನೆ ಮತ್ಸರಿಸುತಿಹಳ ||
ಹಸಿದುಬಂದವರಿಗೆ ಅಶನವಿಲ್ಲೆಂಬಳ
ಉಸಿರುಬಿಡದಂತೆ ಎಳೆದು ತನ್ನಿರೊ ಎಂದು || ೧೩ ||
ತುಳಸಿ ವೃಂದಾವನಕಭಿನಮಿಸದವಳ
ಜಲವಶೋಧಿಸದೆ ಪಾಕವಮಾಳ್ಪಳ ||
ಫಲಧಾನ್ಯಾದಿಗಳ ನೋಡದೆ ಪಾಕವಮಾಳ್ಪಳ
ಗಳಕೆ ಪಾಶವಹಾಕಿ ಎಳೆತನ್ನಿರೋ ಎಂದು || ೧೪ ||
ಬಾಲಕರ ತೊಟ್ಟಿಲೊಳಗಿಟ್ಟು ತೂಗುತ
ಹಾಲೆರೆಯುತ ಬೀಸುತ ಕುಟ್ಟುತಾ ||
ಆಲಯದೊಳು ಕೆಲಸಗಳ ಮಾಡುತ ಲಕ್ಷ್ಮೀ-
ಲೋಲನ ಗುಣವ ಪಾಡುವರ ನೋಡದಿರೆಂದು || ೧೫ ||
ಅರಿಷಣ ಕುಂಕುಮ ಪುಷ್ಪಾಂಜನ ವಸ್ತ್ರಾ-
ಭರಣಭೂಷಿತಳಾಗಿ ಪತಿಯೊಡನೆ ||

ಸರಸವಾಡುವ ಸುಖ ಹರಿಗೆ ಸಮರ್ಪಿಸಿ
ಹರುಷಬಡುತಲಿಪ್ಪವರ ಮುಟ್ಟದಿರಿಯೆಂದು || ೧೬ ||
ಅಗಣಿತ ಮಹಿಮ ಶ್ರೀ ಜ ಗ ನ್ನಾ ಥ ವಿ ಠ ಲ ನ
ಹಗಲು ಇರುಳು ಬಗೆಬಗೆಯಿಂದಲಿ ||
ಪೊಗಳುವ ದಾಸರ ಬಗೆ ಎಚ್ಚರಿಕೆಯಲ್ಲಿ
ಸುಗುಣೇರೆಂದಡಿಗೆ ಕೈಮುಗಿದು ಬನ್ನಿರೊ ಎಂದು || ೧೭ ||

## ೨೩೮. ಸ್ತ್ರೀಯರ ಕರ್ತವ್ಯ

ಶಂಕರಾಭರಣ ರಾಗ ಆದಿತಾಳ

ಬುದ್ಧಿಮಾತು ಹೇಳಿದರೆ ಕೇಳಬೇಕಮ್ಮ, ಮಗಳೆ ಮನ
ಶುದ್ಧಳಾಗಿ ಗಂಡನೊಡನೆ ಬಾಳಬೇಕಮ್ಮ || ಪ ||

ಅತ್ತೆಮಾವಗಂಜಿಕೊಂಡು ನಡೆಯಬೇಕಮ್ಮ, ಮಗಳೇ
ಚಿತ್ತದೊಲ್ಲಭನಕ್ಕರೆಯನ್ನು ಪಡೆಯಬೇಕಮ್ಮ ||
ಹೊತ್ತು ಹೊತ್ತಿಗೆ ಮನೆಯ ಕೆಲಸಮಾಡಬೇಕಮ್ಮ, ಮಗಳೇ
ಹತ್ತುಮಂದಿ ಒಪ್ಪುವಹಾಗೆ ನುಡಿಯಬೇಕಮ್ಮ || ೧ ||
ಕೊಟ್ಟುಕೊಂಬುವ ನೆಂಟರೊಡನೆ ದ್ವೇಷಬೇಡಮ್ಮ, ಮಗಳೇ
ಅಟ್ಟು ಉಂಬುವ ಕಾಲದಲ್ಲಿ ಆಟ ಬೇಡಮ್ಮ
ಹಟ್ಟಿ ಬಾಗಿಲಲ್ಲಿ ಬಂದು ನಿಲ್ಲಬೇಡಮ್ಮ, ಮಗಳೇ
ಕಟ್ಟಿ ಆಳುವ ಗಂಡನೊಡನೆ ಸಿಟ್ಟುಬೇಡಮ್ಮ || ೨ ||
ನೆರೆಹೊರೆಯವರಿಗೆ ನ್ಯಾಯವನ್ನು ಹೇಳಬೇಡಮ್ಮ, ಮಗಳೇ
ಗರುವ ಕೋಪ ಮತ್ಸರವನ್ನು ಮಾಡಬೇಡಮ್ಮ ||
ಪರರ ನಿಂದಿಪ ಹೆಂಗಳೊಡನೆ ಸೇರಬೇಡಮ್ಮ, ಮಗಳೆ
ಗುರು ಪು ರಂ ದ ರ ವಿ ಠ ಲ ನ ಸ್ಮರಣೆ ಮರೆಯಬೇಡಮ್ಮ || ೩ ||

ಇದು ಐದನೆಯ ಗುಂಪು. ಇದರಲ್ಲಿ ಎರಡು ಪದ್ಯಗಳಿವೆ. ಇಂಥ ಇನ್ನೂ ಅನೇಕ ಪದ್ಯಗಳನ್ನು ಉದಹರಿಸಬಹುದು. ದಾಸರು ವೈಷ್ಣವರಿದ್ದಾಕ್ಷಣಕ್ಕೆ ಅವರು ಶಿವನನ್ನು ಯಾವದೇರೀತಿ ಹೀನಗಳೆಯಲಿಲ್ಲ ಎಂಬುದನ್ನು ಸಿದ್ಧಪಡಿಸುವುದಕ್ಕಾಗಿಯೇ ಈ ಎರಡು ಪದ್ಯಗಳನ್ನು ಇಲ್ಲಿ ಉದಹರಿಸಿದ್ದೇವೆ.

## ೨೩೯. ಶಿವನ ಸ್ತುತಿ

ನಾದನಾಮಕ್ರಿಯಾ ರಾಗ ಆದಿತಾಳ

ಕಂಡೆ ಕರುಣನಿಧಿಯಾ ಗಂಗೆಯು
ಮಂಡೆಯೊಳಿಟ್ಟ ಧೊರೆಯ || ಪ ||
ರುಂಡಮಾಲೆ ಸಿರಿಯಾ ನೊಸಲೊಳು
ಕೆಂಡಗಣ್ಣಿನ ಬಗೆಯಾ || ಅ. ಪ. ||

ಗಜಚರ್ಮಾಂಬರನ ಗೌರೀವರಜಗದೀಶ್ವರನ
ತ್ರಿಜಗನ್ಮೋಹನನ ತ್ರಿಪುರಾಂತಕ ತ್ರಿಲೋಚನನ || ೧ ||
ಭಸಿತ ಭೂಷಿತಹರನ ಭಕ್ತರ ವಶದೊಳಗಿರುತಿಹನ
ಪಶುಪತಿಯೆನಿಸುವನ ವಸುಧೆಲಿ ಶಶಿಶೇಖರ ಶಿವನ || ೨ ||
ಕಪ್ಪುಕೊರಳ ಹರನ ಕಂದರ್ಪನ ಪಿತಸಖ ಶಿವನ
ಮುಪ್ಪುರಗೆಲಿದವನ ಮುನಿಸು ಸರ್ಪಭೂಷಣ ಭವನ || ೩ ||
ಕಾಮಿತಫಲವೀವನ ಭಕತರ ಪ್ರೇಮದಿ ಸಲಹುವನ
ರಾಮನಾಮ ಸ್ಮರನ ರತಿಪತಿ ಕಾಮನ ಸಂಹರನ || ೪ ||
ಧರೆಗೆ ದಕ್ಷಿಣ ಕಾಶಿಯೆನಿಸುವ ಪುರ ಪಂಪಾವಾಸಿ
ತಾರಕವುಪದೇಶಿ ಪು ರಂ ದ ರ ವಿ ಠ ಲ ಭಕ್ತರ ಪೋಷಿ || ೫ ||

## ೨೪೦. ಹರಿಹರರ ಮಹಿಮೆ

ಕಾಂಬೋಧಿ ರಾಗ ಝಂಪೆತಾಳ

ಆರು ಬಲ್ಲರು ಹರಿಹರಾದಿಗಳ ಮಹಿಮೆಯನು || ಪ ||
ವಾರಿಜೋದ್ಭವ ಸುರೇಂದ್ರಾದಿಗಳಿಗಳವಲ್ಲ || ಅ. ಪ. ||

ಪಾರತ್ರ್ಯವಗೆಲ್ವ ಸಮಯದಲಿ ತಪಮಾಡಿ
ನಾರಾಯಣಾಸ್ತ್ರವನು ಪಡೆದನೀಶ
ಗೌರೀಮನೋಹರನ ಘನತರಾರ್ಚನೆಗೈದು
ಚಾರುತರ ಚಕ್ರವನು ಪಡೆದನಾ ಶೌರಿ || ೧ ||
ಬಲಿಚಕ್ರವರ್ತಿ ಭಕ್ತಿಗೆ ಮೆಚ್ಚಿ ಅವನ ಬಾ
ಗಿಲ ಕಾಯ್ದನಚ್ಯುತನು ಅನುಗಾಲದಿ

ಬಲುಭುಜನು ಬಾಣಾಸುರನ ಗೃಹದ್ವಾರವನು
ಬಳಸಿ ಕಾಯ್ದನು ಹರನು ವರವ ತಾನಿತ್ತು || ೨ ||
ಭೋಗಿಶಯನನು ಆಗಿ ಭೋಗಿಭೂಷಣನಾಗಿ
ವಾಗೀಶನಾಗಿ ಸೃಷ್ಟಿ ಸ್ಥಿತಿಲಯ
ಕ್ಕಾಗು ಕಾರಣ ಕಾರ್ಯ ಕರ್ಮಾದಿರೂಪಕ್ಕೆ
ಕಾಗಿನೆಲೆ ಯಾದಿ ಕೇ ಶ ವ ನ ಮಹಿಮೆಯನು || ೩ ||

ಇನ್ನು ಉಳಿದ ಪದ್ಯಗಳೆಲ್ಲ ನಿಜವಾಗಿ ಸಂಕೀರ್ಣವಾಗಿವೆ. ನಾನಾ ವಿಷಯಗಳನ್ನು ಕುರಿತು ಅವು ಬರೆಯಲ್ಪಟ್ಟಿವೆ. ದಾಸರ ವಿವಿಧ ವಿಷಯದ ಜ್ಞಾನವು ಹಾಗೂ ಅವರ ನಿರೀಕ್ಷಣ ಶಕ್ತಿಯು ಇವುಗಳಲ್ಲಿ ವ್ಯಕ್ತವಾಗುವದು.

ಕೊಳಲಿನ ಸಾಮರ್ಥ್ಯವನ್ನು ಹೇಳುವ ಪದ್ಯವಂತೂ ಅತ್ಯಂತ ಮನೋಹರವಾಗಿದೆ. ಪರಮಾತ್ಮನ ಮಾಯೆಯ ಸಾಮರ್ಥ್ಯವೇ ಅಲ್ಲಿ ವರ್ಣಿತವಾಗಿದೆ

ಕೊನೆಯವೆರಡು ಆರತಿ ಹಾಗೂ ಮಂಗಲ ಪದ್ಯಗಳಿರುವವು.

## ೨೪೧. ದೈನ್ಯಸಾಕು

ಪೂರ್ವಿರಾಗ ಅಟತಾಳ

ಕಾಯಲಾರೆನು ಕೃಷ್ಣ ಕಂಡವರ ಬಾಗಿಲನು |
ನಾಯಿಕುನ್ನಿಗಳಂತೆ ಪರರ ಪೀಡಿಸುತಾ || ಪ ||
ಉದಯದಲಿ ಎದ್ದು ಸಂಧ್ಯಾನ ವಿಧಿಗಳ ಬಿಟ್ಟು |
ಪದುಮನಾಭನ ಸೇವೆಯನು ಮಾಡದೆ ||
ಮೊದಲೆ ನಿನ್ನರ್ಚಿಸದೆ ನರರ ಸದನವ ಪೊಕ್ಕು |
ಒದಗಿ ಸೇವೆಯ ಮಾಡಿ ಅವರ ಬಾಗಿಲನು || ೧ ||
ಕಲ್ಲು ಕರಗಿಸಬಹುದು ಹುರಿಗಡಲೆಯೊಳು ಅದರ |
ತೈಲವನು ತೆಗೆದಾದರುಣ್ಣಲುಬಹುದು ||
ಬಲ್ಲಿದವರ ಮನಸು ಮೆಚ್ಚಿಸಲಾರೆ ಪ್ರತಿ |
ಹಲ್ಲು ಕಿರಿಕಿರಿದು ಹಂಬಲಿಸಿ ಬಾಯ್ಬಿಡುತ || ೨ ||

ಇಂತು ನಾನಾ ಚಿಂತೆಯಲಿ ನಿನ್ನ ನೆನೆಯುದೆ ।
ಭ್ರಾಂತಿಯೆಂತೆಂಬ ಹೆಬ್ಬಲೆಗೆ ಸಿಲುಕಿ ॥
ಅಂತ್ಯವಾದಿಯ ಕಾಣೆ ಅರಿಕೆ ನಿನಗಿನಿತಿಲ್ಲ ।
ಚಿಂತೆಯನು ಬಿಡಿಸಲಯ್ಯ ಪುರಂದರವಿಠಲಾ ॥ ೩ ॥

## ೨೪೨. ಅನ್ನದಾನ

ನಾದನಾಮಕ್ರಿಯೆ ರಾಗ ಅಟತಾಳ

ಊಟಕೆ ಬಂದೆವು ನಾವು, ನಿಮ್ಮ
ಆಟಪಾಟವ ಬಿಟ್ಟು ಅಡುಗೆ ಮಾಡಮ್ಮ ॥ ಪ ॥

ಕತ್ತಲಿಟ್ಟಾವಮ್ಮ ಕಣ್ಣು, ಬಾಯಿ
ಬತ್ತಿಬರುತಲಿದೆ ಕೈಕಾಲು ಜುಮ್ಮು ॥
ಹೊತ್ತುಹೋಗಿಸಬೇಡವಮ್ಮ, ಒಂದು
ತುತ್ತಾದರು ಇತ್ತು ಸಲಹು ನಮ್ಮಮ್ಮ ॥ ೧ ॥
ಒಡಲೊಳಗೆ ಉಸಿರಿಲ್ಲ, ಇನ್ನು
ತಡವಾದರೆ ಜೀವ ನಿಲ್ಲುವದಿಲ್ಲ ॥
ಮಡಿದರೆ ದೋಷ ತಟ್ಟುವದು, ಒಂದು
ಹಿಡಿ ಅಕ್ಕಿಯಿಂದಲೆ ಕೀರ್ತಿ ಬಾಹೋದು ॥ ೨ ॥
ಹೊನ್ನರಾಸಿಯ ತಂದು ಸುರಿಯೆ, ಕೋಟಿ
ಕನ್ನಿಕೆಯರ ತಂದು ಧಾರೆಯನೆರೆಯೆ ॥
ಅನ್ನದಾನಕಿನ್ನು ಸರಿಯೆ, ಪ್ರ
ಸನ್ನ ಪುರಂದರವಿಠ್ಠಲ ಧೊರೆಯೇ ॥ ೩ ॥

## ೨೪೩. ಯಾರು ಮೂರ್ಖರು?

ಕೇದಾರಗೌಳ ರಾಗ ಝಂಪೆತಾಳ

ಮೂರ್ಖರಾದರು ಜನರು ಲೋಕದೊಳಗೆಲ್ಲ
ನಿಕದೇವನ ಬಿಟ್ಟು ಕಾಕು ದೈವವ ಭಜಿಸಿ ॥ ಪ ॥
ಒಂಟಿಯಲಿ ಹೆಂಡತಿಯ ಬಿಡುವಾತನೇ ಮೂರ್ಖ
ಗಂಟನೊಬ್ಬರ ಕೈಯಲೊಪ್ಪಿಸುವ ಮೂರ್ಖ ॥

ನೆಂಟರಿಗೆ ಸಾಲವನು ಕೊಡುವಾತ ಮೂರ್ಖ ಜನ-
ಕಂಟಕನಾಗಿ ಇರುವವನೆ ಕಡುಮೂರ್ಖ || ೧ ||
ಪಡೆದ ಮಕ್ಕಳ ಮಾರಿ ಒಡಲ ಪೊರೆವವ ಮೂರ್ಖ
ಮಡದಿ ಹುಟ್ಟಿದ ಮನೆಯಲಿರುವವ ಮೂರ್ಖ ||
ಬಡತನವು ಬಂದಾಗ ಬೈದುಕೊಂಬುವ ಮೂರ್ಖ
ದೃಢಭಕ್ತಿಯಿಲ್ಲದವ ಕಡುಮೂರ್ಖನಯ್ಯ || ೨ ||
ಸತ್ತ ಕರುವಿನ ಗೋವ ಹಾಲು ಉಣ್ಣುವ ಮೂರ್ಖ
ಒತ್ತೆ ಇಲ್ಲದೆ ಸಾಲ ಕೊಡುವವ ಮೂರ್ಖ ||
ಹತ್ತೆಂಟು ಬಗೆಯಲ್ಲಿ ಹಂಬಲಿಸುವವ ಮೂರ್ಖ
ಹೆತ್ತ ತಾಯ ಬಯ್ಯುವವನೆ ಕಡುಮೂರ್ಖ || ೩ ||
ಸ್ವಾಮಿ ನಾಮವ ಬಿಡದೆ ಭಜಿಸದಿದ್ದವ ಮೂರ್ಖ
ಸ್ವಾಮಿ ಗುರುಹಿರಿಯರಿಗೆರಗದವ ಮೂರ್ಖ ||
ನೇಮದಲಿ ಹರಿಕಥೆಯ ಕೇಳದವ ತಾ ಮೂರ್ಖ
ತಾಮಸವ ಕೂಡಿಕೊಂಬುವನೆ ಕಡುಮೂರ್ಖ || ೪ ||
ಉಂಡಮನೆಗೆರಡನ್ನು ಬಗೆಯುವಾತನೆ ಮೂರ್ಖ
ಕೊಂಡೆ ನುಡಿ ಕೇಳಿ ಕೊಲಿಸುವವ ಮೂರ್ಖ ||
ಪುಂಡರೀಕಾಕ್ಷ ಶ್ರೀ ಪುರಂದರವಿಠಲನ
ಕೊಂಡಾಡಿ ಭಜಿಸದವ ಕಡುಮೂರ್ಖನಯ್ಯ || ೫ ||

## ೨೪೪. ಹಂಗಿಲ್ಲದವರು ಭ್ರಷ್ಟರು

ಸಾರಂಗ ರಾಗ ಝಂಪೆ ತಾಳ

ಎಲ್ಲಿದ್ದರೇನು ಹರಿಗಲ್ಲದವನು
ಸಲ್ಲುವದೆ ಸದ್ಗತಿಗೆ ಸಂತತವು ಜಪಿಸಿದರೆ || ಪ ||
ಕಪ್ಪೆ ಕಮಲದ ಬಳಿಯ ತಪ್ಪದಲೆ ಅನುಗಾಲ
ಇಪ್ಪದೆ ಒಂದು ಅರೆಘಳಿಗೆ ಬಿಡದೆ ||
ಒಪ್ಪದಿಂದಲಿ ಅದರ ಪರಿಮಳದ ಸೊಬಗು
ಕಪ್ಪೆ ವಾಸನೆಗೊಂಡು ಹರುಷಬಡಬಲ್ಲದೆ || ೧ ||
ಹಾಲುಗೆಚ್ಚಲ ಬಳಿಯ ತೊನಸಿ ಹತ್ತಿಕೊಂಡು

ಕಾಲವನು ಕಳೆವ ಬಗೆ ಬಲ್ಲಿರಲ್ಲಾ ||
ವೇಳೆವೇಳೆಗೆ ಹಸುವು ಕರೆದುಂಬ ತೆರನಂತೆ
ಕೀಳು ತೊನಸಿಯು ಉಂಡು ಹರುಷಬಡಬಲ್ಲುದೆ || ೨ ||
ತುಲಸಿ ಸನ್ನಿಧಿಯಲ್ಲಿ ನೀರುಳ್ಳಿಯನೆ ಹಾಕೆ
ಹೊಲಸು ಹೋಗದು ಹಲವು ಕಾಲಿದ್ದರೂ ||
ತಿಳಿವಳಿಕೆಯಿಲ್ಲದವ ಶ್ರೀ ವಿ ಜ ಯ ವಿ ಠ್ಠ ಲ ರಾ ಯ ನ
ಬಳಿಯಲಿದ್ದರೆ ಏನು ದೂರಿದ್ದರೇನು || ೩ ||

## ೨೪೫. ಯಾರಿಗೆ ಏನು ಗೊತ್ತು

ಮುಖಾರಿ ರಾಗ ಝಂಪೆ ತಾಳ

ಪಾಪಿ ಬಲ್ಲನೆ ಪರರ ಸುಖದುಃಖವ
ಕೋಪಿ ಬಲ್ಲನೆ ಶಾಂತ ಶೀಲ ಗುಣವ || ಪ ||
ಕತ್ತೆ ಬಲ್ಲುದೆ ಹೊತ್ತ ಕಸ್ತುರಿಯ ಪರಿಮಳವ
ಮೃತ್ಯು ಬಲ್ಲಳೆ ವೇಳೆ ಹೊತ್ತೆಂಬುದ ||
ತೊತ್ತು ಬಲ್ಲಳೆ ಮಾನ ಅಭಿಮಾನವೆಂಬುದನು
ಭೃತ್ಯ ಬಲ್ಲನೆ ಒಡೆಯಗಿರುವ ಕಷ್ಟಗಳ || ೧ ||
ಹೇನು ಬಲ್ಲುದೆ ಮುಡಿದ ಹೂವಿನ ಪರಿಮಳವ
ಶ್ವಾನ ಬಲ್ಲುದೆ ರಾಗ ಭೇದಂಗಳಾ ||
ಮೀನ ಬಲ್ಲುದೆ ನೀರು ಸೌಳು ಸ್ವಾದೆಂಬುದನು
ಹೀನ ಬಲ್ಲನೆ ಸುಗುಣ ದುರ್ಗುಣವನು || ೨ ||
ಬಾಳೆ ಬಲ್ಲುದೆ ಮರಳಿ ಫಲವಾಗೊ ಸುದ್ದಿಯನು
ಸೂಳೆ ಬಲ್ಲಳೆ ಗೆಳೆಯಗಿಹ ಬಡತನ ||
ಕೇಳಬಲ್ಲನೆ ಕಿವುಡ ಏಕಾಂತ ಮಾತುಗಳ
ಹೇಳಬಲ್ಲನೆ ಮೂಕ ಕನಸ ಕಂಡುದನೂ || ೩ ||
ಕಾಗೆ ಬಲ್ಲುದೆ ಒಳ್ಳೇ ಕೋಗಿಲೆಯ ಸ್ವರವನು
ಗೂಗೆ ಬಲ್ಲುದೆ ಹಗಲ ಹರಿದಾಟವ ||
ಜೋಗಿ ಬಲ್ಲನೆ ಮನೆಯೊಳಿಲ್ಲ ಉಂಟೆಂಬುದನು
ರೋಗಿ ಬಲ್ಲನೆ ಮಿಷ್ಟಾನ್ನದ ರುಚಿಯನೂ || ೪ ||

ಹೇಡಿ ಬಲ್ಲನೆ ರಣದ ಸಾಹಸದ ಶೌರ್ಯವನು
ಕೋಡಗವು ಬಲ್ಲುದೆ ರತ್ನಬೆಲೆಯ ||
ಬೇಡಿದುದ ಕೊಡಲು ಪು ರಂ ದ ರ ವಿ ಠ ಲ ನಲ್ಲದೆ
ನಾಡ ದೈವಗಳೇನು ಕೊಡಬಲ್ಲವೋ || ೫ ||

## ೨೪೬. ಕರ್ಮವಿಪಾಕ

ಮುಖಾರಿ ರಾಗ ಝಂಪೆತಾಳ

ಪ್ರಾಚೀನ ಕರ್ಮವು ಬಿಡಲರಿಯದು
ಯೋಚನೆಯಮಾಡಿ ನೀ ಬಳಲಬೇಡ || ಪ ||
ಮುನ್ನಮಾಡಿದ ಕರ್ಮ ಬೆನ್ನಟ್ಟಿ ಬರುತಿರಲು
ತನ್ನಿಂದ ತಾನೆ ತಿಳಿಯಲರಿಯದೆ ||
ಇನ್ನು ದೇಹವನು ಆಶ್ರಯಿಸಿ ಫಲವೇನು
ಉನ್ನಂತ ಹರುಷದಲಿ ಮನದಿ ಯೋಚಿಸುವ || ೧ ||
ಲೋಕಾದಿ ಲೋಕಗಳ ತಿರುಗುವ ರವಿರಥಕೆ
ಏಕ ಗಾಲಿಗೆ ಏಳು ಕುದುರೆ ಕಟ್ಟಿ ||
ಆಕಾಶಮಾರ್ಗದಲಿ ತಿರುಗುವ ಅರುಣನಿಗೆ
ಬೇಕಾದ ಚರಣಗಳ ಕೊಡಲಿಲ್ಲ ಹರಿಯು || ೨ ||
ಸೇತುವೆಯ ಕಟ್ಟಿ ಲಂಕೆಗೆ ಹಾರಿ ಹನುಮಂತ
ಖ್ಯಾತಿಯನೆ ಮಾಡಿ ರಾವಣನ ಗೆದ್ದು ||
ಸೀತೆಯನು ತಂದು ಶ್ರೀರಾಮನಿಗೆ ಕೊಡಲಾಗಿ
ಪ್ರೀತಿಯಿಂ ಕೌಪೀನ ಬಿಡಿಸಲಿಲ್ಲ ಹರಿಯು || ೩ ||
ನಿತ್ಯದಲಿ ಗರುಡ ಸೇವೆಯಮಾಡಿ ವಿಷ್ಣುವಿನ
ಹೊತ್ತುಕೊಂಡು ಇದ್ದ ಜಗವರಿಯಲು ||
ಅತ್ಯಂತ ಸೇವಕನೆಂದು ಮೂಗಿನ ಡೊಂಕು
ಎತ್ತಿ ನೆಟ್ಟಗೆ ಮಾಡಲಿಲ್ಲ ಶ್ರೀಕೃಷ್ಣ || ೪ ||



೨೮–೧೪೧೧

## ೨೪೭. ಯಾವುದು ಭೂಷಣ?

ಸಾರಂಗ ರಾಗ ಝಂಪೆತಾಳ

ಭೂಷಣಕೆ ಭೂಷಣ ಇದು ಭೂಷಣ
ಶೇಷಗಿರಿವಾಸ ಶ್ರೀವರ ವೆಂಕಟೇಶಾ || ಪ ||
ನಾಲಿಗೆಗೆ ಭೂಷಣ ನಾರಾಯಣ ನಾಮ
ಕಾಲಿಗೆ ಭೂಷಣ ಹರಿಯಾತ್ರೆಯೂ ||
ಆಲಯಕೆ ಭೂಷಣ ತುಲಸಿ ವೃಂದವನ ವಿ-
ಶಾಲ ಕರ್ಣಕೆ ಭೂಷಣ ವಿಷ್ಣು ಕಥೆಯೂ || ೧ ||
ದಾನವೇ ಭೂಷಣ ಎರಡು ಹಸ್ತಂಗಳಿಗೆ
ಮಾನವೇ ಭೂಷಣ ಮಾನವರಿಗೇ ||
ಜ್ಞಾನವೇ ಭೂಷಣ ಮುನಿಯೋಗಿ ವರಗಳಿಗೆ
ಮಾನಿನಿಗೆ ಭೂಷಣ ಪತಿಭಕ್ತಿಯೂ || ೨ ||
ರಂಗ ನಿನ್ನ ನೋಡುವದೆ ಕಂಗಳಿಗೆ ಭೂಷಣ
ಮಂಗಳಾಂಗನ ಮಣಿಯೆ ಶಿರಭೂಷಣ ||
ಶೃಂಗಾರ ತುಲಸಿಮಣಿ ಕೊರಳಿಗೆ ಭೂಷಣ
ರಂಗವಿಠ್ಠಲ ನಿನ್ನ ನಾಮ ಅತಿಭೂಷಣ || ೩ ||

## ೨೪೮. ಅನ್ಯದೇವತೆಗಳು ಬೇಡ

ನಾದನಾಮಕ್ರಿಯಾ ರಾಗ ಅದಿತಾಳ

ತಾಳಿಯ ಹರಿದು ಬಿಸಾಟಿ, ಇಂಥ
ಕೀಳು ದೇವತೆಗಳ ಹೆಸರಲ್ಲಿ ಕಟ್ಟಿದ || ಪ ||
ಒಡತಿ ಎಲ್ಲಮ್ಮನೆಂದು ಇಲ್ಲದ್ದರಕೆ ಹೊತ್ತು
ಸಿಡಿಯ ಊರಿಸಿಕೊಂಡು ಜೋಲಾಡುವಿ ||
ಕಡುಕೋಪದಿಂದ್ಯಮನವರು ಶಿಕ್ಷಿಸಲು ನಿ-
ನ್ನೊಡನೆ ಬಂದಾಗ ರಕ್ಷಿಸುವಳೆ ಮೂಳಿ || ೧ ||
ಹೊಸ ನವಣೆಯ ಹುಗ್ಗಿ ಹೊಸ್ತಲ್ಹುಣ್ಣಿವೆ ದಿನ
ಹಸನಾಗಿ ಮಾಡಿ ಹೊಸ್ತಿಲ ಪೂಜೆಯ ||
ನಿಸಿಯಲ್ಲಿ ಗೈವದು ತರವಲ್ಲ ಇದರಿಂದ

ಅಸಿಪತ್ರವನದಲ್ಲಿ ಬಳಲುವೆ ಮೂಳಿ ॥ ೧ ॥
ಬನದ ಹುಣ್ಣಿವೆ ದಿನ ನೂರೆಂಟು ಪಲ್ಲ್ಯಗ
ಳನು ಮಾಡಿ ಭಕ್ತಿಯಿಂ ಪೂಜಿಸುವಿ ॥
ದಿನಪನ ಸುತನ ದೂತರು ಎಳೆದೊಯ್ವಾಗ
ಬನದ ಶಂಕರಿ ಕಾಯಲರಿವಳೇ ಮೂಳಿ ॥ ೨ ॥
ಚಂದಮ್ಮನ್ಹೆಸರಿಟ್ಟಲಂಕಾರಗಳ ಮಾಡಿ
ನಂದನವ ನೋಡಿ ಸುಖಬಡುವ ॥
ಮುಂದೆಗಾಣದೆ ಎಳೆದೊಯ್ದು ಮಖುರದೊಳು
ಕೊಂದರೆಂಬದು ಕೇಳಿ ತಿಳಿಯಲಿಲ್ಲವೇ ಮೂಳಿ ॥ ೩ ॥
ಭಾರತಹ್ಣುಣ್ಣಿಮೆ ದಿನ ದೇವತೆಯ ಮಾಡಿ
ಹೂರಣದಾರತಿಯನು ಬೆಳಗಿ ॥
ಸೀರೆ ಕಳೆದು ತೊಪ್ಪಲುಡುವದುಚಿತವಲ್ಲ
ರೌರವ ನರಕಕ್ಕೈದುವೆ ಕೇಳೆ ಮೂಳಿ ॥ ೪ ॥
ದುರುಳ ಭವಾನಿಯ ಬಿರಿದೆಂದು ಕವಡಿಯ
ಸರಕಂಠದಲ್ಲಿ ಕಟ್ಟಿ ಕವುಟನುಟ್ಟು
ಭರದಲ್ಲಿ ಹ ಡ ಗ ಲಿ ಕಡೆಯೊಗದಲೆ ವೈ-
ತರಣಿ ನರಕ ನಿನಗಹುದೆಲೆ ಮೂಳಿ ॥ ೫ ॥
ಚೆನ್ನಾಗಿ ಸಾಗರ ಉಪವಾಸವನು ಮಾಡಿ
ಮಣ್ಣು ಹುತ್ತಿಗೆ ಹಾಲು ಎರೆದು ಬರುವಿ ॥
ವನ್ನಜಾಕ್ಷನ ಪುತ್ರನಲ್ಲಿ ದಂಡಿಸುವಾಗ
ನಿನ್ನ ಸಂಗಡ ಮಾತಾಡುವನೇನೇ ಮೂಳಿ ॥ ೬ ॥
ಕಂಚಿನ ಗಡಿಗೆ ಸೌಭಾಗ್ಯ ಕೊಡುವದೆಂದು
ಅರ್ಚಿಸುವೆಲೆ ನೀ ಮಾಡುವ ತಪ್ಪಿಗೆ ॥
ಕಿಚ್ಚಾಗಿ ಕಾಲನಾಳುಗಳು ನಿನ್ನನು ಬಹು
ನುಚ್ಚು ನುಚ್ಚು ಮಾಡಿ ಕೊಲ್ವರೆ ಮೂಳಿ ॥ ೭ ॥
ಸಿರಿಬೊಮ್ಮಾದಿಗಳೊಡೆಯನು ಹರಿಯಿರಲಾಗಿ
ಹಿರಿಯನೊಡೆಯನೆಂದು ಕಲ್ಪಿಸುತಾ ॥
ಪರತೊಟ್ಟಿಲೇರಿಸಿ ಹೆಸರಿಟ್ಟು ಕರೆವಿ ನಿನ್ನ-
ವರೆ ಯಮಕಿಂಕರರು ಕೇಳೇ ಮೂಳಿ ॥ ೮ ॥

ಕರಿಮಣಿ ಕೇಶವಿಲ್ಲದ ಮುಂಡೆ ಕರೆತಂದು
ಸಿರಿಸಹದೇವಿಯೆಂದರ್ಚಿಸುವಿ ||
ಹಿರಿಯರ ಸಮ್ಮತವಲ್ಲದುಯೆಂದೆಂದು
ನರಕದೊಳುರುಳುವಿ ನಿಶ್ಚಯವೆಲೆ ಮೂಳಿ || ೧೦ ||
ಖಂಡೇರಾಯನ ಮಾಡಿ ಕೆಂಡದಿ ರೊಟ್ಟಿಯು
ಗುಂಡಿಗಿ ತುಪ್ಪವನರ್ಪಿಸುವಿ ||
ಚಂಡ್ಯಮನೊರು ಕೂಡಿ ಕೊಂಡೊಯ್ದಿಡುವಾಗ
ಖಂಡೇರಾಯ ಕಾಯ್ದುಕೊಂಡಾನೆ ಮೂಳಿ || ೧೧ ||
ಹಡೆದ ಮಕ್ಕಳ ಮುಂಜಿ ಮದುವೆಗೆ ನೇಮಿಸಿ
ಮಡಿವಾಳಿತಿಯ ಅಧಃಕೇಶ ತಂದು ||
ಸಡಗರದಲಿ ಸ್ಥಾಪಿಸುವಿ ಕುಂಭಿಪಾಕದೊ-
ಳಡಿಗೆಯ ಮಾಡಿಸುವರು ಮೂಳಿ || ೧೨ ||
ಜಲದೇವರೆಂದು ಮೂರೆಡೆಗೆ ದೀಪವ ತುಂಬಿ
ಜಲಜನಾಭನಿಗೆ ಅರ್ಪಿತವಲ್ಲದ |
ಮಲವುಂಡು ಸತ್ಕುಲ ಕೆಡಿಸುವಿ ನಿನ್ನ ಮೈ
ಹೊಳಸ್ಯಾರು ಚೆನ್ನಾಗಿ ಯಮನಾಳು ಮೂಳಿ || ೧೩ ||
ಪರಿಪರಿ ವಾದ್ಯಸಂಯುಕ್ತ ಮೈಯುಬ್ಬಿಸಿ
ಹರುಷದಿ ಈಚಲಗೊನೆಯ ತಂದು ||
ವರ ಮಂದಿರದೊಳು ಪೂಜಿಸುವಿ ನೀಕಾಲದ
ನಿರಯದಿವರು ದಂಡಿಪರೆಲೆ ಮೂಳಿ || ೧೪ ||
ಹಿಂದಿನಾಚಾರವೇನಾದರಾಯಿತು
ಮುಂದಾರು ಮುಕುತಿ ಪಥವ ಬಯಸಿ ||
ಕಂದೆರದು ನೋಡದನ್ಯ ದೈವಗಳ ಪು-
ರಂದರವಿಠಲನ ಭಜಿಸೆಲೆ ಮೂಳಿ || ೧೫ ||

## ೨೪೯ ಮನ್ಮಥನ ಕಾಟ

ಸಾವೇರಿ ರಾಗ ಝಂಪೆತಾಳ

ಪಥನಡೆಯದಯ್ಯ ಪರಲೋಕಸಾಧನಕೆ ಮ- |
ನ್ಮಥನೆಂಬ ಖಳನು ಮಾರ್ಗವ ಕಟ್ಟಿ ಸುಲಿಯುತಿರೆ || ಪ ||

ತನುರೋಮ ಗಿಡ-ವೃಕ್ಷ ಥಳಥಳಿಪ ಭುಜಲತೆಯು |
ವನಸಿಂಹಗಜ ಮೃಗಗಳಿಂದೊಪ್ಪುವ ||
ವನಿತೆಯರ ಕಾಯಕಾಂತಾರೆಂಬ ಮಾರ್ಗದಲಿ |
ಘನ ಕುಚಗಳೆಂಬೊ ಕಣಿವೆಯ ಮಧ್ಯಸೇರಿಹನು || ೧ ||
ಗಿಳಿ ನವಿಲು ವಸಂತ ಭ್ರಮರಗಳು ಒಂದಾಗಿ |
ಬಲದೊಡನೆ ಮದನ ಮಾರ್ಗವ ಕಟ್ಟಲು ||
ಬಲವುಳ್ಳ ಭಕ್ತ ಮುನಿ ಸನ್ಯಾಸಿ ಯೋಗಿಗಳು |
ಸುಲಿಸಿಕೊಂಡರು ಕೆಲರು ಸಿಕ್ಕಿದರು ಸೆರೆಯ
ಕಾಳಗದೊಳಿದಿರಿಲ್ಲ ಸುರರು ದಾನವರು ಕ- |
ಟ್ಟಾಳು ಮನ್ಮಥನ ಛಲದಂಕ ಬಿರಿದು ||
ಹೇಳಲಿನ್ನೇನು ಬಿ ಡ ದಾ ದಿ ಕೇ ಶ ವ ರಾ ಯ |
ನಾಳ ಸಂಗಡ ಹೋದರಾವ ಭಯವಿಲ್ಲ || ೩ ||

## ೨೫೦. ನಿಂದಕರು ಬೇಕು

ನಾದನಾಮಕ್ರಿಯಾ ರಾಗ ಆದಿತಾಳ

ನಿಂದಕರಿರಬೇಕಿರಬೇಕು || ಪ ||
ಹಂದಿಯಿದ್ದರೆ ಕೇರಿ ಹ್ಯಾಂಗೆ ಶುದ್ಧಿಯೊ ಹಾಂಗೆ || ಅ. ಪ. ||
ಅಂದಂದು ಮಾಡಿದ ಪಾಪವೆಂಬ ಮಲ
ತಿಂದು ಹೋಗುವರಯ್ಯ ನಿಂದಕರು ||
ವಂದಿಸಿ ಸ್ತುತಿಸುವ ಜನರೆಲ್ಲರು ನಮ್ಮ
ಪೊಂದಿದ ಪುಣ್ಯವನೊಯ್ಯುವರಯ್ಯ || ೧ ||
ದುಷ್ಟಜನರು ಈ ಸೃಷ್ಟಿಯೊಳಿದ್ದರೆ
ಶಿಷ್ಟಜನರಿಗೆಲ್ಲ ಕೀರ್ತಿಗಳು ||
ಇಷ್ಟಪ್ರದ ಶ್ರೀಕೃಷ್ಣ ನಿನ್ನೊಳು
ಇಷ್ಟೆ ವರವನು ಬೇಡುವೆನಯ್ಯ || ೨ ||
ದುರುಳ ಜನಂಗಳು ಚಿರಕಾಲವಿರುವಂತೆ
ಕರವ ಮುಗಿದು ವರ ಬೇಡುವೆನು ||
ಪರಿಪರಿ ತಮಸಿಗೆ ಗುರಿಯಹರಲ್ಲದೆ
ಪರಮದಯಾನಿಧೆ ಪು ರಂ ದ ರ ವಿ ಠ ಲ || ೩ ||

## ೨೫೧. ಮಗನಿಂದ ಗತಿ ಎಂಬದು ಸುಳ್ಳು

ಪೂರ್ವಿರಾಗ ಮಟ್ಟೆ ತಾಳ

ಮಗನಿಂದ ಗತಿಯುಂಟೆ ಜಗದೊಳು ‖ ಪ ‖
ನಿಗಮಾಂತಸಾರ ಮುಕ್ತಿಯಲ್ಲದಲೇ ‖ ಅ. ಪ. ‖
ತ್ರಿಗುಣರಹಿತ ಪರಮಾತ್ಮನ ಧ್ಯಾನದಿ
ಹಗಲಿರಳು ನಿತ್ಯಾನಂದದಿ ‖
ತೆಗೆದು ಪ್ರಪಂಚವಾಸನೆಯ ಸುಟ್ಟವರಿಗೆ
ಮಗನಿದ್ದರೇನು ಇಲ್ಲದಿದ್ದರೇನು ‖ ೧ ‖
ಲಲನೆ ಪುರುಷರು ತಮತಮ್ಮ ಕಾಮದ
ಸಲುವಾಗಿ ಕೂಡೆ ಶೋಣಿತ ಶುಕ್ಲದಿ ‖
ಮಿಳಿತ ಮಾಂಸಪಿಂಡ ತನ್ನ ಪೂರ್ವಗತಿಯಿಂದ
ನೆಲಕೆ ಬೀಳಲು ತಾನು ಸಲಹಿ ರಕ್ಷಿಪುದೇ ‖ ೨ ‖
ಪರಮ ದುಷ್ಟನು ಆಗಿ ಮರೆತು ಸದ್ಧರ್ಮವ
ಗುರುಹಿರಿಯರ ಸಾಧುಗಳ ನಿಂದಿಸಿ ‖
ಬೆರೆದನ್ಯಜಾತಿಯ ಪರನಾರಿಯ ಕೂಡಿ
ಹಿರಿಯರ ಜರೆದು ಆ ನರಕಕ್ಕೆ ಬೀಳುವ ‖ ೩ ‖
ಸತ್ಯನೊಬ್ಬ ಮಗ ಶಾಂತನೊಬ್ಬ ಮಗ ದುರ-
ವೃತ್ತಿನಿಗ್ರಹ ಸಮಚಿತ್ತನು ‖
ಉತ್ತಮರೀ ನಾಲ್ಕು ಮಕ್ಕಳಿದ್ದ ಮೇಲೆ
ಹೆತ್ತರೆ ಫಲವೇನು ಹೆರದಿದ್ದರೇನಯ್ಯ ‖ ೪ ‖
ಸುತರಿಲ್ಲದವರಿಗೆ ಗತಿಯಿಲ್ಲವೆಂಬೊದು
ಕೃತಕಶಾಸ್ತ್ರ ಲೌಕಿಕ ಭವಕೆ ‖
ಕ್ಷಿತಿಯೊಳು ಬಿಡದೊಡೆಯಾ ದಿ ಕೇ ಶ ವ ಜಗ-
ತ್ಪತಿಯ ಧ್ಯಾನಿಪಗೆ ಸದ್ಗತಿ ಇಲ್ಲದ್ಹೋಗದೋ ‖ ೫ ‖

## ೨೫೨. ಕೊಳಲಿನ ಸಾಮರ್ಥ್ಯ

ಆನಂದಭೈರವಿ ರಾಗ ಏಕತಾಳ

ರಂಗ ಕೊಳಲನೂದಲಾಗಿ, ರಂಗಯ್ಯ ಕೊಳಲನೂದಲು ‖ ಪ ‖
ಮಂಗಲಮಯವಾದಿತು ಧರೆ ಜ-

ನಂಗಳು ಜೀವನ ಚೇತನ ಮರೆದು
ರಂಗಧ್ಯಾನಪರರಾದರು ॥ ಅ. ಪ. ॥
ಬಾಡಿದ ಬಳ್ಳಿ ಮರಾ ಗೊನೆಯೊಡೆದವು
ತೀಡುವ ಮಂದ ಮಾರುತನ ಕೂಡ ತೂ-
ಗ್ಯಾಡುವ ವನದ ಫಲದ ಗೊಂಚಲದಿ
ಪಾಡಲೊಲ್ಲವಳಿ ಕುಲಗಳು ॥
ಹೇಡಿಗೊಂಡವು ಚಾಣ್ವಕ್ಕಿ ಗಿಳಿಯು ಮಾ-
ತಾಡದೆ ಕಳೆಗುಂದಿದವು ಕೋಕಿಲ
ಓಡ್ಯಾಟ ವೈರಾಟ ಜರೆದು ಖಗಮೃಗ
ಗಾಢನಿದ್ರೆ ವಶವಾದವು ॥ ೧ ॥
ಕೆಚ್ಚಲು ಬಿಗಿದ ತೊರೆದ ಮೊಲೆಯು
ವತ್ಸವಗಲಿಸಿ ಅರೆದೆಳೆ ಹುಲ್ಲು
ಕಚ್ಚಿ ಅಲ್ಲ ಅಲ್ಲಿಗೆ ನಿಂತವು ತಲೆಯು
ಪುಚ್ಛವ ನೆಗಹಿ ನೀಂಟಿಸಿ ॥
ಅಚ್ಯುತನ ಕೃತಿ ನೋಡಲು ಸುರರಿ
ಗಚ್ಚರವಾಯಿತು ಅವು ಕಂಡಾನಂದ
ಮೆಚ್ಚಿ ಮುಕುಂದನ ಲೀಲಾವಿನೋದಕೆ
ಅಚ್ಚ ಕುಸುಮವ ಸುರಿದರು ॥ ೨ ॥
ತೆಳಗಿನೋದಕ ಉಕ್ಕೇರಿ ಬಂದವು
ತುಳುಕಿ ಚಲ್ಲಾಡಿ ನಿಂತಳು ಯಮುನೆ
ಮೇಲೆ ಮೋಡೊಡ್ಡಿ ಮೇಘಾಳಿ ಭೋರಿಟ್ಟವು
ಕಲ್ಲು ಕರಗಿ ನೀರಾದವು ॥
ನಳಿನ ಚಂಪಕ ನಾಗ ಪನ್ನಗ ಪಾ-
ಟಲ ಶಾವತಿಗೆ ಕುಂದ ಬಕುಲವು
ಮಾಲತಿ ಜಾಜಿಯು ಪರಿಮಳಂಗೂಡಿ
ನೀಲಾಂಗನಂಘ್ರಿಗೆ ಎರಗಿದವು ॥ ೩ ॥
ಮುದ್ದು ಮೋಹನ್ನನ ಮಂಜುಳ ಸಂಗೀತ
ಸದ್ದನಾಲಿಸಿ ಗೋಪಾಂಗನೇರೆಲ್ಲರು

ಬುದ್ಧಿ ಸೂರಾಡಿದರಂಗಜ ಶರಕೆ
ಬಿದ್ದು ಪರವಶರಾದರು ||
ಸಿದ್ಧ ಮುನಿಜನರಿದ್ದ ಸಮಾಧಿಯೋ-
ಳೆದ್ದೆದ್ದು ಕುಣಿದು ಎದೇ ತಾವರೆ
ಗದ್ದುಗೆಯರಸನೊಲಿಸಿಕೊಂಡರು
ಗೆದ್ದರು ಭವ ಸಮುದ್ರವ || ೪ ||
ಶ್ರೀ ಮನೋಹರ ಮೂರುತಿ ಗೋಪಾಲನು
ಆ ಮಧು ಮಧುಕುಂಜವನಾದಿ ತ್ರಿಭಂಗಿಸಿ
ಹೇಮಾಂಬರುಟ್ಟು ಗೀರ್ಗಂಧ ಕಸ್ತೂರಿಯು
ನಾಮಕುಂಡಲದ ಬೆಳಕಿನಲ್ಲಿ ||
ದಾಮ ವನಮಾಲಿ ರತನಾಭರಣದ
ಸ್ವಾಮಿ ಶ್ರೀ ಪ್ರ ಸ ನ್ನ ವೆಂ ಕ ಟ ಕೃ ಷ್ಣ ನ
ನಾ ಮ ಕ್ರಿ ಗುಂ ಡ ಕ್ರಿ ಮೇಘರಾಗವ ಮಾಡಿ
ಸಾಮಗಾಯನದಿ ನಮೋ ಎಂದರು || ೫ ||

## ೨೫೩. ಆರತಿ

ನಾದನಾಮಕ್ರಿಯಾ ರಾಗ ಆದಿತಾಳ

ಆನಂದಮಯಗೆ ಚಿನ್ಮಯಗೆ ಲ-
ಕ್ಷ್ಮೀ ನಾರಾಯಣ ಗಾರುತಿ ಎತ್ತಿರೆ || ಪ ||
ವೇದವ ತಂದು ಬೆಟ್ಟವ ಪೊತ್ತು ಧರಣಿಯು
ಸಾಧಿಸಿ ಕುಂಭದೋಳುದಿಸಿದಗೆ ||
ಭೂದಾನವ ಬೇಡಿ ನೃಪರ ಸಂಹರಿಸಿದ
ಆದಿ ಮೂರುತಿಗಾರುತಿ ಎತ್ತಿರೆ || ೧ ||
ಇಂದುವದನೆ ಸೀತೆ ಸಹಿತಾರಣ್ಯದಿ
ನಂದ ಗೋಕುಲದಲ್ಲಿ ನಲಿದವಗೆ ||
ಮಂದಗಮನೆಯರ ಮುಂದೆ ನಿರ್ವಾಣದಿ
ನಿಂದ ಮೂರುತಿಗಾರುತಿ ಎತ್ತಿರೆ || ೨ ||
ತುರಗವನೇರಿ ದುಷ್ಟರ ಸೀಳಿ ಸುಜನರ
ಪೊರೆವ ಮಂಗಳ ಹ ಯ ವ ದ ನ ನಿಗೆ

ವರದ ವೇಲಾಪುರ ಚೆನ್ನಿಗರಾಯನ
ಚರಣಕಮಲಕಾರತಿ ಎತ್ತಿರೆ || ೩ ||

## ೨೫೪. ಮಂಗಳಂ ಜಯಮಂಗಳಂ

ಭೈರವಿರಾಗ ಛಾಪು ತಾಳ

ಜಯಮಂಗಳಂ ನಿತ್ಯ ಶುಭಮಂಗಳಂ || ಪ ||
ಸಚ್ಚಿದಾನಂದ ಸರ್ವಗುಣಪೂರ್ಣಗೆ
ಅತ್ಯಂತ ಸುಜ್ಞಾನಗಬ್ಜಾಕ್ಷಗೆ ||
ಮೆಚ್ಚಿ ಗೋಪಿಯರೊಡನೆ ಮನವಿಟ್ಟು ಕೂಡಿದಗೆ
ನಿತ್ಯ ಕಲ್ಲ್ಯಾಣ ನಿರ್ದೋಷಗೆ || ೧ ||
ವ್ಯಾಸಾವತಾರಗೆ ವೇದ ಉದ್ಧಾರಗೆ
ಸಾಸಿರಾ ನಾಮದ ಸರ್ವೇಶಗೆ ||
ವಾಸವಾಗಿದ್ದ ಶ್ರೀ ವೈಕುಂಠ ನಿಲಯಗೆ
ಶೇಷಗಿರಿವಾಸ ವೆಂಕಟರಾಯಗೆ || ೨ ||
ಅಂಬರೀಷನ ಶಾಪ ಪರಿಹರಿಸಿದವನಿಗೆ
ತುಂಬುರ ನಾರದಾದಿ ಮುನಿವಂದ್ಯಗೆ ||
ಅಂಬುಜನಾಭಗೆ ಅಜನ ಪೆತ್ತವನಿಗೆ
ಕಂಬುಕಂಧರ: ಪು ರ ಂ ದ ರ ವಿ ಠ ಲ ರಾಯಗೆ || ೩ ||

---



೨೯–೧೪೧೧

# ಪರಿಶಿಷ್ಟ ೧.

## ದಾಸರ ಪರಿಚಯ

ಭಾರತವು ಅನೇಕ ಮತಗಳ ತವರೂರು. ಅನೇಕಾನೇಕ ವಿವಿಧಪಂಥಗಳು ಇಲ್ಲಿಯೇ ಹುಟ್ಟಿ ಸರ್ವತ್ರ ವ್ಯಾಪಿಸಿದವು. ಆದರೂ ಮೂಲ ಹಿಂದೂ ಧರ್ಮವು ತನ್ನ ಗಾಂಭೀರ್ಯವನ್ನು ಕಳೆದುಕೊಳ್ಳದೆ ಹಿಮಗಿರಿಯಂತೆ ಅಚಲವಾಗಿದ್ದು ಈ ಪುಣ್ಯಭೂಮಿಯನ್ನು ಇಂದಿನವರೆಗೂ ಪಾವನಮಾಡಿದೆ. ಈ ವಿಷಯದಲ್ಲಿ ಕರ್ನಾಟಕವಾದರೂ ಹಿಂದುಳಿಯದೆ ತನ್ನ ಧರ್ಮಜಾಗ್ರುತಿಯ ಕಾರ್ಯವನ್ನು ಸಾಕಷ್ಟು ಉತ್ತಮರೀತಿಯಲ್ಲಿ ಮಾಡಿದೆ. ಈ ದೃಷ್ಟಿಯಿಂದ ಕರ್ನಾಟಕವು ಭಾರತದ ಇತಿಹಾಸದಲ್ಲಿ ಚಿರಸ್ಮರಣೀಯವಾದದ್ದು.

ಭಾರತಭೂಮಿಯಲ್ಲಿ ಪ್ರಚಲಿತವಾದ ಅಥವಾ ಪ್ರಚಲಿತವಿರುವ ಅನೇಕ ಮತ, ಪಂಥ, ಮಾರ್ಗಗಳಲ್ಲಿ ಭಕ್ತಿಮಾರ್ಗವು ಬಹು ಲೋಕಪ್ರಿಯವಾದದ್ದು. ಪ್ರಸ್ತುತ ಆ ವಿಷಯವನ್ನೆ ಕುರಿತು ನಾವು ಬರೆಯುತ್ತಿರುವೆವು. ಕರ್ನಾಟಕದಲ್ಲಿ ಅನೇಕ ಶೈವ ಹಾಗು ವೈಷ್ಣವಭಕ್ತಶ್ರೇಷ್ಟರು ಈ ಮಾರ್ಗವನ್ನನುಸರಿಸಿ ಜನಸಾಮಾನ್ಯರಿಗೆ ದಾರಿತೋರಿದರು. ಹರಿದಾಸರು ಜನಸಾಮಾನ್ಯರ ಉನ್ನತಿಯ ಬಗ್ಗೆ ತಮ್ಮ ಜನ್ಮವನ್ನು ಹೇಗೆ ಸವೆಯಿಸಿದರೆಂಬುದು ಈ ಪುಸ್ತಕದಲ್ಲಿ ಸಾಕಷ್ಟು ವಿಶದೀಕರಿಸಲಾಗಿದೆ. ಮುಖ್ಯವಾಗಿ ಅದರ ಸುಲಭತೆಯ ಮೂಲಕ ಈ ದಾಸಮಾರ್ಗದ ಕಡೆಗೆ ಜನರ ಒಲವು ಹೆಚ್ಚಾಯಿತು. ಆಯಾ ಕಾಲಕ್ಕೆ ಇನ್ನಿತರ ಪ್ರಾಂತಗಳಲ್ಲಿ ಭಕ್ತಿಮಾರ್ಗವು ಪ್ರಾಬಲ್ಯಕ್ಕೆ ಬಂದಂತೆ ಕರ್ನಾಟಕದಲ್ಲಿಯೂ ಭಕ್ತಿಪಂಥವು ಹುಟ್ಟಿ ಬೆಳೆಯಿತು.

ಹದಿಮೂರನೆಯ ಶತಮಾನದಿಂದ ಹದಿನೆಂಟನೆಯ ಶತಮಾನದ ವರೆಗೆ, ಹರಿದಾಸರು ಅನೇಕ ಧಾರ್ಮಿಕ,ನೈತಿಕ,ಹಾಗೂ ಸಾಮಾಜಿಕಸುಧಾರಣೆಗಳನ್ನು

ಇಲ್ಲಿಯೇ ಮಾಡಿ ದಲಿತರನ್ನುದ್ಧರಿಸಿದರು. ಕಟ್ಟುನಿಟ್ಟಾದ ನಿರರ್ಥಕ ನಿರ್ಬಂಧ ಗಳನ್ನು ದೂರೀಕರಿಸಿ ಎಲ್ಲರಿಗೂ ಅನುಕೂಲವಾಗುವಂತೆ ಭಕ್ತಿಮಾರ್ಗವನ್ನು ಬೋಧಿಸಿದರು.

ಭಕ್ತಿಮಾರ್ಗವು ಉಳಿದ ಮಾರ್ಗಗಳಿಗಿಂತ ಸುಲಭವಾದದ್ದು. ಎಲ್ಲ ಹೊಣೆಗಾರಿಕೆಯನ್ನು ಪರಮಾತ್ಮನಿಗರ್ಪಿಸಿ, ಸಮಾಜಕ್ಕೆ ಯಾವದೇ ರೀತಿಯಿಂದ ತೊಂದರೆಯಾಗದಂತೆ ಸತತ ಪರಮಾತ್ಮನ ಧ್ಯಾನಾಸಕ್ತರಾಗಿ ಜಗತ್ತಿನ ವ್ಯಾಪಾರವನ್ನು ಪರಮಾತ್ಮನಿಗೆ ವಶವರ್ತಿಯಾಗಿ ಸಾಗಿಸುವದು ಮುಖ್ಯವೆಂದು ಭಕ್ತರ ಅಭಿಪ್ರಾಯ. ಅದೇರೀತಿಯಲ್ಲಿ ದಾಸರು ತಮ್ಮ ನಡೆನುಡಿ ಆಚಾರ ವಿಚಾರಗಳಲ್ಲಿ ಸ್ಪಷ್ಟಿಸಿದ್ದಾರೆ. ದಾಸರಲ್ಲಿ ಹಲವರು ಅಪರೋಕ್ಷಜ್ಞಾನಿಗಳಿದ್ದರೆಂದು ನಾವು ಹೇಳಬಲ್ಲೆವು. ತಮ್ಮ ಕೀರ್ತನೆ ಸುಳಾದಿಗಳಿಂದ ಹಾಗು ಬೋಧಪ್ರದ ವಚನಗಳಿಂದ ತಮ್ಮ ಕಾಲದಲ್ಲಿ ಹರಿದಾಸರು ಜಗತ್ತಿನ ಕಲ್ಯಾಣವನ್ನು ಉತ್ತಮವಾಗಿ ಮಾಡಿದರು.

ದಾಸರ ಕೂಟವೆಂಬ ವಿಶಿಷ್ಟಪಂಥವನ್ನು ಸ್ಥಾಪಿಸುವ ವಿಷಯದಲ್ಲಿ ಶ್ರೀಪಾದರಾಯರೇ ಪ್ರಮುಖರು. ಭಾವಿಕ ಜನರಲ್ಲಿ ಇಂದಿನವರೆಗೂ ಅವರ ವಿಚಾರದಲ್ಲಿ ವಿಶೇಷ ಆದರವಿದೆ. ಪ್ರಾತಃಕಾಲ ಅವರ ಹೆಸರನುಚ್ಚರಿಸುವದ ರಿಂದ ಸತತ ವ್ಯಾಸ್ವಾಸ್ಥ್ಯದೊರೆಯುವದೆಂದು ಇಂದಿಗೂ ಭಾವಿಕ ಭಕ್ತವೃಂದದ ನಂಬುಗೆ ಇದೆ. ತುಸು ನಿದಾನಿಸಿದರೆ ದಾಸರ ಕೂಟವು ಒಮ್ಮಿಂದೊಮ್ಮೆಲೆ ಹುಟ್ಟಿದ್ದಲ್ಲ, ಅದು ಮೊದಲಿನ ಭಾಗವತಸಾಂಪ್ರದಾಯದ ಪರಿವರ್ತನೆಯೆಂಬುದು ಸ್ಪಷ್ಟವಾಗುವದು. ಭಾಗವತೋತ್ತಮರಂತೂ ಕೃತಯುಗದಿಂದಲೇ ಈ ಪುಣ್ಯಭೂಮಿಯಲ್ಲಿದ್ದರೆಂದು ಪುರಾಣಗಳು ತಿಳಿಸುತ್ತವೆ.

ಕರ್ನಾಟಕದಲ್ಲಿ ಕೀರ್ತನೆಯು ಯಾವಾಗ ಹುಟ್ಟಿತೆಂಬುದು ಮುಖ್ಯ ಪ್ರಶ್ನೆ. ಅಚಲಾನಂದ ದಾಸರು ಕ್ರಿ. ಶ. ೯ನೆಯ ಶತಮಾನದಲ್ಲಿ ಕೀರ್ತನೆ ಗಳನ್ನು 'ಅಚಲಾನಂದ ವಿಠಲ' ಮುದ್ರಿಕೆಯಿಂದ ರಚಿಸಿದರೆಂಬ ಪ್ರತೀತಿಯಿದೆ. ಇವರ ಕೀರ್ತನೆಯ ಭಾಷಾಪ್ರೌಢಿಮೆ, ಶೈಲಿ, ಬಿಗುವು ಹಾಗು ಮಾಧುರ್ಯ ವನ್ನು ತುಲನೆಮಾಡಿ, ಭಾಷಾಶಾಸ್ತ್ರಜ್ಞರು ಇವರ ಭಾಷೆಯು ೧೫ನೆಯ ಶತಮಾನದ್ದಿರಬಹುದೆಂದು ಊಹಿಸುತ್ತಾರೆ. ಏನೇ ಇರಲಿ, ಮೊಟ್ಟಮೊದಲಿಗೆ ಇವರು ತಮ್ಮ ಹುಟ್ಟೂರಾದ ಬೆಂಗಳೂರು ಜಿಲ್ಲೆಯ ಹೈಗಣಪುರದಲ್ಲಿ

ತಮ್ಮ ಇಷ್ಟದೈವತವಾದ ನರಸಿಂಹನ ಭಕ್ತರಾಗಿ ಕೀರ್ತನಕಾರರಾಗಿದ್ದರು. ಒಂದುದಿನ ಪಂಡರೀಪುರದಲ್ಲಿ ಅವರು ಅರ್ಘ್ಯವನ್ನರ್ಪಿಸುತ್ತಿರುವಾಗ ಪಾಂಡುರಂಗನ ದರ್ಶನವಾಗಿ ಅವರಿಗೆ ಅಚಲಾನಂದವು ಲಭಿಸಿತು. ಅಂದಿನಿಂದ ನರಸಿಂಹದಾಸರು ಅಚಲಾನಂದದಾಸರಾದರು. ಸರ್ಪಕಚ್ಚಿ ಮೃತನಾದ ನೇಪಾಳದ ರಾಜಕುಮಾರನನ್ನು ಗರುಡಮಂತ್ರದಿಂದ ಇವರೇ ಬದುಕಿಸಿದರೆಂಬ ಐತಿಹ್ಯವಿದೆ.

ಅಚಲಾನಂದದಾಸರ ನಂತರ ೧೩ನೆಯ ಶತಮಾನದಲ್ಲಿ ಅವತರಿಸಿದ ಮಧ್ವಾಚಾರ್ಯರ ೩ನೆಯ ತಲೆಯವರಾದ ಶ್ರೀ ನರಹರಿತೀರ್ಥರು ಸುಪ್ರಸಿದ್ಧರು. ಸ್ವಾಮಿಶಾಸ್ತ್ರಿಗಳೆಂದು ಇವರ ಪೂರ್ವಾಶ್ರಮದ ಹೆಸರು. ಮೊದಲು ಇವರು ಓಢ್ರದೇಶದ ರಾಜನಲ್ಲಿ ದಫ್ತರದಾರರಾಗಿದ್ದರು. ಮಧ್ವಾಚಾರ್ಯರು ಅಲ್ಲಿಗೆ ಬಂದಿಳಿದಾಗ ಅವರೊಡನೆ ವಾದದಲ್ಲಿ ಮನಸೋತು ಮಧ್ವಾಚಾರ್ಯರ ಶಿಷ್ಯರಾದರು. ಇವರು ಇ. ಸ. ೧೨೬೩ರಲ್ಲಿ ಓಢ್ರದೇಶದ (Orissa) ಸಿಂಹಾಸನವನ್ನೇರಿ ರಾಜಕುಮಾರನು ಪ್ರಾಪ್ತವಯಸ್ಕನಾಗುವ ವರೆಗೆ ಆಳಿ ಆ ದೇಶವನ್ನು ಕಾಪಾಡಿದರು. ಅವರ ಕೀರ್ತನೆಸುಳಾದಿಗಳು ಪ್ರೌಢಭಾಷೆಯಲ್ಲಿ ರಚಿಸಲ್ಪಟ್ಟಿದ್ದು ದಾಸರು ಕನ್ನಡ ಭಾಷೆಯಲ್ಲಿ ಚನ್ನಾಗಿ ನುರಿತವರೆಂಬುದನ್ನು ಸ್ಪಷ್ಟಮಾಡುತ್ತವೆ. ಇವರ ತರುವಾಯ ದಾಸಶ್ರೇಷ್ಠರೂ ದಾಸಕೂಟದ ಪಿತಾಮಹರೂ ಎಂದರೆ ಶ್ರೀಪಾದದಾಸರು. ಇವರು ೧೫ನೆಯ ಶತಮಾನದಲ್ಲಿ ಎಂದರೆ (ಇ. ಸ. ೧೪೪೬) ಶಾಲಿವಾಹನಶಕ ೧೪೦೪ ರ ವರೆಗೆ ಧರ್ಮಪೀಠದಲ್ಲಿದ್ದರು. ಕರ್ನಾಟಕದಲ್ಲಿ ಭಾಗವತ ಧರ್ಮೋದ್ಧಾರಕ್ಕೆ ಇವರೇ ಮುಖ್ಯ ಕಾರಣಕರ್ತರು. ಭಜನೆ ಅಥವಾ ಕೀರ್ತನೆಮಾಡುವಾಗ

"ನಮಃ ಶ್ರೀಪಾದರಾಜಾಯ | ನಮಸ್ತೇ ವ್ಯಾಸಯೋಗಿನೇ |
ನಮಃ ಪುರಂದರಾರ್ಯಾಯ | ವಿಜಯರಾಜಾಯ ತೇ ನಮಃ" ||

ಎಂಬುದಾಗಿ ಮೊದಲು ಶ್ರೀಪಾದರಾಯರನ್ನು ವಂದಿಸುವ ಪದ್ಧತಿಯಿದೆ. ಮುಖ್ಯರೆನಿಸಿದ ದಾಸರ ಅತ್ಯಲ್ಪಪರಿಚಯವನ್ನು ವಾಚಕರ ಸೌಲಭ್ಯದ ಬಗ್ಗೆ ಈ ಕೆಳಗೆ ಕೊಟ್ಟಿರುವೆವು.

೧. **ಶ್ರೀಪಾದರಾಯರು :** ಶ್ರೀಪಾದರಾಯರು ಕರಣೀಕ ಶೇಷಗಿರಿಯಪ್ಪನವರ ಮಕ್ಕಳು. ಕಾವೇರಿ ನದಿಯ ದಂಡೆಯಲ್ಲಿರುವ ಈಗಿನ ಶಿವನಗಂಗ

(ಮೈಸೂರು) ಎಂಬಲ್ಲಿ ಇವರ ಜನ್ಮವಾಯಿತು. ಶ್ರೀಮಧ್ವಾಚಾರ್ಯರ ಶಿಷ್ಯರಾದ ಶ್ರೀಪದ್ಮನಾಭತೀರ್ಥರ ಪರಂಪರೆಯಲ್ಲಿ ಬಂದ ಆನೆ ತಲೆಯವರಾದ ಶ್ರೀಸ್ವರ್ಣವರ್ಣತೀರ್ಥರ ಶಿಷ್ಯರು. ಇವರ ಮೊದಲ ಹೆಸರು ಶ್ರೀಲಕ್ಷ್ಮೀನಾರಾಯಣಮುನಿಗಳೆಂದು. ಉತ್ತರಾದಿಮಠದ ಶ್ರೀರಘುನಾಥತೀರ್ಥರು ಇವರ ಮಿತ್ರರು. ಶ್ರೀರಘುನಾಥತೀರ್ಥರೇ ಮೊಟ್ಟಮೊದಲಿಗೆ ಇವರನ್ನು ಶ್ರೀಪಾದರಾಜರೆಂದು ಕರೆದವರು. "ವಾಗ್ವಜ್ರ" ವೆಂಬ ಉತ್ತಮವಾದ ಸಂಸ್ಕೃತ ಗ್ರಂಥವನ್ನು ಇವರೇ ಬರೆದಿರುವರು. ಇವರ ಕಾಲದ ವಿಷಯ ಅಧಿಕೃತವಾಗಿ ಇನ್ನೂ ತಿಳಿದುಬಂದಿಲ್ಲವಾದರೂ ಶ್ರೀವ್ಯಾಸರಾಯರು ಇವರಲ್ಲಿ ಅಭ್ಯಾಸಮಾಡಿದರೆಂದು ಮುಂತಾಗಿ ಐತಿಹ್ಯವಿದೆ. ಆದ್ದರಿಂದ ಇವರು ವ್ಯಾಸರಾಯರಿಂದ ಹಿರೇಪೀಳಿಗೆಯವರು. ವಿಜಯನಗರದ ವೀರರನರಸಿಂಹರಾಜ ಪ್ರಭುವಿನ ಬ್ರಹ್ಮಹತ್ಯಾದೋಷವನ್ನು ಶಂಖೋದಕ ಪ್ರೋಕ್ಷಣೆಯಿಂದ ನಿವಾರಿಸಿದ ಮಹಾಪುರುಷರಿವರು. ನೃಸಿಂಹತೀರ್ಥದಲ್ಲೇ ಗಂಗೆಯನ್ನು ಪ್ರಸನ್ನ ಮಾಡಿಕೊಂಡವರು. ಇವರ ಕವಿತಾ ಪ್ರೌಢಿಮೆಯು ಮಹತ್ವದ್ದಿದೆ. ಇವರ ಪದ್ಯಗಳಲ್ಲಿ ಶ್ರೀರಂಗವಿಠ್ಠಲ ಎಂಬ ಅಂಕಿತವಿದೆ. ಇವರು ಧ್ರುವನ ಅವತಾರವೆಂದು ದಾಸಕೂಟದಲ್ಲಿ ಅಭಿಪ್ರಾಯವಿದೆ.

೨. **ಶ್ರೀವ್ಯಾಸರಾಯರು**: ಇವರನ್ನು ಅಬ್ಬೂರಮಠದ ಬ್ರಹ್ಮಣ್ಯತೀರ್ಥರು ಶ್ರೀಪಾದರಾಯರ ಬಳಿಗೆ ವಿದ್ಯಾಭ್ಯಾಸಕ್ಕೆ ಕಳಿಸಿದ್ದರು. ಮೈಸೂರ ಜಿಲ್ಲೆಯಲ್ಲಿ ಕಾವೇರಿ ತೀರದಲ್ಲಿರುವ ಬನ್ನೂರೇ ಇವರ ಜನ್ಮಸ್ಥಳ. ಇವರು ರಾಮಾಚಾರ್ಯರ ಮಕ್ಕಳು. ಭೂಸ್ಪರ್ಶವಾಗದಂತೆ ಹುಟ್ಟಿದ ಮಗುವನ್ನು ಚಿನ್ನದ ಹರಿವಾಣದಲ್ಲಿ ಬ್ರಹ್ಮಣ್ಯತೀರ್ಥರಿಗೆ ಒಪ್ಪಿಸಲಾಗಿತ್ತೆಂಬ ಐತಿಹ್ಯವಿದೆ. ವ್ಯಾಸರಾಯರು ಪ್ರಲ್ಹಾದನ ಅವತಾರವೆಂದು ಮುಂತಾಗಿ ದಾಸಕೂಟದಲ್ಲಿ ಅಭಿಪ್ರಾಯವಿದೆ. ಒಟ್ಟಿನಲ್ಲಿ ವ್ಯಾಸರಾಯರು ಸುಪ್ರಸಿದ್ಧ ರಾಜಗುರುಗಳು. ಇವರ ನೇತೃತ್ವದಲ್ಲಿ ನಾಲ್ವರು ರಾಜರು ವಿಜಯನಗರದಲ್ಲಿ ಆಳಿದರು. ಶ್ರೀಕೃಷ್ಣರಾಯನ ದುಷ್ಟ ಕುಹು ಯೋಗವನ್ನು (ಜ್ಯೋತಿಷದಲ್ಲಿಯ ಯೋಗ) ಪರಿಹರಿಸಿ, ಉಡುಪಿಯಲ್ಲಿ ಹಲಕಾಲವಿದ್ದು ಆ ಕ್ಷೇತ್ರದ ಪಾವಿತ್ರ್ಯವನ್ನು ಹೆಚ್ಚಿಸಿದವರಿವರು. ನ್ಯಾಯಾಮೃತ, ತರ್ಕತಾಂಡವ, ಚಂದ್ರಿಕಾ ಮೊದಲಾದ ಉಜ್ವಲ ಸಂಸ್ಕೃತ ಗ್ರಂಥರತ್ನಗಳನ್ನು ಬರೆದವರು. ರಾಜಾಧಿರಾಜರಿಂದ ಹಾಗು ಮೊಗಲರ ಬಾಬರ, ಬಿಜಾಪುರದ ಆದಿಲ್‌ಶಹನೇ ಮೊದಲಾದವರಿಂದಲೂ

ಸನ್ಮಾನಿಸಲ್ಪಟ್ಟವರೆಂದೂ ಮುಂತಾಗಿ ಡಾಖಲೆಗಳಿವೆ. ಇವರು ಶಾ. ಶ. ೧೩೬೯ನೆ ( ಇ. ಸ. ೧೪೫೭ ) ಪ್ರಭವ ಸಂ. ವೈಶಾಖ ಶುದ್ಧ ೭ರಲ್ಲಿ ಜನ್ಮವೆತ್ತಿ ಶಕವರುಷ ೧೪೬೧ನೆ ಫಾಲ್ಗುಣ ಬ. ೯ರ ವರೆಗೆ ೯೨ ವರುಷಕಾಲ ಬದುಕಿದರು. ಪುರಂದರದಾಸರ ಕಡೆಯ ಮಗ ಮಧ್ವಪತಿದಾಸರು ಬರೆದ ಉಗಾಭೋಗದಲ್ಲಿ ಈ ವಿಷಯವು ಬಂದಿದೆ.

**೩. ವಾದಿರಾಜರು :** ಇವರು ಸೋದೇಮಠದ ಸುಪ್ರಸಿದ್ಧ ಗುರುಗಳಾದ ವಾಗೀಶತೀರ್ಥರ ವರಪ್ರಸಾದದಿಂದ ಶಾ. ಶ. ೧೪೦೨ ( ಇ. ಸ. ೧೪೮೦ ) ಶಾರ್ವರಿ ಸಂವತ್ಸರದಲ್ಲಿ ಹೂವಿನಕೆರೆಯ ( ಕುಸುಮಾಕರ ) ರಾಮಾಚಾರ್ಯರ ಮಕ್ಕಳಾಗಿ ಜನ್ಮವೆತ್ತಿದರು. ಬಾಲಕರಾಗಿರುವಾಗ ಈ ಶಿಶುವನ್ನು ವರಾಹನೆಂದು ಕರೆಯುತ್ತಿದ್ದರು. ಇವರೇ ಮುಂದೆ ಶ್ರೀವಾದಿರಾಜತೀರ್ಥರೆಂದು ಪ್ರಸಿದ್ಧರಾಗಿ ವಿದ್ಯಾನಗರ ( ಹಂಪೆ ) ದಲ್ಲಿ ರಾಜಗುರುಗಳಾಗಿದ್ದ ಶ್ರೀವ್ಯಾಸರಾಯ ಸ್ವಾಮಿಗಳವರ ಕೃಪಾಪಾತ್ರರಾಗಿ ಚೌಷಟ್ಟಿಕಲಾ ಪಾರಂಗತರಾದರು. ತೀರ್ಥಪ್ರಬಂಧವೆಂಬೊಂದು ಉತ್ತಮವಾದ ಸಂಸ್ಕೃತ ಗ್ರಂಥವನ್ನು ರಚಿಸಿರುವರು. "ಲಕ್ಷ್ಮೀಶೋಭನ" ಎಂಬ ಕನ್ನಡ ಪದವನ್ನು ಹಾಡಿ ಮೃತಕುಮಾರನೊಬ್ಬನನ್ನು ಬದುಕಿಸಿದರೆಂಬ ಐತಿಹ್ಯವಿದೆ. ಇವರ ಉಪಾಸ್ಯದೇವತೆ ಹಯವದನದೇವರು. ಇವರು ರಚಿಸಿದ ಪದ್ಯಗಳಲ್ಲೆಲ್ಲ ಹಯವದನವೆಂಬ ಅಂಕಿತನಾಮವಿದೆ. ವಿಜಯನಗರದ ರಾಜರ ಆಸ್ಥಾನದಲ್ಲಿ ಪ್ರಸಂಗಾಭರಣ ತೀರ್ಥರೆಂಬ ಬಿರುದನ್ನು ಪಡೆದ ಇವರು ಮಾಘಕವಿಯ "ಶಿಶುಪಾಲವಧ"ಗಿಂತ ಉತ್ತಮವೆನಿಸಿದ ಶ್ರೀ ರುಕ್ಮಿಣೀಶವಿಜಯವೆಂಬ ಸಂಸ್ಕೃತ ಮಹಾಕಾವ್ಯವನ್ನು ರಚಿಸಿ ಪಂಡಿತರನ್ನು ಬೆರಗುಗೊಳಿಸಿದರು.

ಇವರು ಮಹಾಪಂಡಿತರು. ಸಂಸ್ಕೃತ ಮತ್ತು ಕನ್ನಡದಲ್ಲಿ ವಿಪುಲವಾಗಿ ಗ್ರಂಥಗಳನ್ನು ಬರೆದವರು. ಮಧ್ವಾಚಾರ್ಯರ ಅನುಜರಾದ ಶ್ರೀವಿಷ್ಣುತೀರ್ಥರ ಶಿಷ್ಯ ಶ್ರೀವ್ಯಾಸತೀರ್ಥರ ಶಿಷ್ಯಪರಂಪರೆಯ ೧೭ನೆಯವರಾದ ವಾಗೀಶತೀರ್ಥರ ಶಿಷ್ಯರು. ಇವರು ಬರೆದ ಗ್ರಂಥಗಳಲ್ಲಿ ಮುಖ್ಯವಾದುವೆಂದರೆ:- ಶ್ರೀಗುರುರಾಜೀಯ ಸುಧಾ ಟಿಪ್ಪಣಿ, ತತ್ವಪ್ರಕಾಶಿಕಾ ಟಿಪ್ಪಣಿ ಭಗವದ್ಗೀತಾ ಟಿಪ್ಪಣಿ, ಮಹಾಭಾರತ ಟಿಪ್ಪಣಿ, ಮಹಾಭಾರತ ತಾತ್ಪರ್ಯ ನಿರ್ಣಯ ಟೀಕಾ, ಸರಸ ಭಾರತೀವಿಲಾಸ, ಉಪನ್ಯಾಸ ರತ್ನಮಾಲಾ ಮೊದಲಾದವುಗಳು. ಸ್ವಪ್ನಗೀತೆ, ಭ್ರಮರಗೀತೆ ಮುಂತಾದ ಅನೇಕ ಗ್ರಂಥಗಳನ್ನು ರಚಿಸಿ ಅಜರಾಮರವಾದ

ಕೀರ್ತಿಗೆ ಪಾತ್ರರಾದರು. ಶಾ. ಶ. ೧೫೨೨ (ಇ. ಸ. ೧೬೦೦) ನೆಯ ಶಾರ್ವರಿ ಸಂ॥ ಫಾಲ್ಗುಣ ಕೃಷ್ಣ ತೃತೀಯ ಬುಧವಾರದಿನ ತೀರಿಕೊಂಡರು. ಆಗ್ಗೆ ವಾದಿರಾಜರಿಗೆ ೧೨೦ ವರ್ಷ ವಯಸ್ಸು. ಇವರು ದಾಸಕೂಟದಲ್ಲಿ ಹೆಸರುಗೊಂಡವರು. ಇವರ ವೃಂದಾವನವು ಉತ್ತರ ಕಾನಡಾ ಜಿಲ್ಲೆಗೆ ಸೇರಿದ ಸೋದೆಯಲ್ಲಿದೆ.

೪. **ಶ್ರೀಪುರಂದರದಾಸರು:** ದಾಸಕೂಟದಲ್ಲಿ ಪುರಂದರದಾಸರ ಹೆಸರು ಅಗ್ರಗಣ್ಯವಾದದ್ದು. ಇವರನ್ನು ನಾರದರ ಅವತಾರವೆಂದು ಮುಂತಾಗಿ ಭಾವಿಸಿದ್ದರು. ಶಾಲಿವಾಹನ ಶಕವರುಷ ೧೪೦೬ (ಇ.ಸ.೧೪೮೪) ರಲ್ಲಿ ಇವರು ಫಂಡರಾಪುರದ ಬಳಿಯಲ್ಲಿರುವ ಸ್ಮಾರ್ತ ದೇಶಸ್ಥ ಬ್ರಾಹ್ಮಣ ವರದಪ್ಪನಾಯಕರ ಮಕ್ಕಳಾಗಿ ಜನ್ಮವೆತ್ತಿದರು. ಇವರು ವೃತ್ತಿಯಲ್ಲಿ ಚಿನಿವಾಲರು ಮತ್ತು ಮಹಾಕೃಪಣರು.

ಪೂರ್ವಸಂಕೇತದಂತೆ ಶ್ರೀಕೃಷ್ಣನು ಆರುತಿಂಗಳವರೆಗೆ ದಾನವನ್ನು ಯಾಚಿಸಿ ಬೇಸತ್ತು ಕೃಷ್ಣಪ್ಪನಾಯಕರ (ಪುರಂದರದಾಸರ) ಹೆಂಡತಿಯ ಕಡೆ ದೂರಿಟ್ಟು ನತ್ತನ್ನು ದಾನವಾಗಿ ತೆಗೆದುಕೊಂಡರು. ದಾಸರಿಗೆ ತನ್ನ ಹೆಂಡತಿಯ ಮೂಲಕ ತಮ್ಮ ತಪ್ಪು ತಿಳಿದುಬಂತು. ಅವರು ಉಜ್ವಲ ಹರಿದಾಸರಾದರು. ಅಪಾರ ಶ್ರೀಮಂತರಾದ ಕೃಷ್ಣಪ್ಪನಾಯಕರು ಜೋಳಿಗೆ ಹಾಕಿಕೊಂಡು ಪ್ರಲ್ಹಾದನ ಅವತಾರವೆನಿಸಿದ ವ್ಯಾಸರಾಯರ ಶಿಷ್ಯರಾದರು. ೪॥ ಲಕ್ಷ ಶ್ಲೋಕಗಳನ್ನು ರಚಿಸಿರುವರೆಂದು ವದಂತಿ ಇದೆ. ವ್ಯಾಸರಾಯರಿಗೂ ಇವರ ಮೇಲೆ ಪ್ರೇಮ ಹೆಚ್ಚು. ಕನಕದಾಸರು ಇವರ ಸಮಕಾಲೀನರು. ಇವರ ಕೃತಿಗಳಿಗೆ ಪುರಂದರವಿಠಲವೆಂಬ ಅಂಕಿತವಿದೆ. ಇವರು ಶಾ. ಶ. ವ. ೧೪೮೬ನೇ (ಇ. ಸ. ೧೫೬೪) ರಕ್ತಾಕ್ಷಿ ಸಂವತ್ಸರದ ಪುಷ್ಯಮಾಸದ ಬಹುಳ ಅಮಾವಾಸ್ಯೆದಿನ ತಮ್ಮ ೮೦ನೆ ವಯಸ್ಸಿನಲ್ಲಿ ತೀರಿಕೊಂಡರು. ಅವರ ಮಕ್ಕಳೆಲ್ಲ ದಾಸರಾಗಿದ್ದರು.

ಈಗ ದೊರೆಯುತ್ತಿರುವ "ಪುರಂದರದಾಸರ ಪದಗಳು" ಎಂಬ ಪುಸ್ತಕಗಳಲ್ಲಿ ದಾಸರಿಂದಲೇ ರಚಿಸಲ್ಪಟ್ಟ ಪದಗಳಾವವು? ಅವರ ಮಕ್ಕಳಿಂದ ರಚಿತವಾದುವು ಯಾವವು? ಎಂಬ ಭೇದವನ್ನು ತಿಳಿಯಲಾರದೆ ಎಲ್ಲವೂ ಪುರಂದರದಾಸರಿಂದಲೇ ರಚಿಸಲ್ಪಟ್ಟಿದ್ದಿರಬೇಕೆಂದು ಅನೇಕರು ಭಾವಿಸಲವಕಾಶ

ಏದೆ. ಈ ಸಂದರ್ಭದಲ್ಲಿ ಈ ಸೂಚನೆಯನ್ನು ಓದುಗರು ಗಮನಿಸುವದು ಸೂಕ್ತವಿದೆ. ಅವರಿಗಿದ್ದ ನಾಲ್ಕು ಮಕ್ಕಳೂ ಹಿರಿಯರಿಂದ ಅನುಕ್ರಮವಾಗಿ 'ವರದಪುರಂದರವಿಠಲ' 'ಗುರುಪುರಂದರವಿಠಲ' 'ಮಧ್ವಪತಿ' ಪುರಂದರವಿಠಲ' 'ಅಭಿನವ ಪುರಂದರವಿಠಲ' ಎಂಬ ಅಂಕಿತದಿಂದಲೂ ಮಗಳು 'ತಂದೆಪುರಂದರವಿಠಲ' ಎಂತಲೂ ಪತ್ನಿಯು 'ಶ್ರೀಪುರಂದರವಿಠಲ' ಎಂಬುದಾಗಿಯೂ ಮತ್ತು ಭೃತ್ಯನು 'ಒಡೆಯ ಪುರಂದರವಿಠಲ' ಎಂಬುದಾಗಿ ಅಂಕಿತವನ್ನಿಟ್ಟುಕೊಂಡು ಭಗವಂತನನ್ನು ಹಾಡಿ ಹೊಗಳಿದರೆಂದು ತಿಳಿದು ಬಂದಿದೆ.

೫. **ವಿಜಯದಾಸರು :** ಇವರು ಮಾನವಿಯ (ನಿಜಾಮ ಕರ್ನಾಟಕ) ಬಳಿಯಲ್ಲಿದ್ದ ಚೀಕಲಪರಿಯೆಂಬಲ್ಲಿ ಶಾನುಭಾಗರಾಗಿದ್ದ ಶ್ರೀನಿವಾಸಪ್ಪನವರ ಮಕ್ಕಳು. ಶಾ. ಶ. ೧೬೦೪ (ಇ. ಸ. ೧೬೮೨) ನೆಯ ರುಧಿರೋದ್ಗಾರಿ ಸಂವತ್ಸರದಲ್ಲಿ ಇವರ ಜನ್ಮವಾಯಿತು. ದಾಸಪ್ಪನವರೆಂದು ಇವರ ಮೊದಲ ಹೆಸರು. ತಮ್ಮ ೩೦ನೇ ವಯಸ್ಸಿನಲ್ಲಿ ಇವರು ದೇಶಸಂಚಾರದಲ್ಲಿದ್ದಾಗ ಶ್ರೀ ಪುರಂದರದಾಸರು ದರ್ಶನಕೊಟ್ಟು ವ್ಯಾಸಕಾಶಿಗೆ ಕರೆದೊಯ್ದು ಅಲ್ಲಿ ವ್ಯಾಸರ ಸಾನ್ನಿಧ್ಯದಲ್ಲಿ ದಾಸಪದ ದೀಕ್ಷೆಕೊಟ್ಟಂತೆ ಸ್ವಪ್ನದಲ್ಲಿ ಭಾಸವಾಯಿತು. ವಿಜಯವಿಠಲವೆಂಬುದು ಇವರ ಅಂಕಿತ. ಶ್ರೀಜಗನ್ನಾಥದಾಸರು, ತಿಮ್ಮಣ್ಣದಾಸರು, ಮೋಹನದಾಸರು, ಹಯವದನದಾಸರು ಮೊದಲಾದವರೆಲ್ಲ ಇವರ ಶಿಷ್ಯರು. ಇವರು ಮೋಹನದಾಸರ ಅಪಮೃತ್ಯುನಿವಾರಣೆ, ಜಗನ್ನಾಥದಾಸರ ಕ್ಷಯನಿವಾರಣೆ ಮೊದಲಾದವನ್ನು ಮಾಡಿದವರು. ಇವರು ಸರ್ವಾನುಭವಸಂಪನ್ನರು. ೭೩ ವರುಷದ ವರೆಗೆ ಬಾಳಿ ಶಾ. ಶ. ೧೬೭೭ರಲ್ಲಿ (ಇ. ಸ. ೧೭೫೫) ಕಾರ್ತಿಕ ಶುದ್ಧ ೧೦ ಕ್ಕೆ ತಿಪ್ಪಗಿರಿ ಎಂಬಲ್ಲಿ ವೈಕುಂಠವಾಸಿಗಳಾದರು. ದಾಸಸಾಹಿತ್ಯದಲ್ಲಿ ಇವರ ಸುಳಾದಿಗಳಿಗೆ ಮಹತ್ವದ ಸ್ಥಾನವಿದೆ. ಪುರಂದರದಾಸರು ಬರೆಯಲಿಕ್ಕೆ ಉಳಿದ ೨೫೦೦೦ ಸುಳಾದಿಗಳನ್ನು ಬರೆದು ಇವರು ತಮ್ಮ ಗುರುವಿನ ಉದ್ದೇಶವನ್ನು ಸಫಲಮಾಡಿದರೆಂದು ನಂಬುಗೆ ಇದೆ. ವಿಜಯದಾಸರು ದಾಸಕೂಟದಲ್ಲಿ ಅಗ್ರಗಣ್ಯರಾದರು. ಇವರು ಭೃಗುಋಷಿಯ ಅವತಾರವೆಂದು ದಾಸಕೂಟದಲ್ಲಿ ಅಭಿಪ್ರಾಯವಿದೆ.

೬. **ಕನಕದಾಸರು :** ಇವರು ಪುರಂದರದಾಸರ ಸಮಕಾಲೀನರು. ಧಾರವಾಡ ಜಿಲ್ಲೆಗೆ ಸೇರಿದ ಬಂಕಾಪುರದ ಬಳಿ ಇರುವ ಬಾಡವೇ ಇವರ

ಜನ್ಮಸ್ಥಳ. ಅಂಡೆಕುರುಬರ ಜಾತಿಯಲ್ಲಿ ಹುಟ್ಟಿ (ಹಲವರು ಬೇಡರವನೆಂದೂ ಹೇಳುವರು) ಭಗವದ್ಭಕ್ತನಾಗಿ, ದಾಸಶ್ರೇಷ್ಟನಾಗಿ ೯೮ ವರ್ಷ ಕಾಲ ಬಾಳಿದನು. ಬೀರೆಗೌಡ ಬಚ್ಚಮ್ಮ ಎಂಬವರೇ ಕನಕದಾಸರ ತಾಯ್ತಂದೆಗಳು. ಬಾಲ್ಯದಲ್ಲಿ ತಾಯ್ತಂದೆಗಳನ್ನು ಕಳಕೊಂಡು ಅನಾಥನಾಗಿ ಅಂಡಲೆವಾಗ ದೊರೆತ ನಿಧಿಯನ್ನು ಮುಕ್ತಹಸ್ತನಾಗಿ ದೀನರಿಗೆ ಹಂಚಿ ಕನಕನೆಂದು ಪ್ರಸಿದ್ಧರಾದರು. ಆನೆಗೊಂದಿ ಸಂಸ್ಥಾನದ ರಾಜರು ಅವರನ್ನು ಬಂಕಾಪುರದ ಸೀಮೆಗೆ ಮಾಂಡಲಿಕರನ್ನಾಗಿಮಾಡಿದರು. ಕಾಗಿನೆಲೆಯ ಆದಿಕೇಶವನೇ ಇವರ ಇಷ್ಟದೈವತ. ವ್ಯಾಸರಾಯ ಸ್ವಾಮಿಗಳ ಶಿಷ್ಯರಾಗಿ ದಾಸರು ಕರ್ನಾಟಕವನ್ನೆಲ್ಲ ಸಂಚರಿಸಿ, ಪುಣ್ಯಕ್ಷೇತ್ರವಾದ ಉಡುಪಿಯಲ್ಲಿ ಹಲಕಾಲ ಇದ್ದರೆಂಬುದಕ್ಕೆ "ಕನಕನಖಿಂಡಿ"ಯೇ ಸಾಕ್ಷಿಯಾಗಿದೆ. ಅವರ ಮುಂಡಿಗೆಗಳು ಹೆಸರುಗೊಂಡವು. ಕೀರ್ತನೆಗಳನ್ನಲ್ಲದೆ ಹರಿಭಕ್ತಿಸಾರ, ನಳಚರಿತ್ರೆ, ರಾಮಧ್ಯಾನಚರಿತ್ರೆ ಮೊದಲಾದವುಗಳನ್ನು ಹೃದಯಂಗಮವಾಗಿ ಭಾಮಿನಿ ಷಟ್ಪದಿಯಲ್ಲಿ ಬರೆದಿದ್ದಾರೆ. ಅಲ್ಲದೆ "ಮೋಹನತರಂಗಿಣಿ"ಯನ್ನು ಬರೆದಿರುವರು. ಕಾಗಿನೆಲೆ ಆದಿಕೇಶವ ಎಂಬುದೇ ಇವರ ಅಂಕಿತ. ವಿದುರನೇ ಕಲಿಯುಗದಲ್ಲಿ ಕನಕನಾಗಿ ಹುಟ್ಟಿದನೆಂದು ದಾಸಕೂಟದಲ್ಲಿ ಅಭಿಪ್ರಾಯವಿದೆ.

೨. **ಭಾಗಣ್ಣದಾಸರು, ಮತ್ತು ಅವರ ಸೋದರರು :** ಇವರೇ ಗೋಪಾಲದಾಸರೆಂದು ಪ್ರಸಿದ್ಧರಾದವರು "ಭಕ್ತಿಯಲ್ಲಿ ಭಾಗಣ್ಣ" ಎಂಬ ಮಾತು ಇವತ್ತಿಗೂ ಎಲ್ಲರ ಬಾಯಲ್ಲಿದೆ. ಇವರು ಶಾ. ಶ. ಸುಮಾರು ೧೬೪೦ ಕ್ಕೆ ( ಇ. ಸ. ೧೭೧೮ ) ಹರೀತಸಗೋತ್ರದಲ್ಲಿ ಮುರಾರಿ ಎಂಬವನ ಮಕ್ಕಳಾಗಿ ಜನ್ಮವೆತ್ತಿದ್ದರು. ಇವರಿಗೆ ದಾಸಪ್ಪ, ಸೀನಪ್ಪ, ರಂಗಪ್ಪ ಎಂಬ ಮೂವರು ತಮ್ಮಂದಿರಿದ್ದರು. ಅವರೆಲ್ಲರೂ ದಾಸರೇ. ಗೋಪಾಲದಾಸರು ಶ್ರೀವಿಜಯದಾಸರ ಶಿಷ್ಯರು. ಜಗನ್ನಾಥದಾಸರಿಗೆ ತಮ್ಮ ಆಯುಸ್ಸನ್ನು ಧಾರೆಯೆರದು ಕೊಟ್ಟವರು. ಗೋಪಾಲವಿಠಲವೆಂಬುದು ಇವರ ಅಂಕಿತ. ಶ್ರೀವ್ಯಾಸ ತತ್ವಜ್ಞರು ಇವರ ಶಿಷ್ಯರು.

ದಾಸಪ್ಪದಾಸರನ್ನು ಗುರುಗೋಪಾಲದಾಸರೆಂದೆ ಕರಿಯುವ ರೂಢಿಯಿತ್ತು. ಇವರು ಅಪರೋಕ್ಷಜ್ಞಾನಿಗಳು. ಶೀನಪ್ಪದಾಸರೂ ಅಪರೋಕ್ಷಜ್ಞಾನಿಗಳು– ಭಾಗಣ್ಣದಾಸರು ಮಹಾಮಹಿಮಾಶೀಲರು. ಅವರ ಇಬ್ಬರು ತಮ್ಮಂದಿರೂ ದಾಸರಾಗಿ ಜ್ಞಾನಿಗಳಾಗಿದ್ದುದರಿಂದ ಹಿರಿಯರಾದ ಗೋಪಾಲ



೩೦–೧೪೧೧

ದಾಸರನ್ನು ಗುರುಗಳನ್ನಾಗಿ ಮಾಡಿಕೊಂಡಿದ್ದರು. ಚಿತ್ರಭಾನು ಸಂ॥ ಪುಷ್ಯ ಬ. ೮ ಶನಿವಾರದಿನ ಉತ್ತನೂರಿನಲ್ಲಿ ಗೋಪಾಲದಾಸರು ಕಾಲವಾದರು.

೮. **ಜಗನ್ನಾಥ ದಾಸರು :** ದಾಸವರ್ಯರಲ್ಲಿ ಜಗನ್ನಾಥದಾಸರು ಸುಪ್ರಸಿದ್ಧರು. ವಿದ್ಯಾರಣ್ಯ ರಾಮಾನುಜರಂತೆ ಮಹಾಮಹಿಮರು. ಇವರು ರಾಯಚೂರು ಜಿಲ್ಲೆಯ ಮಾನವಿ ತಾಲೂಕದ ಬ್ಯಾಗವಟ್ಟವೆಂಬ ಹಳ್ಳಿಯಲ್ಲಿ ಜನಾದರಕ್ಕೆ ಪಾತ್ರರಾಗಿ ಪಂಗುನಾಮದ ತಿಮ್ಮಣ್ಣ (ವೇಣುಗೋಪಾಲ) ದಾಸರ ಶಿಷ್ಯರಾಗಿ ನರಸಿಂಹದಾಸರೆನಿಸಿಕೊಂಡ ನರಸಪ್ಪನವರ ಮಕ್ಕಳು. ಇವರ ಮೊದಲ ಹೆಸರು ಶ್ರೀನಿವಾಸ. ಶಾಲಿವಾಹನ ಶಕ ೧೬೪೯ ರಲ್ಲಿ (ಇ. ಸ. ೧೭೨೭) ಇವರು ಜನ್ಮವೆತ್ತಿದರು. ಶ್ರೀನಿವಾಸರಾಯರು ದೊಡ್ಡ ವಿದ್ವಾಂಸರು. ಮೊದಮೊದಲು ದಾಸರ ವಿಷಯದಲ್ಲಿ ಇವರ ಆದರವಿರಲಿಲ್ಲ. ಒಂದುದಿನ ವಿಜಯರಾಯರು (ದಾಸರು) ಇವರನ್ನು ತಮ್ಮಲ್ಲಿಗೆ ಊಟಕ್ಕೆ ಆಮಂತ್ರಿಸಿದಾಗ ಹೊಟ್ಟೆಶೂಲೆಯೆಂಬ ನೆವದಿಂದ ಅವರು ಹೋಗದಿದ್ದು ಶಾಪಗ್ರಸ್ತರಾಗಿ ಕೊನೆಗೆ ಅವರನ್ನೇ ಮೊರೆಹೊಕ್ಕು ಭಾಗಣ್ಣದಾಸರ (ಗೋಪಾಲದಾಸರ) ಕೃಪೆಗೆ ಪಾತ್ರರಾದರು. "ಜಗನ್ನಾಥವಿಠಲ" ವೆಂಬುದು ಅವರ ಅಂಕಿತ. ತಮ್ಮ ಆಯುಸ್ಸಿನಲ್ಲಿ ೪೦ ವರ್ಷವನ್ನು ಭಾಗಣ್ಣ ದಾಸರು ಜಗನ್ನಾಥದಾಸರಿಗೆ ಕೊಟ್ಟಿದ್ದರು ಎಂದು ಮುಂತಾಗಿ ಪ್ರತೀತಿಯಿದೆ. ಇವರೇ ಉಡುಪಿಯಲ್ಲಿ ಮೂಕನನ್ನು ಮಾತಾಡಿಸಿದವರು. ಮಹಾ ವಿದ್ವಾಂಸರು. ಶಾಲಿವಾಹನ ಶಕ ೧೭೩೧ರಲ್ಲಿ (ಇ. ಸ. ೧೮೦೯) ಶುಕ್ಲ ಸಂವತ್ಸರ ಭಾದ್ರಪದ ಶುದ್ಧ ೯ಕ್ಕೆ ತೀರಿಕೊಂಡರು. ಗೀತಾ, ಬ್ರಹ್ಮಸೂತ್ರ, ದಶೋಪನಿಷತ್ತು, ಶ್ರೀಹರಿಕಥಾಮೃತಸಾರ ಮುಂತಾದವನ್ನು ಬರೆದಿರುವದಲ್ಲದೆ ಜಗನ್ನಾಥವಿಠಲವೆಂಬ ಅಂಕಿತದಿಂದ ಅನೇಕ ಕೀರ್ತನೆ, ಪದ ಸುಳಾದಿಗಳನ್ನು ರಚಿಸಿರುವರು.

೯. **ಮೋಹನದಾಸರು :** ಆನೆಗೊಂದಿಯಲ್ಲಿ ಭೀಮಪ್ಪನಾಯಿಕನೆಂಬೊಬ್ಬ ಚಿನಿವಾರನು ತನ್ನ ಹೆಂಡತಿಮಕ್ಕಳಿಗೆ ಆಸ್ತಿಯನ್ನು ವಿಭಾಗಿಸಿ ಕೊಡದೆ ಸ್ವರ್ಗಸ್ಥನಾಗಲು ಆತನ ಹೆಂಡತಿಯು ತನ್ನ ಮಗುವನ್ನು ಸಾಕುವದಕ್ಕೆ ಸಾಧ್ಯವಾಗದೆ ತತ್ತರಿಸುತ್ತಿದ್ದಳು. ಅದೇ ಕಾಲಕ್ಕೆ ಸರಿಯಾಗಿ ಚಕ್ರತೀರ್ಥದಲ್ಲಿ ವಿಜಯದಾಸರು ಸತ್ರಯೋಗನಡೆಸಿದರು. ಅಲ್ಲಿ ಹಲವು ದಿನಗಳವರೆಗಿದ್ದಾಗ ಬಡತನದಬಾಳು ಹಾಗು ಲೋಕನಿಂದೆಯನ್ನು ಸಹಿಸ

ಲಿಕ್ಕಾಗದೆ ಆ ಸಾಧ್ವಿಯು ತುಂಗಭದ್ರೆಯಲ್ಲಿ ಮುಳುಗಿ ಸಾಯುವೆನೆಂದು ಕತ್ತಲೆಯಲ್ಲಿ ಮಗುವಿನೊಡನೆ ನವವೃಂದಾವನದ ನಡುಗಡ್ಡೆಗೆ ಬಂದಳು. ಆಗ ವಿಜಯದಾಸರು ತಡೆದು ಮಗುವನ್ನೂ ತಾಯಿಯನ್ನೂ ರಕ್ಷಿಸಿದರು. 'ಚಿರಂಜೀವಿಯಾಗೆಲವೋ ಚಿಣ್ಣ ನೀನು' ಎಂದು ಹರಸಿದರು. ತಮ್ಮ ಮಗುವಿ ನಂತೆ ಕಾಪಾಡಿದರು. ಇವರೇ ಮುಂದೆ ಮೋಹನದಾಸರೆಂದು ಪ್ರಸಿದ್ಧರಾದರು. ಇವರು ಮೃತ್ಯುವಶರಾಗಲು ವಿಜಯದಾಸರು ಯಮಲೋಕಕ್ಕೆ ಹೋಗಿ ಬಿಡಿಸಿಕೊಂಡುಬಂದರೆಂದೂ ಮುಂತಾಗಿ ಐತಿಹ್ಯವಿದೆ. ಇವರೂ ಅಪರೋಕ್ಷ ಜ್ಞಾನಿಗಳಲ್ಲೊಬ್ಬರು.

ಭಕ್ತಿಯಲಿ ಭಾಗಣ್ಣ | ಯುಕ್ತಿಯಲಿ ಮೋಹನ್ನ
ಶಕ್ತಿಯಲಿ ತಿಮ್ಮಣ್ಣ |

ಎಂಬುದು ದಾಸರ ಉಕ್ತಿ. ಯುಕ್ತಿಯುಕ್ತವಾದ ಮಾತುಗಳಿಂದ ಹಾಗು ಬೋಧಪ್ರದವಾದ ಕೀರ್ತನೆ ಸುಳಾದಿಗಳಿಂದ ಇವರು ಜನಸೇವೆಮಾಡಿ ತಮ್ಮ ಜನ್ಮವನ್ನು ಸವೆದರು.

೧೦. **ತಿಮ್ಮಣ್ಣದಾಸರು :** (ವೇಣುಗೋಪಾಲದಾಸರು) ಇವರೇ ಪಂಗುನಾಮದ ತಿಮ್ಮಣದಾಸರು. ಮೊದಲಿಗೆ ಇವರು ಆದವಾನಿಯ ದಿವಾನರಾಗಿದ್ದು ನಂತರ ಬೇಸರಗೊಂಡು ವಿಜಯದಾಸಗ ಮೊರೆಹೊಕ್ಕು ದಾಸರಾದರು. ಇವರು ಪೂರ್ವಜನ್ಮದಲ್ಲಿ ವೈಕುಂಠದಾಸರಾಗಿ ಬೇಲೂರಲ್ಲಿದ್ದ ರೆಂದೂ, ಆ ಸಂಕೇತಕ್ಕನುಸರಿಸಿಯೇ ಪಂಗುನಾಮದ ತಿಮ್ಮಣ್ಣದಾಸರೆಂದು ಇವರನ್ನು ವಿಜಯದಾಸರು ಕರೆದರೆಂದೂ ಮುಂತಾಗಿ ಐತಿಹ್ಯವಿದೆ. ವೇಣುಗೋಪಾಲ ವಿಠಲನೆಂಬ ಅಂಕಿತದಿಂದ ಇವರು ಕೀರ್ತನೆಗಳನ್ನು ಮಾಡಿ ದ್ದರು. ಇವರು ಅನೇಕ ಪದಸುಳಾದಿಗಳನ್ನು ಬರೆದವರು. ಗೋಪಾಲದಾಸ ರಷ್ಟೇ ಮಾನ್ಯರು. ತಿರುಗಿ ಇವರೇ ಮೊದಲಕಲ್ಲ ಶೇಷದಾಸರಾಗಿ ಜನ್ಮವೆತ್ತಿದ ರೆಂದು ದಾಸಕೂಟದಲ್ಲಿ ಆಖ್ಯಾಯಿಕೆಯಿದೆ. ಭಾಷೆಭಾವನೆಗಳಲ್ಲಿ ಇವರಿಗೂ ಗೋಪಾಲಸಹೋದರರಿಗೂ ಹೆಚ್ಚು ವ್ಯತಾಸಕಂಡುಬರುವದಿಲ್ಲ. ಅಂಕಿತದಿಂದ ಮಾತ್ರವೇ ಇವರ ಪದ್ಯಗಳನ್ನು ಗುರ್ತಿಸಬೇಕಾಗುತ್ತದೆ.

೧೧. **ಪ್ರಸನ್ನವೆಂಕಟದಾಸರು :** ಪುರಂದರದಾಸ, ಜಗನ್ನಾಥದಾಸ, ವಿಜಯದಾಸ, ಗೋಪಾಲದಾಸ ಈ ನಾಲ್ವರು ದಾಸಶ್ರೇಷ್ಠರ ನಂತರ ಹೆಸರ್ಗೊಂಡವರೆಂದರೆ ಪ್ರಸನ್ನವೆಂಕಟರಾಯರು. ಇವರು ವಿದ್ವಾಂಸರಾಗಿದ್ದು

ಅಪರೋಕ್ಷ ಜ್ಞಾನಿಗಳಾಗಿದ್ದರು. ಘಟಪ್ರಭಾನದಿಯ ದಂಡೆಯಮೇಲಿರುವ ಬಾಗಿಲು ಕೋಟೆಯೇ ಇವರ ಜನ್ಮಸ್ಥಳ. ಭಾದ್ರಪದ ಶುದ್ಧ ದ್ವಾದಶಿಯದಿನ ರಾಯರ ಪುಣ್ಯತಿಥಿಯು ಇವತ್ತಿಗೂ ಆಚರಿಸಲ್ಪಡುತ್ತಿದೆ.

ಧಾರವಾಡ, ವಿಜಾಪುರ ಜಿಲ್ಲೆಗಳಿಗೆ ಇವರ ಹಾಡುಗಳೆಂದರೆ ಮನೆ ಮಾತು. ಇವರ ಪೂರ್ವಜರು ಬಾಗಲಕೋಟೆಯ ಮೂಲನಿವಾಸಿಗಳಲ್ಲ. ಕಾಖಂಡಿಕೆಯಿಂದ ಬಂದು ಅಲ್ಲಿ ನೆಲಸಿದವರು. ವೆಂಕಪ್ಪನೆಂಬುದು ದಾಸರ ಪೂರ್ವಾಶ್ರಮದ ಹೆಸರು. ಅವರ ತಂಬೂರಿಯು ಇಂದಿಗೂ ಬಾಗಲಕೋಟೆ ಯಲ್ಲಿದೆ.

---

# ಪರಿಶಿಷ್ಟ ೨.

## ಕಥಾಸಂದರ್ಭಗಳು

**೧. 'ರಾವಣನು ಸಂದರಣದಲಿ'** ( ಪುಟ ೩ ) ಸಮರದಲ್ಲಿ ಸೋದರ, ಪುತ್ರ, ಮಿತ್ರ, ಕಳತ್ರ ಬಂಧುಬಳಗದವರನ್ನೆಲ್ಲ ಕಳೆದುಕೊಂಡು ಖಿನ್ನನಾದ ರಾವಣನು ಕೊನೆಯ ಹೋರಾಟಕ್ಕೆ ನಡೆದಾಗ ಗಣಪತಿಪೂಜೆಯನ್ನು ಮಾಡಲು ಅಹಂಕಾರದಿಂದ ನಿರಾಕರಿಸಿದ್ದರಿಂದ ಅವನಿಗೆ ಅಪಜಯವಾಯಿತೆಂದು ಆಖ್ಯಾಯಿಕೆಯಿದೆ.

**೨. 'ನಿನ್ನ ಪಾದಪೂಜಿಸಿದ ಧರ್ಮರಾಯ....'** ( ಪುಟ ೩ ) ಶ್ರೀಕೃಷ್ಣನ ಅಪ್ಪಣೆಯಮೇರೆಗೆ ಯುಧಿಷ್ಠಿರನು ಯುದ್ಧಕ್ಕೆ ಹೊರಡುವ ಪೂರ್ವದಲ್ಲಿ ಗಣಪತಿಯನ್ನು ಭಜಿಸಿದನು. ಅಂತೇ ಅವನಿಗೆ ಜಯವಾಯಿತು. ಆದ್ದರಿಂದ ಎಲ್ಲ ಕೆಲಸಗಳ ಆರಂಭದಲ್ಲಿ ಗಣನಾಥನನ್ನು ಪೂಜಿಸಬೇಕೆಂದು ತಾತ್ಪರ್ಯ.

**೩. 'ಮಧ್ವಮುನಿಯೆ ............ ಹರಿಗೆ ಪ್ರಾಣ'** ( ಪುಟ ೪ ) ದ್ವೈತಮತಸ್ಥಾಪನಾಚಾರ್ಯರೆನಿಸಿ, ಸರ್ವಜ್ಞರೆಂದು ಸುಪ್ರಸಿದ್ಧರಾದ ಮಧ್ವಾಚಾರ್ಯರು ತ್ರೇತಾಯುಗದಲ್ಲಿ ಹನುಮಂತನಾಗಿ ಜನ್ಮವೆತ್ತಿದರೆಂದೂ ದ್ವಾಪರದಲ್ಲಿ ಭೀಮಸೇನನಾಗಿ ಹುಟ್ಟಿ ಹರಿಗೆ ಪ್ರಿಯರಾದರೆಂದೂ, ಕಲಿಯುಗದಲ್ಲಿ ಮಧ್ಯಗೇಹಭಟ್ಟರ ಮಗನಾಗಿ ಮಧ್ವಮುನಿಯೆಂಬಬಿಧಾನದಿಂದ ಲೋಕದ ಕಲ್ಯಾಣವನ್ನು ಮಾಡಿದರೆಂದೂ ದಾಸಕೂಟದವರಲ್ಲಿ ನಂಬುಗೆಯಿತ್ತು. ಈ ವಿಶ್ವಾಸವು ಇಂದಿಗೂ ಶ್ರೀಮಧ್ವಾಚಾರ್ಯರ ಭಕ್ತರಿಗಿದೆ.

**೪. 'ನಿನ್ನ ಭಜಿಸುವವರ ಮನೆಯ ಮಾದಿಗದಾಸ'** ( ಪುಟ ೧೯ ) ಇದು ಭಕ್ತಶ್ರೇಷ್ಠರಾದ ಕನಕದಾಸರ ಮಾತು. ಕನಕದಾಸರು ವ್ಯಾಸ

ರಾಯರ ಶಿಷ್ಯರು, ಪುರಂದರದಾಸರ ಸಮಕಾಲೀನರು. ವ್ಯಾಸರಾಯರ ನಿರ್ಯಾಣಕ್ಕೆ ಕೆಲವು ದಿನಗಳ ಮೊದಲು ಪುರಂದರದಾಸ, ಕನಕದಾಸ ಹಾಗು ವ್ಯಾಸರಾಯರು ಒಟ್ಟುಗೂಡಿ ಯಾರ್‍ಯಾರು ತಿರುಗಿ ಎಷ್ಟೆಷ್ಟುಭಾರಿ ಜನ್ಮವೆತ್ತಬೇಕೆಂಬ ಬಗ್ಗೆ ಚರ್ಚೆಯಾಯಿತು. ವ್ಯಾಸರಾಯರು ಮೂರು ಸಲ ಜನ್ಮವೆತ್ತಬೇಕೆಂದೂ, ಪುರಂದರದಾಸರು ಆರು ಸಲ ಜನ್ಮವೆತ್ತಬೇಕೆಂದೂ, ಕನಕನು ತಿರುಗೊಮ್ಮೆ ಜನ್ಮವೆತ್ತಬೇಕೆಂದೂ ತೀರ್ಮಾನವಾಯಿತು. ಆಗ ಕುರುಬನಾದ ನನಗೇಕೆ ಪುನರ್ಜನ್ಮವೆಂದು ಕನಕರು ಪ್ರಶ್ನಿಸಿದರು. 'ಕುರುಬನಾಗು - ಅಥವಾ ಹೊಲೆಯನಾಗು; ಅ ಪ್ರಶ್ನೆಯಲ್ಲ. ಆದರೆ ದಾಸನಾಗಬೇಕು' ಎಂದರು. ಕನಕದಾಸರು ಗುರುವಚನವನ್ನು ಶಿರಸಾ ಮನ್ನಿಸಿದರು. ಅಂತೇ ಹೊಲೆಯನಾಗಿ ಜನ್ಮವೆತ್ತಿ ರಾಯರ ಮಠದ ಅನುಗ್ರಹಕ್ಕೆ ಪಾತ್ರರಾದರೆಂದು ದಾಸಕೂಟದಲ್ಲಿ ಐತಿಹ್ಯವಿದೆ.

೫. **'ಬಲಿಯ ಮನೆಯಬಾಗಿಲ ಕಾಯಿದವೋಲೆ'** (ಪುಟ ೨೫) ಇದು ಪುರಂದರದಾಸರ ಮಾತು. ಭಗವಂತನಿಗಿಂತಲೂ ಭಕ್ತರೇ ಬಲ್ಲಿದರು; ಭಗವಂತನು ಭಕ್ತಾಧೀನನು ಎಂಬುದನ್ನು ಪ್ರತಿಪಾದಿಸುವಾಗ ದಾಸರು 'ನೀನು ಬಲು ದೊಡ್ಡವನಹುದು ! ಅಹುದು !! ಬಲಿಚಕ್ರವರ್ತಿಯ ತ್ಯಾಗಕ್ಕೆ ಮೆಚ್ಚಿ, ಮೂರಡಿ ನೆಲವನ್ನು ಕೊಟ್ಟುದಕ್ಕೆ ಸತತ ಬಾಗಿಲಕಾದುಕೊಂಡಿರುವೆ ಎಂದು ಭಗವಂತನ ಭಕ್ತವಾತ್ಸಲ್ಯವನ್ನು ಕೊಂಡಾಡಿರುವನು.

೬. **'ಪಾರ್ಥನ ರಥಕೆ ಸೂತ....'** (ಪುಟ ೨೫) ಇದು ಪುರಂದರದಾಸರ ಮಾತು. ಪಾರ್ಥನ ಭಕ್ತಿಗೆ ಮೆಚ್ಚಿ ಶ್ರೀಕೃಷ್ಣನು ಭಕ್ತವತ್ಸಲನಾಗಿ ಆತನ ಬಂಡಿಯ ಬೋವನಾದನು. ಅಲ್ಲದೆ ಪಾಂಡವರ ಅಟ್ಟೋಳಿಗದವನಂತಿದ್ದು ಅವರನ್ನು ಕೊನೆಯವರೆಗೂ ಕಾಪಾಡಿದನು. ಭಕ್ತರು ಕರೆದಲ್ಲಿ ಹೋಗುವ ಭಗವಂತನೇ ! ನಿನಗಿಂತ ನಿನ್ನ ಭಕ್ತರು ಹೆಚ್ಚಲ್ಲವೆ? ಎಂದು ಪರಮಾತ್ಮನ ವಾತ್ಸಲ್ಯದ ಮಹಿಮೆಯನ್ನು ಇಲ್ಲಿ ದಾಸರು ಹಾಡಿರುವರು.

೭. **'ಧುರದಲಿ ಪಣೆಯನೊಡೆದ ಭೀಷ್ಮನ....'** (ಪುಟ ೨೫) ಭಾರತಯುದ್ಧದಲ್ಲಿ ತಾನು ಚಕ್ರವನ್ನು ಧರಿಸುವದಿಲ್ಲವೆಂದು ಶ್ರೀಕೃಷ್ಣನು ಸುಯೋಧನನಿಗೆ ಅಭಯವಚನವನ್ನು ಕೊಟ್ಟಿದ್ದನು. ಆದರೆ ಭೀಷ್ಮಾಚಾರ್ಯನು "ತಾನು ದಳಪತಿಯಾದುದಕ್ಕೆ ಶ್ರೀಕೃಷ್ಣನನ್ನು ಚಕ್ರಧರಿಸುವಂತೆ

ಮಾಡುವೆನು. ಅರ್ಜುನನನ್ನು ನೋಯಿಸುವೆನು. ನರನ ತೇರಿನ ಹಲಗೆಯ ಮೇಲಿದ್ದ ಕಪಿವರನನ್ನು ಮುಖತಿರುಗಿಸುವಂತೆ ಮಾಡಿ ಶಾಬಾಸುಪಡೆಯುವೆನೆ''ಂದು ಪಂಥವನ್ನು ತೊಟ್ಟಿದ್ದ. ಅದೇಮೇರೆಗೆ ಅರ್ಜುನನನ್ನು ನೋಯಿಸಿ, ಹನುಮಂತನನ್ನು ಶರಪಂಜರದಿಂದ ಬಿಗಿದು ಹರಿಯ ಪಣೆಗೆ ಗುರಿಯಿಟ್ಟು ಹೊಡೆಯಲು ಶ್ರೀಕೃಷ್ಣನು ಸಿಟ್ಟಿಗೆದ್ದು ಚಕ್ರವನ್ನು ಧರಿಸಿದನು. ಆಗ್ಗೆ ಭೀಷ್ಮನು ಬಲು ಬಗೆಯಿಂದ ನುತಿಸಿ 'ಭಗವಂತನೇ! ಭಕ್ತಾಧೀನನೇ ಶರಣನ ವಚನವನ್ನು ಪಾಲಿಸಿದೆಯಾ? ನಾನೇ ಧನ್ಯನು.' ಎಂದನು. ಕೃಷ್ಣನು ನಸುನಕ್ಕು ಪಾರ್ಥನ ರಥವನ್ನಡರಿದನು.

೮. **'ತರಳನು ಕರೆಯಲು....ನರಮೃಗರೂಪದಿಂದ'** (ಪುಟ ೨೫)
ಭಗವಂತನು ಭಕ್ತಾಧೀನನೆಂಬುದು ದಾಸರ ಉಕ್ತಿ. ಅದನ್ನು ಸಮರ್ಥಿಸುವದಕ್ಕಾಗಿ ಪುರಂದರದಾಸರು ಅನೇಕ ಉದಾಹರಣೆಗಳನ್ನು ಕೊಟ್ಟಿದ್ದಾರೆ. ಇಲ್ಲಿ ಪ್ರಹ್ಲಾದನನ್ನು ಭಗವಂತನು ಹಿರಣ್ಯಕಶಿಪುವಿನಿಂದ ಹೇಗೆ ಉಳಿಸಿದನೆಂಬುದನ್ನು ಉದಾಹರಿಸಲಾಗಿದೆ. ಪ್ರಹ್ಲಾದನು ವೈಷ್ಣವಶಿರೋಮಣಿಯು. ಇದು ದೈತ್ಯೇಂದ್ರನಾದ ಹಿರಣ್ಯಕಶಿಪುವಿಗೆ ಸಮಾಧಾನವಾಗಲಿಲ್ಲ. 'ಸರ್ವವ್ಯಾಪಕನಾದ ನಿನ್ನ ಹರಿಯನ್ನು ಈ ಕಂಬದಲ್ಲಿ ತೋರು! ಇಲ್ಲವಾದರೆ ನಿನ್ನ ಶಿರವ ಚಂಡಾಡುವೆ'ನೆಂದು ಘರ್ಜಿಸಿದನು. ಅಷ್ಟರಲ್ಲಿ ಹರಿಯು ಕಂಬವನ್ನು ಸೀಳಿ ನರಸಿಂಹನಾಗಿ ವೈರಿದೋರಿ ಪ್ರಹ್ಲಾದನನ್ನು ಕಾಪಾಡಿದನು.

೯. **'ದಾಯವನು ವಾಲ್ಮೀಕಿ ಮುನಿರಾಯಬಲ್ಲ'** (ಪುಟ ೨೮)
ಶ್ರೀರಾಮನಾಮದ ಮಹಿಮೆಯನ್ನು ವರ್ಣಿಸುತ್ತ ಶ್ರೀಪುರಂದರದಾಸರು ವಾಲ್ಮೀಕಿಯ ಚರಿತ್ರೆಯನ್ನು ಇಲ್ಲಿ ಉದಾಹರಿಸಿದ್ದಾರೆ. ವಿಷ್ಣುಸಹಸ್ರನಾಮಗಳಲ್ಲಿ ರಾಮನಾಮವೇ ಮಹತ್ವದ್ದು. ಅದರ ಮಹಿಮೆಯು ವಾಲ್ಮೀಕಿಯ ಚರಿತ್ರೆಯಲ್ಲಿ ಸ್ಪಷ್ಟವಾಗಿದೆ. ಮೂಲತಃ ವಾಲ್ಮೀಕಿಯು ಒಬ್ಬ ಬೇಡನು. ಅವನು ಮೃಗಬೇಟೆ, ನರಹಿಂಸೆ, ಮೊದಲಾದವುಗಳಿಂದ ತನ್ನ ಹೊಟ್ಟೆಹೊರುತ್ತಿದ್ದನು. ಒಂದುದಿನ ಸಪ್ತಋಷಿಗಳನ್ನು ಬೆನ್ನಟ್ಟಿದನು, ಆಗ್ಗೆ ಅವರು 'ಈ ನರಹತ್ಯೆಯ ಪಾಪಕ್ಕೆ ಹೊಣೆಗಾರರಾರೆ'ಂದು ಪ್ರಶ್ನಿಸಿದರು. ವಾಲ್ಮೀಕಿಯು ತನ್ನ ಹೆಂಡಿರು ಮಕ್ಕಳನ್ನು ಕೇಳಿದಾಗ ತಾವು ನಿರಪರಾಧಿಗಳೆಂದು ಅವರು ಉತ್ತರವಿತ್ತರು. ಆಗ್ಗೆ ವಾಲ್ಮೀಕಿಯು ಪಶ್ಚಾತ್ತಾಪಗೊಂಡು ಸಪ್ತರ್ಷಿಗಳ

ಮರೆಹೊಕ್ಕನು. ಅವರು 'ರಾಮ' ನಾಮಮಂತ್ರವನ್ನುಪದೇಶಿಸಿದರು. ಆದರಿಂದಲೇ ವಾಲ್ಮೀಕಿಗೆ ಸಿದ್ಧಿಯುಂಟಾಗಿ ವರಕವಿಯಾಗಿ ರಾಮಾಯಣವನ್ನು ರಚಿಸಿದನು; ಋಷಿಶ್ರೇಷ್ಠನಾದನು.

೧೦. 'ಭಕ್ತವರ ಹನುಮಂತನೊಬ್ಬ ಬಲ್ಲ' (ಪುಟ ೨೮) ಹನುಮಂತನು ಹುಟ್ಟಿದೊಡನೆ ರವಿಮಂಡಲಕ್ಕೆ ನೆಗೆದು ಹಣ್ಣೆಂದು ರವಿಯನ್ನು ತುಡುಕಿ ದೇವತೆಗಳನ್ನು ಹಿಂಸಿಸಿದಾಗ ಜ್ಞಾನಶೂನ್ಯನಾಗೆಂದು ಅವರು ಶಪಿಸಿದರು. ಪುತ್ರವಾತ್ಸಲ್ಯದಿಂದ ಹನುಮಂತನಿಗೆ ವಿಶಾಪವನ್ನು ಕೊಡಬೇಕೆಂದು ವಾಯುದೇವನು ಪ್ರಾರ್ಥಿಸಲು, ದೇವತೆಗಳು ರಾಮಭೃತ್ಯನಾಗಿ ಜ್ಞಾನಿಯಾಗುವನೆಂದು ನುಡಿದರು. ಅದೇಮೇರೆಗೆ ಆಂಜನೇಯನು ತ್ರೇತೆಯಲ್ಲಿ ರಾಮನಸೇವೆ ಮಾಡಿ ಬಂಟರಲ್ಲಿ ಮಿಗಿಲೆನಿಸಿದನು. ಭಕ್ತರಲ್ಲಿ ಶ್ರೇಷ್ಠನೆನಿಸಿ ಚಿರಂಜೀವಿಯಾದನು. ಒಮ್ಮೆ ಹನುಮಂತನ ಸತ್ವಪರೀಕ್ಷೆಯ ಕಾಲಬಂತು. ರಾಮದ್ರೋಹಿಯೊಬ್ಬನು ಹನುಮಂತನ ಮರೆಹೊಕ್ಕನು. ತನ್ನ ಶಪಥದಂತೆ ೮ ದಿನಗಳ ಅವಧಿಯಲ್ಲಿ ಆ ದುಷ್ಟನನ್ನು ನಿಗ್ರಹಿಸಲುದ್ಯುಕ್ತನಾದ ರಾಮನು ಹನುಮಂತನಮೇಲೆ ಬಾಣಗಳನ್ನು ಸುರಿಸಿದನು. ಮಹಾಭಕ್ತನಾದ ಹನುಮಂತನು ಪದ್ಮಾಸನದಲ್ಲಿದ್ದು ರಾಮನಾಮವನ್ನು ಜಪಿಸಿ ಕುಳಿತನು. ರಾಮನ ಬಾಣಗಳೆಲ್ಲ ಹೂಮಾಲೆಯಾಗಿ ಕಪಿವರನ ಕೊರಳನ್ನಲಂಕರಿಸಿದವು. ಆಗ್ಗೆ ಹನುಮಂತನು 'ದೇವಾ ಇದು ನಿನ್ನನಾಮದ ಮಹಿಮೆ' ಎಂದನು.

೧೧. 'ಸಿರಿ ಕಾಶಿಯೊಳಗಿಪ್ಪ ಶಿವನು ತಾಬಲ್ಲ' (ಪುಟ ೨೮) ಶಿವನು ವಿಷ್ಣುವಿನ ಸಹಸ್ರನಾಮವನ್ನು ತನ್ನ ಪತ್ನಿಯಾದ ಪಾರ್ವತಿಗೆ ಬಣ್ಣಿಸುತ್ತ ಅವುಗಳಲ್ಲೆಲ್ಲ ರಾಮನಾಮವೇ ಮಹತ್ವದ್ದೆಂದೂ ತನಗೆ ಹರಿಯು ರಾಮರೂಪದಲ್ಲಿ ದರ್ಶನ ಕೊಟ್ಟು, ಕೃತಾರ್ಥನನ್ನಾಗಿ ಮಾಡಿದನೆಂದೂ ರಾಮಾಯಣದ ಕಥೆಯನ್ನೆ ಗಿರಿಜೆಗೆ ತಿಳಿಸಿದಂತೆ ಆಖ್ಯಾಯಿಕೆಯಿದೆ. 'ಸೋಮಶೇಖರ ತನ್ನ ಭಾಮಿನಿಗೆ ಒರೆದಿಹ ಮಂತ್ರ'ವೇ (ಪುಟ ೨೯) ಅದೆಂದು ಪುರಂದರದಾಸರೂ ಸಮರ್ಥಿಸಿದ್ದಾರೆ.

೧೨. 'ಬಂದ ನಾಮವು ಅಜಾಮಿಳನ ಸಲಹಿತು' (ಪುಟ ೩೦) ದೇವರ ನಾಮದ ಮಹಿಮೆಯನ್ನು ವರ್ಣಿಸುವಾಗ ಅಕಸ್ಮಾತ್ 'ನಾರಾಯಣ' ನೆಂಬ ಹೆಸರನ್ನುಚ್ಚರಿಸಿದರಿಂದ ಅಜಾಮಿಳನಿಗೆ ಸ್ವರ್ಗವು ಲಭಿಸಿತೆಂಬುದನ್ನು

ಪುರಂದರ ದಾಸರು ಉದಾಹರಿಸಿದ್ದಾರೆ. ಅಜಾಮಿಳನು ಬ್ರಾಹ್ಮಣನಾಗಿದ್ದರೂ ಧರ್ಮ, ಆಚಾರ, ನೀತಿ ಮುಂತಾದವುಗಳನ್ನು ಬಿಟ್ಟು ಮದ್ಯಮಾಂಸ ಮೊದಲಾದವುಗಳನ್ನು ಸೇವನೆಮಾಡುತ್ತಿದ್ದನು. ಒಬ್ಬ ಬೇಡತಿಯನ್ನು ಭಾರ್ಯೆಯನ್ನಾಗಿ ಮಾಡಿಕೊಂಡು ಆಕೆಯಲ್ಲಿ ಹುಟ್ಟಿದ ಕೊನೆಯ ಮಗನಿಗೆ ನಾರಾಯಣನೆಂಬ ಹೆಸರನ್ನಿಟ್ಟಿದ್ದನು. ಕರ್ಮಧರ್ಮಸಂಯೋಗದಿಂದ ಪ್ರಾಣೋತ್ಕ್ರಮಣ ಕಾಲದಲ್ಲಿ ಕೊನೆಯ ಮಗನನ್ನು ಕರೆದನು. ಆಗ್ಗೆ ವೈಕುಂಠದಿಂದ ವಿಷ್ಣುದೂತರು ಬಂದು ಅಜಾಮಿಳನನ್ನು ಯಮದೂತರಿಂದ ಬಿಡಿಸಿ ವೈಕುಂಠಕ್ಕೆ ಒಯ್ದರೆಂದು ಭಾಗವತದಲ್ಲಿ ಉಲ್ಲೇಖಿಸಲ್ಪಟ್ಟಿದೆ.

**೧೩. 'ಈ ಮರ ಆ ಮರ ಧ್ಯಾನಿಸುತಿರುವಾಗ' (ಪುಟ ೩೪)** ಸಪ್ತರ್ಷಿಗಳು ರಾಮನಾಮ ಮಂತ್ರವನ್ನುಪದೇಶಿಸಿದರೂ ವಾಲ್ಮೀಕಿಗೆ ಅದನ್ನುಚ್ಚರಿಸುವದಕ್ಕಾಗಲಿಲ್ಲ. ಆಗ ಅವರು ಮರುಕಗೊಂಡು 'ಈ ಮರ–ಆಮರ' ವೆಂದುಚ್ಚರಿಸುವಂತೆ ಅವನಿಗೆ ಹೇಳಿದರು. ಹಲವು ದಿನಗಳ ಪ್ರಯತ್ನದಿಂದ ವಾಲ್ಮೀಕಿಗೆ 'ರಾಮ–ರಾಮ' ಎಂದುಚ್ಚರಿಸಲಿಕ್ಕೆ ಬಂತು. ಅದೇ ನಾಮ ಮಂತ್ರದಿಂದ ಅವನ ಪಾಪಕ್ಷಾಲನವಾಗಿ ಬ್ರಹ್ಮರ್ಷಿತ್ವವು ದೊರಕಿತು.

**೧೪. 'ಬಾಲೆಯು ಸಭೆಯಲಿ ಸೀರೆಯ ಸೆಳೆವಾಗ' (ಪುಟ ೩೪)** ಪಾಂಡವರ ಪತ್ನಿಯಾದ ದ್ರೌಪದಿಯು ಹಸ್ತಿನಾವತಿಯಲ್ಲಿ ಸುಯೋಧನನ ರಾಜಸಭೆಯಲ್ಲಿ ಸೀರೆಸುಲಿಯಲ್ಪಟ್ಟು ಅವಮಾನಿತಳಾಗುತ್ತಿದ್ದಾಗ ಕೃಷ್ಣನಿಗೆ ಮೊರೆಯಿಟ್ಟಳು. 'ಸೀರೆಯಕ್ಷಯವಾಗಲಿ' ಎಂದು ಕೃಷ್ಣನು ವರವನ್ನು ಕೊಟ್ಟನು. ದ್ರೌಪದಿಯ ಮಾನರಕ್ಷಣೆಯಾಯಿತು.

**೧೫. 'ಹಸುಳೆ ಆ ಧ್ರುವರಾಯ ಅಡವಿಗೆ ಪೋಪಾಗ' (ಪುಟ ೩೩)** ಉತ್ತಾನಪಾದರಾಯರಿಗೆ ಸುನೀತಿ-ಸುರುಚಿಯರೆಂಬ ಇಬ್ಬರು ಹೆಂಡಿರಿದ್ದರು. ಧ್ರುವನು ಹಿರಿಯರಸಿಯಮಗನು. ಕಿರಿಯರಾಣಿಯ ಮೇಲಿನ ವ್ಯಾಮೋಹದಿಂದ ಉತ್ತಾನಪಾದರಾಯನು ಧ್ರುವನನ್ನು ಅನಾದರಿಸಿದನು. ಸುರುಚಿಯು ಅಪಮಾನಮಾಡಿದಳು. ಯಾರ ಹಂಗೂ ಇಲ್ಲದ ಸ್ಥಿರವಾದ ಪಟ್ಟವನ್ನು ಸಂಪಾದಿಸಲು ಹೊರಟ ಧ್ರುವನ ಭಕ್ತಿಗೆ ಮೆಚ್ಚಿ ನಾರಾಯಣನು ಅವನಿಗೆ ಉನ್ನತದ ಪದವನ್ನು ಕರುಣಿಸಿದನು.



೧—೭೪೧೧

**೧೬. 'ಬ್ರಹ್ಮಗೆ ಶಿರಹೋಗಿ ಭಿನ್ನವಾದ ಚಿಂತೆ'** ( ಪುಟ ೬೨ ) ಜಗತ್ತಿನಲ್ಲಿ ಮಾನವರಿಂದ ಆರಂಭಿಸಿ ದೇವರ್ಕಳವರೆಗೂ ಯಾರಿಗೂ ಚಿಂತೆ ತಪ್ಪಿದ್ದಲ್ಲ. ಸೃಷ್ಟಿಕರ್ತನಾದ ಬ್ರಹ್ಮನು ಪಾರ್ವತೀಪರಿಣಯದ ಕಾಲದಲ್ಲಿ ಪುರೋಹಿತನಾಗಿದ್ದು ಆಕೆಯ ರೂಪಲಾವಣ್ಯಗಳಿಗೆ ಮೋಹಿಸಿ ಚಿತ್ತಚಾಂಚಲ್ಯ ವಾಯಿತೆಂದೂ ಆಗ ಶಿವನು ಬ್ರಹ್ಮನ ಒಂದು ಶಿರಸ್ಸನ್ನು ಕತ್ತರಿಸಿದನೆಂದೂ ಶಿವಪುರಾಣದಲ್ಲಿ ಹೇಳಲ್ಪಟ್ಟಿದೆ.

**೧೭. 'ರಕ್ಕಸರ ಗುರುವಿಗೆ ಕಣ್ಣಿಲ್ಲದ ಚಿಂತೆ'** ( ಪುಟ ೬೨ ) ಬಲಿಯೊಡನೆ ದಾನಬೇಡಲು ಶ್ರೀಹರಿಯು ವಾಮನ ( ಉಪೇಂದ್ರ ) ನಾಗಿ ಹೋದಾಗ, ತನ್ನ ವಚನದಂತೆ ಬಲಿಯು ಮೂರಡಿ ನೆಲವನ್ನು ಧಾರೆಯೆರೆದು ಕೊಡಲು, ದೈತ್ಯಗುರುವಾದ ಶುಕ್ರಾಚಾರ್ಯರು ಸಣ್ಣ ಕಪ್ಪೆಯ ರೂಪದಲ್ಲಿ ಗಿಂಡೆಯ ಕೊಂಬನ್ನು ಒಳಹೊಕ್ಕು ತಡೆದರು. ವಾಮನನು ಶ್ರೀ ದರ್ಭೆಯಿಂದ ಗಿಂಡೆಯ ಕೊಂಬನ್ನು ಚುಚ್ಚಲು ರಕ್ತಪ್ರವಾಹವು ಹೊನಲಾಗಿ ಹರಿಯಿತು. ಶುಕ್ರಾಚಾರ್ಯರು ಒಂದು ಕಣ್ಣನ್ನು ಕಳೆದುಕೊಂಡು ಅದನ್ನು ಪಡೆಯುವದಕ್ಕೆ ಬಹುಕಾಲ ತಪಸ್ಸು ಮಾಡಬೇಕಾಯಿತು.

**೧೮. 'ಮನ್ಮಥಗೆ ಶಿರವಳಿದು ಭಸ್ಮವಾದ ಚಿಂತೆ'** ( ಪುಟ ೬೨ ) ಸತಿಯ ವಿರಹದಿಂದ ವೈರಾಗ್ಯವನ್ನು ಹೊಂದಿದ ಶಿವನು ಘೋರತರವನ್ನಾಚರಿಸಿದನು. ಆಗ್ಗೆ ತಾರಕನ ವಧೆಗೆ ಗುಹನ ಜನ್ಮವಾಗಬೇಕಾಗಿತ್ತು. ಅದೇ ವನದಲ್ಲಿ ಸತಿಯು ಗಿರಿಜೆಯಾಗಿ ಶಿವನನ್ನು ವರಿಸಬೇಕೆಂದು ತಪಮಾಡುತ್ತಿದ್ದಳು. ದೇವತೆಗಳು ಕಂಗೆಟ್ಟು ವಿಷ್ಣುವಿಗೆ ಮೊರೆಯಿಟ್ಟರು. ಮನ್ಮಥನು ದೇವತೆಗಳ ಹಿತಕ್ಕಾಗಿ ಶಿವನೊಡನೆ ಕಾದಿ ಭಸ್ಮೀಭೂತನಾದನು.

**೧೯. 'ಮುಕ್ಕಣ್ಣ ಶಿವನಿಗೆ ತಿರಿದುಂಬೋ ಚಿಂತೆ'** ( ಪುಟ ೬೨ ) ಬ್ರಹ್ಮಕಪಾಲವು ಶಿವನ ಕರವನ್ನು ಕಚ್ಚಿತು. ಶಿವನು ಆ ಬಳಿಕ ಉನ್ಮತ್ತನಾಗಿ ಭಿಕ್ಷಾಟನಮಾಡಿದನು. ಶಿವನ ವೈರಾಗ್ಯವು ಹೆಚ್ಚಿತು–ಮುಂತಾಗಿ ಶಿವಪುರಾಣದಲ್ಲಿ ಹೇಳಿದೆ. ಚಿಂತೆಯಿಲ್ಲದವರಾರೂ ಇಲ್ಲವೆಂಬುದನ್ನು ಸಮರ್ಥಿಸಿ ಪುರಂದರದಾಸರು ಈ ಮೇಲೆ ಉಲ್ಲೇಖಿತವಾದ ನಾಲ್ಕು ಉದಾಹರಣೆಗಳನ್ನು ತಮ್ಮ ಕೀರ್ತನೆಯಲ್ಲಿ ಕೊಟ್ಟಿರುವರು.

**೨೦. 'ಕರಿ.... ಪತಿಕರಿಸಲು'** ( ಪುಟ ೮೫ ) ಪಾಂಡ್ಯ ದೇಶದ ಅರಸನಾದ ಇಂದ್ರದ್ಯುಮ್ನನು, ಅಗಸ್ತ್ಯಋಷಿಯ ಶಾಪದಿಂದ ಆನೆಯಾಗಿ

ಮೆರೆದಾಡುತ್ತಿರುವಾಗ ದೊಡ್ಡ ಮಡುವಿನಲ್ಲಿ ಶಾಪಗ್ರಸ್ತನಾಗಿ ನೆಗಳಾಗಿದ್ದ ಓರ್ವ ಗಂಧರ್ವನು, ಆನೆಯನ್ನು ಹಿಡಿದೆಳೆದನು. ಆಗ್ಗೆ ಆನೆಯ ರೂಪದಲ್ಲಿದ್ದ ಇಂದ್ರದ್ಯುಮ್ನನು ಪೂರ್ವಸಂಸ್ಕಾರದಬಲದಿಂದ ಹರಿಯನ್ನು ಧ್ಯಾನಿಸಲು, ಹರಿಯು ಪ್ರಸನ್ನನಾಗಿ ಇಬ್ಬರಿಗೂ ಶಾಪವಿಮೋಚನವಾಯಿತು.

೨೧. **'ಪರಶುರಾಮನಾಗಿ ಪಾವಕನಲಿ ನೀನೆ'** (ಪುಟ ೮೮) ದೇವರ ಸರ್ವವ್ಯಾಪಿತ್ವವನ್ನು ಬಣ್ಣಿಸುವಾಗ ಗೋಪಾಲದಾಸರು ಅಂದು ಪರಶುರಾಮನಾಗಿ ಅವತರಿಸಿ ೨೧ ಭಾರಿ ಕ್ಷತ್ರಿಯರನ್ನು ಸಂಹರಿಸಿದಾಗ ಅವನ ಕೋಪಾನಲದಲ್ಲಿ ವ್ಯಾಪಿಸಿದವನು ನೀನೆಯೆಂದು ಭಗವಂತನನ್ನು ಸ್ತುತಿಸಿದ್ದಾರೆ. ಮಾಹಿಷ್ಮತಿನಗರಕ್ಕೊಡೆಯನಾದ ಕಾರ್ತವೀರ್ಯಾರ್ಜುನನು ಕಾಮಧೇನು ವನ್ನು ಜಮದಗ್ನಿಯು ಕೊಡಲೊಪ್ಪದ್ದಕ್ಕೆ ಅವನ ಶಿರಸನ್ನು ಕತ್ತರಿಸಿದನು. ಆಗ್ಗೆ ರೇಣುಕೆಯು ವೈಧವ್ಯದುಃಖಪೀಡಿತಳಾಗಿ ಪರಶುರಾಮನಿಗೆ ಗೋಳಿ ಟ್ಟಾಗ ಭಾರ್ಗವನು ತನ್ನ ಕೊಡಲಿಯಿಂದ ೨೧ ಭಾರಿ ಕ್ಷತ್ರಿಯರನ್ನು ಸಂಹಾರ ಮಾಡಿದನು ಎಂದು ಭಾಗವತದಲ್ಲಿ ಹೇಳಲ್ಪಟ್ಟಿದೆ.

೨೨. **'ಅಂಬರೀಷಗೆ ಒಲಿದ ಅಕ್ರೂರ ಸಖನೀನು'** (ಪುಟ ೧೦೪) ಭಾಗವತೋತ್ತಮನಾದ ಅಂಬರೀಷನು ಏಕಾದಶೀವ್ರತವಾದ ಬಳಿಕ ದ್ವಾದ ಶಿಯ ಪಾರಣೆಯನ್ನು ಮಾಡಬೇಕಾಗಿತ್ತು. ಅಷ್ಟರಲ್ಲಿ ಅಭ್ಯಾಗತರಾಗಿ ದೂರ್ವಾ ಸರು ಆಗಮಿಸಿದ್ದರು. ಯಮುನೆಯಲ್ಲಿ ಅವರು ಮಿಂದುಬರುವದಕ್ಕೆ ಹೊತ್ತಾದ್ದರಿಂದ ದ್ವಾದಶಿಯ ಹೊತ್ತು ಮೀರದಂತೆ ಪುರೋಹಿತರ ಹೇಳಿಕೆಯ ಮೇರೆಗೆ ಅರಸನು ಉದಕಪಾರಣೆ ಮಾಡಿದನು. ದೂರ್ವಾಸರು ಇದನ್ನು ತಿಳಿದು ಸಿಟ್ಟಾಗಿ ಕೃತ್ಯೆಯೆಂಬ ಒಂದು ದೇವತೆಯನ್ನು ಅಂಬರೀಷನ ಬೆನ್ನಟ್ಟುವಂತೆ ಕಳಿಸಿದರು. ಹರಿಯ ಚಕ್ರವು ಅದನ್ನು ನಿಗ್ರಹಿಸಿ ದೂರ್ವಾಸನ ಬೆನ್ನಟ್ಟಿತು. ದೂರ್ವಾಸನು ಕೊನೆಗೆ ಹರಿಯಾಜ್ಞೆಯಂತೆ ಅಂಬರೀಷನ ಶರಣು ಹೊಕ್ಕನು. ಚಕ್ರವು ಶಾಂತವಾಗಿ ಹರಿಯೆಡೆಗೆ ಮರಳಿತು.

೨೩. **'ಗೋಪಿದೇವಿಯಂತೆ ಒರಳಿಗೆ ಕಟ್ಟಿದೆ'** (ಪುಟ ೧೦೫) ಬಾಲ ಕೃಷ್ಣನ ತುಂಟತನವನ್ನು ಸಹಿಸಲಾರದೆ ಯಶೋದೆಯು ಒಂದು ದಿನ ಆತನನ್ನು ಒರಳಿಗೆ ಕಟ್ಟಿ ಹಾಕಿದ್ದಳು. ಶಿಶುವಾದ ಕೃಷ್ಣನು ಅಮಾನುಷಿಕ ಶಕ್ತಿಯಿಂದ ಆ ಒರಳನ್ನು ಎಳೆದೊಯ್ದು ಎರಡು ಅರಳಿ ವೃಕ್ಷಗಳ ನಡುವೆ ಹೋದನು.

ಒರಳನ್ನು ವೃಕ್ಷಗಳು ತಡೆದವು. ಕೃಷ್ಣನು ಬಲವಾಗಿ ಎಳೆದನು. ಎರಡೂ ಮರಗಳು, ಧರೆಗುರುಳಿ ಶಾಪಗ್ರಸ್ತರಾದ ನಳಕೂಬರ ಮಣಿಗ್ರೀವರೆಂಬ ಗಂಧರ್ವರಿಗೆ ಶಾಪವಿಮೋಚನೆಯಾಯಿತು. ಗೋಪಿಗೆ ಪರಮಾತ್ಮನ ದರ್ಶನವಾಯಿತು; ಅಮಾನುಷಿಕ ಶಕ್ತಿಯ ಅರಿವೂ ಉಂಟಾಯಿತು.

**೨೪. 'ಭೃಗುಮುನಿಯಂತೆ ನಿನ್ನೆದೆಯಮೇಲೊದೆಯದೆ'** (ಪುಟ ೧೦೫) ಒಮ್ಮೆ ಋಷಿಗಳೆಲ್ಲ ಸಭೆಗೂಡಿ ತ್ರಿಮೂರ್ತಿಗಳಲ್ಲಿ ಆರು ಹೆಚ್ಚಿನವರೆಂದು ಚರ್ಚಿಸಿದರು. ಸಭೆಯಲ್ಲಿ ಭಿನ್ನಾಭಿಪ್ರಾಯಗಳು ತಲೆದೋರಿ ತ್ರಿಮೂರ್ತಿಗಳ ಸತ್ವಪರೀಕ್ಷೆಗೆ ಭೃಗುಋಷಿಯನ್ನಟ್ಟಿದರು. ಮೊಟ್ಟಮೊದಲಿಗೆ ಭೃಗುಮುನಿಯು ಸತ್ಯಲೋಕಕ್ಕೆ ಹೋಗಿ ಉದ್ಧಟನಾಗಿ ಪರಮೇಷ್ಟಿ (ಬ್ರಹ್ಮ)ಯ ಮುಂದೆ ನಿಂತನು. ಬ್ರಹ್ಮನ ವಿವೇಕವು ನಾಶವಾಯಿತು. ಸಿಟ್ಟು ಮಿತಿಮೀರಿತು. ಆದರೂ ಮಗನೆಂಬ ವ್ಯಾಮೋಹದಿಂದ ಸುಮ್ಮನಾದನು. ಅಲ್ಲಿಂದ ಭೃಗುವು ರಜತಾದ್ರಿಗೆ ಹೊರಟನು. ಶಿವನು ಸ್ವಾಗತಿಸಿದನು. ಸತತ ಸ್ಮಶಾನವಾಸಿಯಾದ ನೀನು ಅಸ್ಪೃಶ್ಯನೆಂದು ಭೃಗುವು ಶಿವನನ್ನು ಮುಟ್ಟಲಿಲ್ಲ. ಶಿವನು ಸಿಟ್ಟಿಗೆದ್ದು ಮುಂದರಿಸಲು ಪಾರ್ವತಿಯು ತಡೆದಳು. ಅಲ್ಲಿಂದ ಭೃಗುಋಷಿಯು ವೈಕುಂಠಕ್ಕೆ ಬಂದನು. ಶ್ರೀಹರಿಯು ಯೋಗನಿದ್ರೆಯಲ್ಲಿದ್ದನು. ಭೃಗುಋಷಿಯು ಹರಿಯ ವಕ್ಷಸ್ಥಲವನ್ನು ತುಳಿದನು. ಹರಿಯು ಎಚ್ಚತ್ತು ಮುನಿಯ ಕ್ಷಮೆಯನ್ನು ಯಾಚಿಸಿ ಬಗೆಬಗೆಯಿಂದ ಉಪಚರಿಸಿ ಮುನಿಯ ಪಾದಸ್ಪರ್ಶದಿಂದ ತನ್ನ ಕಲ್ಮಷಗಳೆಲ್ಲ ದೂರವಾದವೆಂದು ಹೇಳಿ ಋಷಿಯ ಪಾದಸೋಂಕಿದ ಚಿಹ್ನೆಗಾಗಿ ಶ್ರೀವತ್ಸವೆಂಬ ಲಾಂಛನವನ್ನು ಧರಿಸಿಕೊಂಡನು. ಕೊನೆಗೆ ಋಷಿಗಳೆಲ್ಲರೂ ಶ್ರೀನಿವಾಸನೇ ಹೆಚ್ಚಿನವನೆಂದು ನಿರ್ಧರಿಸಿದರು.

**೨೫. 'ಕೊಂಕಣೇರೆಮ್ಮೆಗೆ ಕೊರಡೇ ಮದ್ದೆಂಬಂತೆ'** (ಪುಟ ೧೦೫) ಕೊಂಕಣ ದೇಶದ ಎಮ್ಮೆಗಳಿಗೆ ಅಗಲಕಿರಿದಾದ ದೇಹವಿರುವದರಿಂದ ಸಾಮಾನ್ಯವಾಗಿ ಅವುಗಳಿಗೆ ಯಾವ ಬೇಲಿಯೂ ಸಾಕಾಗುವದಿಲ್ಲ. ಅವುಗಳ ದಾಳಿಯಿಂದ ಹೊಲಗಳನ್ನು ಸುರಕ್ಷಿತವಾಗಿ ಉಳಿಸುವದಕ್ಕೆ ದೊಡ್ಡದೊಡ್ಡ ಕೊರಡನ್ನು ಅಂಥ ಎಮ್ಮೆಗಳ ಕುತ್ತಿಗೆಗೆ ಕಟ್ಟುತ್ತಾರೆ. ಅದೇ ರೀತಿ ನಿನ್ನ ಕೊರಳಿಗೂ ನಮ್ಮ ಭಕ್ತಿಯೆಂಬ ಕೊರಡನ್ನು ಕಟ್ಟಿದಲ್ಲಿ ನೀನು ಓಡಿಹೋಗಲಾರೆಯೆಂದು

ಭಗವಂತನನ್ನು ತಡೆದಿಡುವ ಉಪಾಯುವನ್ನು ಪುರಂದರದಾಸರು ತಮ್ಮ ಸುಳಾದಿಗಳಲ್ಲಿ ಬಹು ಮಾರ್ಮಿಕವಾಗಿ ಹೇಳಿದ್ದಾರೆ.

೨೬. **'ಅಹಲ್ಯೆಯ ಪೊರೆದವ'** (ಪುಟ ೧೦೮) ದೇವೇಂದ್ರನ ವಂಚನೆಗೆ ಬಲಿಬಿದ್ದು ಗೌತಮಪತ್ನಿಯಾದ ಅಹಲ್ಯೆಯ ಪಾತಿವ್ರತ್ಯಭಂಗ ವಾಯಿತು. ಇದನ್ನು ತಿಳಿದ ಗೌತಮನು ಅಹಲ್ಯೆಗೆ ಕಲ್ಲಾಗೆಂದು ಶಪಿಸಿದನು. ಆಕೆಯು ಮನಕರಗುವಂತೆ ವಿನಂತಿಮಾಡಿಕೊಂಡು ವಿಶಾಪವನ್ನು ಬೇಡಿ ಕೊಳ್ಳಲು ರಾಮಚರಣಸ್ಪರ್ಶದಿಂದ ಉದ್ಧಾರವಾಗುವದೆಂದು ಮುನಿಯು ಅನುಗ್ರಹಿಸಿದನು. ಅದೇಮೇರೆಗೆ ತ್ರೇತೆಯಲ್ಲಿ ರಾಮಚರಣವು ಸೋಂಕಿ ದೊಡನೆ ಕಲ್ಲಾಗಿ ಬಿದ್ದಿದ್ದ ಆಕೆಯು ಹೆಣ್ಣಾದಳು. ಆದ್ದರಿಂದ ಶ್ರೀಹರಿಗೆ ಅಹಲ್ಯೆಯನ್ನು ಪೊರೆದವನೆಂದು ಬಿರಿದುಂಟಾಯಿತು.

೨೭. **'ಅಪ್ಪಣ್ಣ ಭಾಗವತನ ವೇಷತಾಳಿ ತುಪ್ಪದ ಬಿಂದಿಗೆ'** (ಪುಟ ೧೧೧) ತಿರುಪತಿಯಲ್ಲಿ ಪುರಂದರದಾಸರು ತಮ್ಮ ಬಿಡಾರದಲ್ಲಿ ಬ್ರಹ್ಮೋತ್ಸವವನ್ನು ಜರುಗಿಸಿದರು. ವಿಜಯನಗರದ ಕೃಷ್ಣದೇವರಾಯನೇ ಮೊದಲಾದವರು ಅಲ್ಲಿಗೆ ಅತಿಥಿಗಳಾಗಿ ಬಂದಿದ್ದರು. ಅಲ್ಲಿ ತುಪ್ಪದ ಕೊರತೆ ಯಾಗಿತ್ತು. ಪಾರುಪತ್ಯಗಾರನೂ, ಶಿಷ್ಯನೂ ಆದ ಅಪ್ಪಣ್ಣ ಭಾಗವತನು ಭಜನೆಯಲ್ಲಿ ಮಗ್ನನಾಗಿದ್ದನು. ದಾಸರು ಅಪ್ಪಣ್ಣ ಭಾಗವತನನ್ನು ಕರೆದು ತುಪ್ಪತಾಯೆಂದು ಕೂಗಿದರು. ಶ್ರೀಹರಿಯು ಅಪ್ಪಣ್ಣ ಭಾಗವತನ ರೂಪವನ್ನು ಧರಿಸಿ ತಾನೇ ತುಪ್ಪ ತಂದುಕೊಟ್ಟನು. ಆ ವಿಷಯವು ತಿಳಿದಬಳಿಕ 'ಎಂದಪ್ಪಿ ಕೊಂಬೆ ರಂಗಯ್ಯನನೆಂದಪ್ಪಿಕೊಂಬೆ' ಎಂದು ದಾಸರು ಹಾಡಿದರು.

೨೮. **'ಅಸುರೆಪೂತನಿಯ ಪ್ರಾಣಾಪಹಾರಿ'** (ಪುಟ ೧೧೪) ಶ್ರೀವಿಷ್ಣುವು ಜನ್ಮವೆತ್ತಿ ತನ್ನನ್ನು ಕೊಲ್ಲುವನೆಂಬ ವೃತ್ತಾಂತವನ್ನು ಬಾಲೆಯ ರೂಪದಲ್ಲಿ ಮೈದೋರಿದ ಮಾಯೆಯಿಂದ ತಿಳಿದ ಕಂಸನು ಕೃಷ್ಣನನ್ನು ಕೊಲ್ಲುವದಕ್ಕಾಗಿ ತನ್ನ ಡಿಂಗರಿಗರನ್ನು ಕಳಿಸಿದನು. ಪೂತನೆಯು ಅವರಲ್ಲೊ ಬ್ಬಳು. ಆಕೆಯ ಮೊಲೆಯಲ್ಲಿ ವಿಷದ ಹಾಲಿತ್ತು. ಕೃಷ್ಣನಿಗೆ ಮೊಲೆಯೂಡಿ ಸಿದಳು. ಕೃಷ್ಣನು ಆಕೆಯ ಪ್ರಾಣವಾಯುವನ್ನು ಹೀರಿದನು.

೨೯. **'ಆ ಕುಬುಜೆಯನು ಕೂಡಿದ'** (ಪುಟ ೧೨೨) ಭಗವಂತನು ಭಕ್ತವತ್ಸಲನು ಹಾಗೂ ಭಕ್ತಾಧೀನನೆಂಬುದು ಭಕ್ತಜನರ ನಂಬುಗೆ. ಬಿಲ್ಲ

ಹಬ್ಬಕ್ಕೆ ಆಮಂತ್ರಿಸಲ್ಪಟ್ಟ ಶ್ರೀಕೃಷ್ಣನು ಮಧುರಾನಗರವನ್ನು ಪ್ರವೇಶಿಸಿದಾಗ ಡೊಂಕುಶರೀರದ ಕುಬ್ಜೆಯೆಂಬ ಭಕ್ತೆಯು, ಕೃಷ್ಣನಿಗೆ ಆರತಿಯನ್ನು ಮಾಡಿದಳು. ಶ್ರೀಹರಿಯ ಕರಕಮಲಸ್ಪರ್ಶವಾದೊಡನೆ ಆಕೆಗೆ ದಿವ್ಯ ರೂಪುಂಟಾಯಿತು. ಶ್ರೀಕೃಷ್ಣನು ಆಕೆಯನ್ನು ಪರಿಗ್ರಹಿಸಿದನು.

**೩೦. 'ದಧೀಚಿಋಷಿ ತನ್ನ ಅಸ್ಥಿ ಸುರರಿಗಿತ್ತು'** ( ಪುಟ ೧೫೫ ) ವೃತ್ರಾಸುರನನ್ನು ಸಂಹರಿಸುವದಕ್ಕೆ ತಕ್ಕುದಾದ ಆಯುಧವಿಲ್ಲದೆ ಖಿನ್ನನಾದ ದೇವೇಂದ್ರನು ನಾರದರ ಮುಖದಿಂದ ದಧೀಚಿಯ ಬೆನ್ನೆಲುಬಿನಿಂದ ವೃತ್ರನನ್ನು ಕೊಲಲಾಗುವದೆಂದು ತಿಳಿದನು. ಇಂದ್ರನು ದಧೀಚಿಯಿಂದ ಬೆನ್ನೆಲುಬನ್ನು ಬೇಡಿದನು. ೩೩ ಕೋಟಿ ದೇವರ್ಕಳ ಹಾಗು ಜಗತ್ತಿನ ಹಿತಕ್ಕಾಗಿ ದಧೀಚಿಯು ತನ್ನ ಬೆನ್ನೆಲುಬನ್ನು ಕೊಟ್ಟನು. ಅದರಿಂದ ವಜ್ರಾಯುಧವನ್ನು ರಚಿಸಲಾಯಿತು.

**೩೧. 'ಮಿಥಿಲೇಶ "ಮಮ .... ದಹ್ಯತಿ"—'** ( ಪುಟ ೧೫೫ ) ರಾಜಋಷಿಶ್ರೇಷ್ಟನಾದ ಜನಕನು ತನ್ನ ಗುರುಗಳ ಬಳಿ ಅಭ್ಯಾಸಮಾಡುತ್ತಿದ್ದಾಗ ಅವನ ರಾಜ್ಯಕ್ಕೆ ಬೆಂಕಿ ಬಿತ್ತೆಂಬ ಸುದ್ದಿ ಬಂತು. ಆದರೆ ಜ್ಞಾನಿಯಾದ ಮಿಥಿಲೇಶನು ಸಂಸಾರದಲ್ಲಿದ್ದು ಇಲ್ಲದವನಂತೆ 'ಮಮ ಕಿಂಚಿನ್ನದಹ್ಯತಿ' ಎಂದು ಮಾರುತ್ತರ ಕೊಟ್ಟು, ನಿಶ್ಚಿಂತನಾಗಿದ್ದನು. ಇಲ್ಲಿ ಪುರಂದರದಾಸರು ಜನಕರಾಯನ ಅಲಿಪ್ತಜೀವನವನ್ನು ಬಣ್ಣಿಸಿ ಇದೇ ಉತ್ತಮವೆಂದು ವಿಶದೀಕರಿಸಿದ್ದಾರೆ.

**೩೨. 'ಕರಪತ್ರದಿಂದ ತಾಮ್ರಧ್ವಜನ ಕೊರಳಕೊಯ್ಸಿದೆ'** ( ಪುಟ ೧೯೭ ) ಪಾಂಡವರ ಸಂಬಂಧದಲ್ಲಿ 'ಮಮಪ್ರಾಣಾಹಿಪಾಂಡವಾ' ಎಂದು ಶ್ರೀಕೃಷ್ಣನು ತಳೆದ ಬಿರಿದು. ಅಶ್ವಮೇಧದ ಕುದುರೆಯು ೫೬ ದೇಶಗಳಲ್ಲಿ ಸಂಚರಿಸುತ್ತಿರುವಾಗ ಮಯೂರಧ್ವಜನ ಮಗನಾದ ತಾಮ್ರಧ್ವಜನು ಕುದುರೆಯನ್ನು ಕಟ್ಟಿ ಕಾದಾಡಿದನು. ಕೃಷ್ಣಾರ್ಜುನರು ಸೋತು ವೃದ್ಧವಿಪ್ರನ ವೇಷವನ್ನು ಹಾಗು ವಟುವೇಷವನ್ನು ತಳೆದುಕೊಂಡು ಮಯೂರಧ್ವಜನ ದೇಹದ ಅರ್ಧಭಾಗವನ್ನು ಯಾಚಿಸಿದರು. ಆತನು ಕೊಟ್ಟನು. ಆಗ್ಗೆ ತನ್ನ ದಿವ್ಯರೂಪದರ್ಶನವನ್ನು ಕೊಟ್ಟು ತಾವು ಕೃಷ್ಣಾರ್ಜುನರೆಂದು ತಿಳಿಸಿ ತನ್ನ ಭಕ್ತನ ಮನಸ್ಸನ್ನು ಗೋವಿಂದನು ಸಂತೋಷಗೊಳಿಸಿದನು,



**೩೩. 'ತ್ರಿಪುರಾಸುರನ ಹೆಂಡಿರನು ಬೆರೆದೆ'** (ಪುಟ ೧೯೭) ಕಮಲಾಕ್ಷನೇ ಮೊದಲಾದ ರಾಕ್ಷಸರು ಲೋಕಕಂಟಕರಾಗಿ ಪೀಡಿಸುವಾಗ ಅವರವಧೆಗೆ ಪತಿವ್ರತೆಯರಾದ ಆ ರಾಕ್ಷಸ ಸ್ತ್ರೀಯರ ಪಾತಿವ್ರತ್ಯವನ್ನು ಕೆಡಿಸಬೇಕಾಯಿತು. ಆಗ ಹರಿಯು ಬೌದ್ಧರೂಪದಿಂದ ಬಂದು ಅವರ ಪಾತಿವ್ರತ್ಯಭಂಗಮಾಡಿ ಲೋಕಕಲ್ಯಾಣವನ್ನು ಮಾಡಿದನು.

**೩೪. 'ಕಲಹಬಾರದ ಹಾಗೆ ಕರ್ಣನನು ನೀ ಕೊಂದೆ'** (ಪುಟ ೧೯೭) ಕರ್ಣನು ಕುಂತಿಯ ಚೊಚ್ಚಲಮಗನು. ಕರ್ಣನು ಬದುಕಿ ಪಾಂಡವರಿಗೆ ಜಯವಾಗುತ್ತಿದ್ದರೆ ಕರ್ಣನಿಗೆ ಸಿಂಹಾಸನವು ಮೀಸಲಾಗುತ್ತಿತ್ತು. ಅಣ್ಣ-ತಮ್ಮಂದಿರಲ್ಲಿ ಕಲಹವಾಗುವ ಸಂಭವವು ಇತ್ತು. ಅದನ್ನು ತಪ್ಪಿಸುವದಕ್ಕೆ ಶ್ರೀಕೃಷ್ಣನು ಉಪಾಯಾಂತರದಿಂದ ಅವನನ್ನು ಕೊಲ್ಲಿಸಿದನು.

**೩೫. 'ಸುಲಭದಲಿ ಕೌರವರ ಮನೆಯಮುರಿದೆ'** (ಪುಟ ೧೯೭) ಸಂಧಾನಕ್ಕೆ ಹೊರಟ ಶ್ರೀಕೃಷ್ಣನು ಮೊದಲೇ ಕೌರವರ ಮನೆಗೆ ಹೋಗುತ್ತಿದ್ದರೆ ಶಿಷ್ಟಾಯಿಯ ಗೌರವಕ್ಕೆ ಸುಯೋಧನನು ಕೃಷ್ಣನ ಮಾತಿಗೆ ಒಪ್ಪಬಹುದಾಗಿತ್ತು. ಕೃಷ್ಣನಿಗೆ ಭೂಭಾರವನ್ನಿಳುಹುವದೇ ಗುರಿಯಿದ್ದುದರಿಂದ ಮೊದಲು ವಿದುರನ ಮನೆಯನ್ನು ಹೊಕ್ಕನು. ಇದರಿಂದ ಕೌರವನು ಸಂತಪ್ತನಾಗಿ ಕೃಷ್ಣನ ಅಪಮಾನಮಾಡಲೆತ್ನಿಸಿದನು. ವಿದುರನನ್ನು ನಿಂದಿಸಿದನು. ಸುಯೋಧನನ ರಕ್ಷಣೆಗೆಂದು ವಿದುರನು ಕಾದಿಟ್ಟ ಬಿಲ್ಲನ್ನು ಸಿಟ್ಟಿಗೆದ್ದು ವಿದುರನೇ ಮುರಿದುಬಿಸುಟನು. ಸಂಧಾನವು ನಿರರ್ಥಕವಾಯಿತು. ಹೀಗೆ "ಕೌರವರ ಮನೆಯನ್ನು ಮುರಿದೆ ನೀನೆ"ಂದು ವ್ಯಂಗವಾಗಿ ಭಗವಂತನನ್ನು ಪುರಂದರದಾಸರು ಸ್ತುತಿಸಿದ್ದಾರೆ.

---

# ಪರಿಶಿಷ್ಟ ೩



## ದಾಸರ ಸುಭಾಷಿತಗಳು

### ಅ

೧. ಅಟ್ಟವಮೇಲೆ ಒಲೆ ಉರಿವಂತೆ
೨. ಅಂತಸ್ಥವಿಲ್ಲದಪ್ರಧಾನಿ ಮದ್ಯಪಾನಿ
೩. ಅರವಿಂದ ಇಲ್ಲದಿಹಕೊಳ-ತಾ ಕಂಗೊಳವು
೪. ಅಳಿವುದು ಕಾಯ ಉಳಿವುದೊಂದೇ ಕೀರ್ತಿ
೫. ಅಕ್ಷಯಪಾತ್ರೆ ಇರಲು ಹಸಿದು ಇರಲ್ಯಾಕೆ
೬. ಆಕಳು ಡೊಂಕು ಆದರೆ ಹಾಲು ಡೊಂಕೆ

### ಉ

೭. ಉರಗನ ಉಪವಾಸದಂತೆ ಕಾಣಿರೋ

### ಕ

೮. ಕತ್ತೆ ಬಲ್ಲುದೆ ಹೊತ್ತ ಕತ್ತುರಿಯ ಪರಿಮಳವ
೯. ಕಬ್ಬು ಡೊಂಕು ಆದರೆ ಸಿಹಿ ಡೊಂಕೆ
೧೦. ಕಾಣೋ ಕೊನೆಗೆ ನಿನ್ನೊಳಗೆ ನೀ ಜಾಣೋ ಮುಕ್ತಿ
೧೧. ಕಿಚ್ಚಿಗೆ ಇರುವೆ ಮುತ್ತುವದೆ
೧೨. ಕೈವಿಾರಿ ಹೊದದ್ದೆ ಕೃಷ್ಣಾರ್ಪಣ
೧೩. ಕೊಟ್ಟ ದೇವರು ಕೊಂಡುಹೋದರೆ ಕುಟ್ಟಿಕೊಂಡು ಅಳುವದೇತಕೆ
೧೪. ಕೋಳಿ ತನ್ನ ಮರಿಗೆ ಮೊಲೆಹಾಲು ಕೊಟ್ಟು ಸಲಹಿತೆ
೧೫. ಕೊಂಕಣೀರೆಮ್ಮೆಗೆ ಕೊರಡೇಮದ್ದು





## ಗ

೧೬. ಗರುಡಮಂತ್ರವ ಜಪಿಸೆ ಗರಳ ಭಯವ್ಯಾಕೆ

೧೭. ಗಾಳಿಗೆ ಗಿರಿ ನಡುಗುವದೆ

೧೮. ಗೂಗೆ ಬಲ್ಲುದೆ ಹಗಲ ಹರಿದಾಟವ

## ಜ

೧೯. ಜೋಕೆ ತಪ್ಪಿದ ಬಳಿಕ ಅರ್ಥವ್ಯರ್ಥ

೨೦. ಜೋಗಿ ಬಲ್ಲನೆ ಮನೆಯೊಳಿಲ್ಲ ಉಂಟೆಂಬುದನು

## ತ

೨೧. ತನ್ನೊಳು ತಾನೆ ತಿಳಿದರೆ ಸ್ನಾನ

೨೨. ತಾಳಿದವರಿಗೆ ವಿರುದ್ಧ ಲೋಕದೊಳಗುಂಟೇ

## ಧ

೨೩. ಧೂಳು ರವಿಯ ಮೇಲೆ ಮುಸುಕುವದೇ

## ನ

೨೪. ನದಿಯು ಡೊಂಕು ಆದರೆ ಉದಕ ಡೊಂಕೆ

೨೫. ನಿನ್ನ ನಂಬಲು ಚಿನ್ನಕ್ಕೆ ಪುಟವಿಟ್ಟಂತೆ

## ಪ

೨೬. ಪುಷ್ಪಡೊಂಕು ಆದರೇನು ಪರಿಮಳಡೊಂಕೆ

## ಬ

೨೭. ಬಿಲ್ಲು ಡೊಂಕು ಆದರೇನು ಬಾಣ ಡೊಂಕೆ

೨೮. ಬಿಲ್ಲಾಗಿರಲು ಬೇಕು ಬಲ್ಲವರೊಳು

೨೯. ಬೂದಿ ಮುಚ್ಚಿದ ಕೆಂಡದಂತಿಪ್ಪರು ಈ ಧರೆಯಮೇಲೆ ಶ್ರೀಹರಿಭಕ್ತಜನರು

೩೦. ಬೆಲ್ಲವು ಕರದೊಳಗಿರುತಿರೆ ಕಾಡಕಲ್ಲನು ಕಡಿಯಲಿನ್ನೇಕಯ್ಯ

೩೧. ಬೆಲ್ಲವಾಗಲು ಬೇಕು ಬಂಧು ಜನರೊಳಗೆ

೩೨. ಭೃತ್ಯ ಬಲ್ಲನೆ ಒಡೆಯನಿಗಿರುವ ಕಷ್ಟಗಳ

## ಮ

೩೩. ಮಿಂದು ನಿಂದಾನೆ ಹುಡಿಯ ಹೊಯ್ದುಕೊಂಬುವಂತೆ

ರ

೩೪. ರೋಗಿ ಬಲ್ಲನೆ ಮಿಷ್ಟಾನ್ನದ ರುಚಿಯನು

ವ

೩೫. ವಿಷವನುಣಿಸಿದವಗೆ ಷಡ್ರಸವನುಣಿಸಬೇಕು
೩೬. ವೆಚ್ಚಕಿಲ್ಲದ ಹಣ ವ್ಯರ್ಥವಾದರೇನು ?

ಶ

೩೭. ಶ್ವಾನ ಬಲ್ಲುದೆ ರಾಗ ಭೇದಂಗಳ
೩೮. ಶುನಕನ ಓದುಗಳಂತೆ ಎನ್ನ ಓದುಗಳಯ್ಯ

ಸ

೩೯. ಸರಸವಿಲ್ಲದ ಸತಿಯುಭೋಗ ತನುರೋಗ
೪೦. ಸಿಂಗನ ಹೆಗಲೇರಿ ಸಾರಿ ಕರಿಭಂಗವ್ಯಾಕೆ ಮತ್ತವಗೆ
೪೧. ಸೂಳೆ ಬಲ್ಲಳೆ ಗೆಳೆಯಗಿಹ ಬಡತನ
೪೨. ಸ್ವರಭೇದವಿಲ್ಲದಿಹ ಗೀತ ಸಂಗೀತ ವಿರಗೀತ

ಹ

೪೩. ಹಲ್ಲಿಯನು ತಿಂದ ಇಲಿಯಂತೆ ಕೊರಗುವದು
೪೪. ಹೇಡಿಬಲ್ಲನೆ ರಣದ ಸಾಹಸ ಶೌರ್ಯವನು
೪೫. ಹೇರನೊಪ್ಪಿಸಿದ ಮೇಲೆ ಸುಂಕವೇ ಪರಮಾತ್ಮ
೪೬. ಹೇಳಬಲ್ಲನೆ ಮೂಕ ಕನಸ ಕಂಡುದನು

---

# ಪರಿಶಿಷ್ಟ ೪



# ಪದ್ಯಗಳ ಅಕ್ಷರಾನುಕ್ರಮ

## ಉ—ಊ



## ಎ—ಏ

## ಹರಿಭಕ್ತಿ ಸುಧೆ

ಗ



ತ



ದ

## ಧ



## ನ

ಚ



ಜ



ಪ

---

# ಪರಿಶಿಷ್ಟ ೫

## ಶಬ್ದಾರ್ಥ

### ಅ

ಅಂಡ=ಬ್ರಹ್ಮಾಂಡ
ಅಂದುಗೆ=ಕಾಲಗೆಜ್ಜೆ
ಅಂದಣ=ಪಲ್ಲಕ್ಕಿ, ರಥ, ತೇರು
ಅಕುತೋಭಯ=ನಿರ್ಭಯ
ಅಕ್ಕರ=ಪ್ರೇಮ
ಅಕ್ಕಸ=ಸಿಟ್ಟು
ಅಕ್ರೂರ=ಶ್ರೀಕೃಷ್ಣಭಕ್ತನಾದ ಯಾದವೋತ್ತಮನು
ಅಗಜಾವಲ್ಲಭ=ಪಾರ್ವತಿಯ ಗಂಡ.
ಅಜ=ಬ್ರಹ್ಮ, ಆಡು
ಅಟ್ಟಮೇಲೆ=ಅಡಿಗೆಯಾದಬಳಿಕ
ಅಟ್ಟೂಳಿಗದವ=ದಾಸಾನುದಾಸ
ಅಡುವ=ಅಡಿಗೆಮಾಡುವ
ಅಡಿದಾಸ=ಚರಣಸೇವಕ
ಅಣಿಮಾಡು=ಸಿದ್ಧಗೊಳಿಸು
ಅನಂಗ=ಮನ್ಮಥ
ಅನಿಮಿತ್ತ=ಫಲಾಪೇಕ್ಷೆಯಿಲ್ಲದೆ
ಅನುಭಾವ=ಆತ್ಮಾನುಭೂತಿ, ಸ್ವಸ್ವರೂಪದರ್ಶನ
ಅನುಗ್ರಹ=ಪೂರ್ಣಕೃಪೆ
ಅಪರೋಕ್ಷ=ಪ್ರತ್ಯಕ್ಷ
ಅಪಸ್ಮಾರ=ಕಠಿಣವಾದ ಮೂರ್ಛಾರೋಗ
ಅಪವರ್ಗ=ಮುಕ್ತಿ
ಅಬುಜಸಂಭವ=ಅಬುಜ+ಸಂಭವ, ತಾವರೆಯಲ್ಲಿ ಹುಟ್ಟಿದವ, ಬ್ರಹ್ಮ
ಅಬ್ದ=ವರ್ಷ
ಅರಿಷಡ್ವರ್ಗಗಳು=ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಮುಂತಾದವುಗಳು.
ಅಲಸದೆ=ಬೇಸರಪಡದೆ
ಅಲತಿಗ=ಕೆಂಬಣ್ಣದ ಅರಗು (ಸುಂದರಿಯರು ಕಾಲಿಗೆ ಹಚ್ಚಿಕೊಳ್ಳುವ ಕೆಂಪು ಬಣ್ಣ)
ಅವಘಡ=ಅಪಾಯ
ಅವಧೂತ=ಒಂದು ಬಗೆಯ ಸನ್ಯಾಸಿ
ಅಸಿ=ಖಡ್ಗ
ಅಳವಡು=ದೊರಕು, ಪ್ರಾಪ್ತವಾಗು
ಅಳವಲ್ಲ=ಸಾಧ್ಯವಲ್ಲ
ಅಳುಪು=ದ್ರೋಹಬಗೆ, ಎರಡೆಣಿಸು
ಅಕ್ಷಿದೋಷ=ದೃಷ್ಟಿದೋಷ

## ಆ

ಆಗಮು=ಶಾಸ್ತ್ರ
ಆಯುತವಾದ=ಸಜ್ಜಾದ
ಆಯುಸ್ಥಗತವಾದ=ಪೂರ್ವಸಂಚಿತ, ಬೆನ್ನು ಹಿಡಿದು ಕೊಂಡು ಬಂದ

## ಇ

ಇಕ್ಕೆಯಲಿ=ಆಶ್ರಯದಲ್ಲಿ
ಇನಜ=ಸೂರ್ಯನ ಮಗ, ಯಮ
ಇಂಬಿಡು (ಇಂಬು+ಇಡು)=ಆಶ್ರಯ ಕೊಡು, ಸ್ಥಳಕೊಡು

## ಈ

ಈಶಿತವ್ಯರು=ಪೂಜ್ಯಾರ್ಹರು, ಪರಮಾತ್ಮನಿಗೆ ಅಧೀನರಾದವರು
ಈಷಣತ್ರಯ=ವಿತ್ತೇಷಣ, ಪುತ್ರೇಷಣ, ಲೋಕೇಷಣ

## ಉ

ಉಚ್ಚಾಟನ=ಹೊರಗಟ್ಟುವಿಕೆ
ಉಗಾಭೋಗ=ಬೇಕಾದ ತಾಳ ಹಾಗು ರಾಗದಲ್ಲಿ ಹಾಡಬರುವ ಪದ್ಯಗಳು
ಉತ್ತರಮತ=ವಿರುದ್ಧ ಮತ
ಉತ್ತರಿಸು=ದಾಟು, ಪಾರಾಗು
ಉಪಬರ್ಹಣ=ದಿಂಬುಗಳು
ಉಪೇಕ್ಷೆ=ಅಡ್ಡಿ
ಉಬ್ಬಲ=ದುಃಖ

## ಋ

ಋಜುಗಣ=ಬ್ರಹ್ಮಪದಕ್ಕೆ ಯೋಗ್ಯವಾದ ದೇವಗಣ

## ಎ

ಎಣೆಯಾಗು=ಪಡಿಗಟ್ಟು
ಎರವಿಸ=ಪರಸ್ಪರ ಸಂಬಂಧವಿಲ್ಲದ
ಎಲರುಣಿ=ಗಾಳಿಯನ್ನು ಆಹಾರವಾಗಿ ಸೇವಿಸುವ-ಹಾವು

## ಏ

ಏಣಾಂಕ=(ಏಣ+ಅಂಕ) ಚಂದ್ರ
ಏಸು=ಎಷ್ಟು

## ಐ

ಐದು=ಸೇರು

## ಒ–ಓ

ಒಗೆತನ=ಜೊತೆಗಾರಿಕೆ
ಒಡ=ಒಟ್ಟು
ಒಡಲು=ದೇಹ
ಒಡ್ಯಾಣ=ತೋಳಬಳೆ
ಒಳ್ಳುಹು=ಅಂತರಂಗ
ಓತಪ್ರೋತ=ತನ್ಮಯ
ಓಲೈಸು=ಸೇವಿಸು
ಓವ=(ಓಪ) ಏಕಾಕಿಯಾದ ಪರಮಾತ್ಮ

## ಕ

ಕಂಶುಕ=ಲಂಗೋಟಿ
ಕಂಗೊಳ=ಚಂದವಿಲ್ಲದ ಕೊಳ
ಕಂತೆ=ಕಟ್ಟು ಕತೆ, ಅಜ್ಜಿ ಕಥೆ
ಕಂಗೆಡಿಸು=ಬಳಲಿಸು
ಕಡೆಹೊಲ್ಲು=ಕೊನೆಮುಟ್ಟು
ಕಕ್ಕುಲಿತೆ=ಪ್ರೇಮ

ಕಟ್ಬಾಳು=ಶೂರ
ಕತಬಿ=ಬರದುಕೊಟ್ಟ ಪತ್ರ
ಕತ್ತು=ಕುತ್ತಿಗೆ
ಕದನ್ನ=ಕೆಟ್ಟಅನ್ನ
ಕಪಿಲವರ್ಣ=ಗೋದಿಯಬಣ್ಣ,
ಕಪ್ಪ=ಪೊಗದಿ, ಕಾಣಿಕೆ
ಕರಕರೆಯ=ಪಾಪದಾಯಕವಾದ
ಕರಣತ್ರಯ=ದೇಹ, ವಾಣಿ, ಮನ
ಕಲಮದಾನಿ=ದೌತಿ
ಕಲುಷ=ದೋಷ
ಕಶಿಪು=ಅನ್ನವಸ್ತ್ರ
ಕವಾಟ=ಭದ್ರವಾದ ಬಾಗಿಲ
ಕಳತ್ರ=ಹೆಂಡತಿ
ಕಾಕು=ಹೀನವಾದ, ನೀಚವಾದ
ಕಾರಣಾರ್ಥ=ಪೂರ್ವಪುಣ್ಯದಿಂದ ಸಂಚಿತವಾದ ದ್ರವ್ಯ; ಕಾರ್ಯಗಳು
ಕುಡಿತೆ=ಒಂದುಹಿಡಿ
ಕುಡಿನೀರು=ಒಂದುಹಿಡಿ ನೀರು
ಕುರುಜು=ಬುರುಜು, ತೇರಿನತುದಿ
ಕುಲಿಶಧರಾಮಯಪೊಳಲು=ಅಮರಾವತಿಗೆ ಸದೃಶವಾದ ನಗರ
ಕುಹಕ=ನೀಚ
ಕುಕ್ಷಿ=ಹೊಟ್ಟೆ
ಕುಂಡಲಿ=ಮೂಲಾಧಾರಚಕ್ರ
ಕುಂಡಗೋಲ=ವ್ಯಭಿಚಾರದಿಂಡ ಹುಟ್ಟಿದವ
ಕೂಸ=ಗುರುತು

ಕೆಂದಟ=ಕೆಂಪಾದ ಆಕಾಶ
ಕೈಜಿತ=ಕೈತಪ್ಪಿದ, ಮುಟ್ಟಲಾಗದ
ಕೋಡುಗಲ್ಲು=ಎತ್ತರವಾದ ಬಂಡೆಗಲ್ಲು
ಕೊಂಡೆ=ಚಾಡಿ
ಕೊಂಡ=ವೀರಭದ್ರನ ಭಕ್ತ
ಕೌಪೀನ=ಲಂಗೋಟಿ

## ಖ

ಖುಲ್ಲರು=ನೀಚರು
ಖೂಳ=ನೀಚ
ಖೇಚರ=ಆಕಾಶದಲ್ಲಿ ಸಂಚರಿಸುವಂತಾದ್ದು ಪಕ್ಷಿ

## ಗ

ಗರುವಿಕೆ=ಗರ್ವ
ಗರಳ=ವಿಷ
ಗಳಶುದ್ಧಿ=ಶುದ್ಧವಾದ ಕಂಠ
ಗಂಡೂಷಣೋದಕ=ಬಾಯಿಮುಕ್ಕಳಿಸುವ ನೀರು
ಗುಡಿಗಾರ=ಸೂತ್ರಧಾರಿ
ಗಾಸಿಯಿಂದ=ಸಂಕಟದಿಂದ
ಗ್ರಾಸ=ತುತ್ತುಅನ್ನ
ಗುಣಿಸು=ಲೆಕ್ಕಹಾಕು
ಗುರುಗುರಿಸು=ಬಡಬಡಿಸು
ಗೂಢವಾದ=ಗಹನವಾದ
ಗೇಯ=ಹಾಡಲುಬರುವ
ಗೇಹ=ಮನೆ
ಗೊಡವೆ=ಸಂಬಂಧ
ಗೊರಸು=ಖುರ
ಗೋಖುರ=ಮುಳ್ಳುಗಿಡ

**ಘ**

ಘೋಷ=ಬುರುಕೆ, ಶಬ್ದ

**ಚ**

ಚರುವು=ನೈವೇದ್ಯ
ಚರಿಯ=ಚರಿತ್ರೆ
ಚಂಡಿ=ಜಗಳಗಂಟಿ
ಚಂಡ್ಯಮನೋರು=ಪ್ರಚಂಡ ಯಮದೂತರು
ಚಾಲುವರಿ=ಸೇಗೊಡ್ಡಿ ಬೇಡು, ಹೇಳಿಕೊಳ್ಳು
ಚಿಣ್ಣ=ಮುದ್ದುಕೂಸು

**ಜ**

ಜರಿಗಲ್ಲು=ಬಂಗಾರಸಿಗುವ ಕಲ್ಲು ಮಣ್ಣು
ಜ್ಯಾಮುಡಿ=ಪರಿಮಳವನ್ನು ಬೀರುವ ಮುಡಿಪಳ ಬೇರಿನ ಚಾಮರ

**ಝ**

ಝುಂಗಿಪ=ತುಂಬಿಯಂತೆ ಸ್ವರ ಕೊಡುವ

**ಠ**

ಠೀವಿ=ವೈಭವ
ಠೌಳಿ=ಮೋಸ

**ಡ**

ಡಿಂಗರಿಗ=ಸೇವಕ, ಭಕುತ

**ತ**

ತಕ್ಕೈಸು=ಸಮಾಧಾನಪಡಿಸು,
ತರಹರಿಸು=ತಡಮಾಡು
ತರುಬು=ತುಡುಕು, ತಡೆ
ತಳಿಗೆ=ಥಾಲಿ, ತಾಟು
ತಾಟಂಕ=ತಾಟಕಾಸುರ, ಓಲೆ
ತಿವಿಗಳ=ತಿವಿಗೋಲು
ತ್ರಿಪದಾಹ್ವ=ಮೂರುಪಾದದಷ್ಟು
ತಿರಪೆ=ಭಿಕ್ಷೆ
ತುಂಟತುರಗಿಯಾನೆ=ಬಿರಿಸುಮಣ್ಣ ರಾಶಿಯನ್ನು
ತುರಗ=ಕುದುರೆ
ತುರಗಬಂಡಿಯಬೋವ=ರಥದ ಸಾರಥಿ
ತೂಟಕ=ಮೋಸ, ಬಯಲ ಪ್ರದರ್ಶನ
ತೆರವು=ಹಣ
ತೊಂಡರು=ಪರಿವಾರದವರು
ತುಡುಕು=ಕೈಮಾಡು

**ದ**

ದಾನವದಲ್ಲಣ=ರಕ್ಕಸರ ಸೊಕ್ಕನ್ನಡಗಿಸಿದವ, ವಿಷ್ಣು
ದಾಯ=ಉಪಾಯ
ದಾರು=ಯಾರು
ದಾಸಕೂಟ=ಹರಿಭಕ್ತರ ಗುಂಪು ಅಥವಾ ಸಮೂಹ
ದೀಕ್ಷೆ=ಗುರೂಪದೇಶ
ದೂರಕನ ಮಾಡು=ದೂರವಿರಿಸು
ದೊರೆತನ=ಒಡೆತನ

**ಧ**

ಧರ್ಮಮಂದಿರ=ಧರ್ಮಶಾಲೆ
ಧಾತ್ರಿ=ಪೃಥಿವಿ (ಧರಿತ್ರೀ)

ಧಾಳಿ=ಮುತ್ತಿಗೆ
ಧೀಮ=ಶ್ರೇಷ್ಠನಾದವ

### ನ

ನಡುವಾಗು=ಮಧ್ಯೆಬರು
ನರಬೀಗು=ನರಗಳ ಬಿಗುಹು
ನವದ್ವಾರಗಳು=ದೇಹದ ಒಂಭತ್ತು ಬಾಗಿಲುಗಳು
ನಾಗವಲ್ಲಿ=ವೀಳ್ಯದೆಲೆ
ನ್ಯಾಜ (ನೇಜ)=ಬರ್ಚಿ, ಭಲ್ಲೆ
ನ್ಯಾಯ=ಧರ್ಮಸಮ್ಮತವಾದ್ದು
ನಿಗಮ=ವೇದ
ನಿಚ್ಚ=ನಿತ್ಯ
ನಿತಂಬ=ತಿಗದ ಮಾಂಸಲ ಭಾಗ
ನಿಧಾನಿಸು=ವಿಚಾರಿಸು
ನಿರ್ಭೀತಿಲಿ=ಭಯವಿಲ್ಲದೆ
ನಿರಪೇಯನಾದ=ಸರ್ವಾರ್ಪಣೆ ಮಾಡಿದ
ನಿಶಿ=ರಾತ್ರಿ
ನಿರ್ಹೇತುಕ=ನಿಷ್ಕಾಮ
ನುಡಿಸು ಮಾತು=ಇನಿದಾದ ಮಾತು
ನೆಚ್ಚು=ಮೆಚ್ಚು, ಅನುಗ್ರಹಿಸು
ನೆರವು=ಸಹಾಯ
ನೇವಾಳ=ಉಡುದಾರ
ನೊಸಲು=ಹಣೆ

### ಪ

ಪಗೆ=ಶತ್ರು
ಪರವರು=ಅನ್ಯರು
ಪರಾಕು=ಸ್ವಾಮಿಯೇ ! ಜೀಯಾ !!
ಪರ್ಯಂಕ=ಮಂಚ
ಪರಿಕರ=ಸಾಧನ
ಪರಿಯೋಚಿಸು= ಆಲೋಚನೆಮಾಡು
ಪಳಿ=ನಿಂದೆ
ಪಶ್ಚಿಮ=ವರುಣದಿಕ್ಕು
ಪ್ರಣತಾರ್ತಿಹರ=ಶರಣಾಗತನ ದುಃಖವನ್ನು ನೀಗಿಸುವವ
ಪ್ರವರ=ಶ್ರೇಷ್ಠ
ಪಾತ್ರದವರು=ಬಂಗಾರದವರು, ವೇಶ್ಯೆಯರು
ಪಾಥೇಯ=ದಾರಿಖರ್ಚಿಗೆ ಬೇಕಾದ್ದು, ಬುತ್ತಿ
ಪಾಟುಪಡು=ದುಃಖಪಡು
ಪಾಪಾಸು=ಕೆರ, ಪಾದರಕ್ಷೆ
ಪಾಯವಟ್ಟಿ=ಕಾಲಗೆಜ್ಜೆ
ಪಾಲೋಗರ=ಹಾಲನ್ನ
ಪ್ರತತಿ=ಸಮೂಹ
ಪ್ರಾಯೋಪವೇಶ=ಪ್ರಾಯೋಪಕರ್ಮ (ವಯಸ್ಸಾದವರು ವಿಧಿ-ಪೂರ್ವಕವಾಗಿ ಉಪವಾಸಮಾಡಿ ಪ್ರಾಣಬಿಡುವಿಕೆ)
ಪಾಳೆ=ಹಾಳೆ
ಪ್ರಾಕೃತ=ಸಂಸ್ಕೃತವಲ್ಲದ್ದು, ಕನ್ನಡ
ಪ್ರಾಸ=ಸಮಸ್ವರಗಳ ಯೋಜನೆ
ಪುರುಹೂತ=ದೇವೇಂದ್ರ
ಪೂಸು=ಹಚ್ಚು
ಪೆರ್ಮೆ=ಹೆಚ್ಚಳ
ಪೊಳಲು=ಪಟ್ಟಣ

ಪೋತರಾಜ=ದೊಡ್ಡ ಟಗರು
ಪ್ರೋಚ್ಚ=ಶ್ರೇಷ್ಠವಾದ
ಪಂಚಭೂತಗಳು=ಆಕಾಶ, ವಾಯು, ನೆಲ, ಜಲ, ಬೆಳಕು
ಪಂಚೇಂದ್ರಿಯಗಳು=ಕಣ್ಣು, ಕಿವಿ, ಮೂಗು, ಬಾಯಿ, ಸ್ಪರ್ಶೇಂದ್ರಿಯ

ಫ

ಫಲಶ್ರುತಿ=ಲಾಭವನ್ನು ಹೇಳುವಿಕೆ
ಫಾಲಾಕ್ಷಸಖ=ಫಾಲ+ಅಕ್ಷ+ಸಖ ಹಣೆಕಣ್ಣುಳ್ಳವನು ಶಿವ; ಅವನ ಮಿತ್ರ ವಿಷ್ಣು

ಬ

ಬರ್ಹ್ಮ=ಬ್ರಹ್ಮ
ಬಟ್ಟೆ=ದಾರಿ
ಬಡವು=ಕೃಶವಾಗಿರುವಿಕೆ
ಬದಿಗ=ಸಂಗಡಿಗ
ಬನ್ನ=ಕಷ್ಟ
ಬನ್ನಣೆಗಾರ=ರಸಿಕ
ಬಳಸು=ಸುತ್ತಾಡು
ಬಂಡುಣಿ=ತುಂಬಿ
ಬಂಡು=ನೀಚ, ಮಕರಂದ
ಬಂಡುಮಾಡಿ=ಅಪಮಾನಮಾಡಿ
ಬ್ಯಾಸರ=ಅಸಮಾಧಾನ
ಬಿಕನಾಸಿ=ನಿರ್ಗತಿಕ
ಬಿಸಗು=ನೀಚ, ಬಣಗು
ಬಿರಿದು=ಬಿರುದು
ಬಿನ್ನಣದ=ಕೌಶಲ್ಯದಿಂದ ಕಟ್ಟಿದ
ಬಿಸಜ=ತಾವರೆ, ಕಮಲ
ಬಿಂಕ=ಗರ್ವ
ಬಿಂಬ=ಮೂಲಸ್ವರೂಪ
ಬೂಟಕತನ=ಠಕ್ಕುತನ
ಬೈಗು=ಸಂಜೆ
ಬೋವ=ಸಾರಥಿ

ಭ

ಭಳಿರೆ=ಭಲೆ, ಶಾಬಾಸು, ಭಾಪು
ಭಲ್ಲೂಕ=ಕರಡಿ
ಭವಿ=ವೀರಶೈವರಲ್ಲದವರು
ಭವಣೆ=ಸಂಕಟ
ಭಂಡ=ಜಗಳಗಂಟ
ಭೂಮಿಸುರ=ಭೂಸುರ, ಭೂಲೋಕದ ದೇವತೆ, ಬ್ರಾಹ್ಮಣ
ಭೂರಿತತ್ವ=ಮಹತ್ತಾದ ತತ್ವ

ಮ

ಮಕರಾಂಕ=ಮೀನಕೇತನ, ಮನ್ಮಥ
ಮಗುಳೆ=ಪುನಃ, ತಿರುಗಿ
ಮಚ್ಚರಿಸು=ಅಸೂಯೆಮಾಡು, ಹೊಟ್ಟೆಕಿಚ್ಚುಪಡು
ಮದ್ದು=ವಿಷ
ಮನ್ಯು=ಕಡುಕೋಪ, ಮೇರೆಮೀರಿದ ಸಿಟ್ಟು
ಮರಂದ=ಮಕರಂದ
ಮಸೆದು=ಪ್ರತಿಭಟಿಸಿ, ಜಗಳಮಾಡಿ
ಮಹೌಜಸದ=ಮಹತ್ತಾದ ಆತ್ಮಶಕ್ತಿಯುಳ್ಳ
ಮಂಟೆ=ಸ್ಮಶಾನ, ಮಸಣ
ಮಂಡೆ=ತಲೆ
ಮಂದಿ=ಇತರರು, ಪರರು, ಎರಡನೆಯವರು

ಮಾಗಾಯಿ=ಬಂಗಾರದಸರದಲ್ಲಿರುವ ಚಿನ್ನದ ಮಾವಿನಕಾಯಿ
ಮಾಣ್ಗೊ=ನಿಲ್ಲಿಸು
ಮಾನ್ನವರ=ಮನುಷ್ಯರನ್ನು
ಮಾರ=ಮನ್ಮಥ
ಮಾರಮಣ=ಮಾ+ರಮಣ, ಲಕ್ಷ್ಮೀ ವಲ್ಲಭ, ವಿಷ್ಣು
ಮಾರಿ=ದುಷ್ಟದೇವತೆ
ಮುಕ್ಕರಿಸು=ಮುಗ್ಗರಿಸು, ಬೀಳು
ಮುನಿ=ಮುನಿಯು, ಸಿಟ್ಟಾಗು,
ಮುಲ್ಲಶಾಸ್ತ್ರ=ಖೋರಾನ, ಮುಸಲ್ಮಾನರ ಧರ್ಮಗ್ರಂಥ
ಮುಂಜೆರಗು=ಮುಂದಿನ ಸೆರಗು
ಮುಂಡಮೋಚು=ವಿಧವೆಯಾಗು, ಸರ್ವಸ್ವವನ್ನು ಕಳೆದುಕೊಳ್ಳು
ಮೆರೆಸು=ಪ್ರಕಟಿಸು
ಮೊಲ್ಲೆಮಲ್ಲಿಗೆ=ದುಂಡುಮಲ್ಲಿಗೆ, ಚಂಡುಮಲ್ಲಿಗೆ

**ಯ**

ಯತಿ=ವಿರಾಮ (ಛಂದಸ್ಸಿನಲ್ಲಿ) ಸನ್ಯಾಸಿ
ಯಾವ=ಜಾವ
ಯಾಯಿವಾರ=ಭಿಕ್ಷೆ

**ರ**

ರಸಕಸಿ=ಕಕ್ಕುಲಿತೆ
ರೌರವ=ನರಕಗಳಲ್ಲಿ ಕಠಿಣವಾದದ್ದು
ರುವ್ವಿ=ಕಾಸು

**ಲ**

ಲೋಷ್ಟ=ಮಣ್ಣಿನ ಹೆಂಟೆ

**ವ**

ವ್ಯತ್ಯಾಸ=ಅಂತರ, ಭೇದ
ವ್ಯಯ=ವೆಚ್ಚ
ವೃಂತಾಕ=ನಿಷಿದ್ಧ ಪದಾರ್ಥಗಳು
ವಾಗತ್ಯ=ಕಟ್ಟಳೆಗೆ ವಿರುದ್ಧವಾದ
ವಾರಣವಂತ=ಬಲಶಾಲಿ
ವಾರಿಧಿ=ವಾರಿ+ಧಿ, ನೀರಿನಿಂದ ತುಂಬಿದ ಸಮುದ್ರ
ವಾರ್ಧಿಕ್ಯ=ಮುಪ್ಪು
ವಾಲಗ=ನೌಕರಿ
ವಿರಜಾನದಿ=ವೈಕುಂಠ ಮಾರ್ಗದಲ್ಲಿರುವ ನದಿ
ವಿರಿಗೀತ=ವಿರಸವಾದ ಗೀತ
ವೀಸ=ಸ್ವಲ್ಪ
ವೆಗ್ಗಳ=ಹೆಚ್ಚು
ವೈಡಾಳ=ಆಭರಣ
ವೈದರ್ಭೆ=ವಿದರ್ಭ ದೇಶದ ರಾಜನ ಮಗಳು ರುಕ್ಮಿಣಿ
ವೈಯಾಳಿಲಿ=ವಿಜೃಂಭಣೆಯಿಂದ

**ಶ**

ಶೆಣಸು=ಸೆಣಸು, ಮೇಲಾಡು
ಶಾಲ್ಯೋದನ=ಸಣ್ಣಕ್ಕಿಯ ಅನ್ನ
ಶುಂಠ=ನೀಚ
ಶ್ರೋತ್ರೀಯ=ವೇದಜ್ಞ, ಬ್ರಾಹ್ಮಣ

**ಸ**

ಸನಕ=ಬ್ರಹ್ಮಮಾನಸಪುತ್ರರಲ್ಲೊಬ್ಬ
ಸಡಗರದ=ಬೆಡಗಿನ
ಸಲ್ಲತೆ=ಚೆಲುವಿನ ಬಳ್ಳಿ

ಸರ್ವಜ್ಞರಾಯ=ಸರ್ವ+ಜ್ಞ+ರಾಯ
ಎಲ್ಲವನ್ನು ಬಲ್ಲ ಗುರುಮಧ್ವರಾಯ
ಸ್ವವ=ಆಸ್ತಿಯನ್ನು
ಸ್ವಗತಭೇದ=ಸ್ವಂತದಲ್ಲಿ ಭೇದ
ಸಂದ=ತೀರಿಹೋದ, ಕೊಟ್ಟು ಮುಗಿಸಿದ,
ಸಂದಾಯಮಾಡು=ಋಣಪರಿಹಾರ ಮಾಡು
ಸಾಧಕ=ಆತ್ಮೋನ್ನತಿಗಾಗಿ ಪ್ರಯತ್ನಿಸುವವ
ಸಾಧನ=ಆತ್ಮೋನ್ನತಿಯ ಪ್ರಯತ್ನ
ಸಾಮಾತೆ=ಒಬ್ಬಳೇ ಆದ ತಾಯಿ
ಸಾಯುಜ್ಯ=ಶ್ರೇಷ್ಠತಮ ಮುಕ್ತಿ
ಸಾಂಕೇತ=ರಹಸ್ಯ
ಸಾಂದ್ರವಾದ=ದಟ್ಟವಾದ,ಘನವಾದ
ಸಿತಿ=ಅಂಧಕಾರ
ಸಿಡಿ=ಗಾಳ
ಸುಧೆ=ಅಮೃತ
ಸುಮ್ಮಾನದಲಿ=ಸಂತೋಷದಿಂದ
ಸುಳಾದಿ=ಪ್ರೇರಣೆಯಿಂದ ಬರೆದಪದ್ಯ
ಸುರಾಪಗ=ದೇವಗಂಗೆ ( ದೇವನದಿ )
ಸುಂಕ=ಕರ, ಜಕಾತಿ
ಸೂತ=ಸಾರಥಿ, ಜೀವ
ಸೂರೆಗೊಳ್ಳು=ಕೈವಶಮಾಡಿಕೊಳ್ಳು
ಸೂಸು=ಹೊರಹೊಮ್ಮು, ಚಿಮ್ಮು
ಸೆರಗೊಡ್ಡಿ=ಅತಿದೈನ್ಯದಿಂದ
ಸೊಡರು=ದೀಪ
ಸೊಲ್ಲು=ಮಾತು
ಸೌವರಣ=ಬಂಗಾರದ ಆಭರಣ

## ಹ

ಹಗೇಣ=ಕ್ಷುಲ್ಲಕ, ಡೌಲು
ಹಟ್ಟಿ=ಕೊಟ್ಟಿಗೆ
ಹತಗೆಡಿಸು=ನಾಶಮಾಡು
ಹತ್ತಿಲೆ=ಸ್ವಂತವಾಗಿ
ಹಮ್ಮು=ಗರ್ವ
ಹರಣ=ಪ್ರಾಣ
ಹಲಧರ=ನೇಗಿಲನ್ನು ಆಯುಧಮಾಡಿ ಕೊಂಡವ, ಬಲರಾಮ
ಹಸುಳೆ=ಕೂಸು, ಮಗು
ಹೀನಾಯಮಾಡು=ತುಚ್ಛೀಕರಿಸು
ಹುಸಿದು=ಸುಳ್ಳುಹೇಳಿ
ಹೆಡತಲೆಮೃತ್ಯು=ಬೆನ್ನುಹತ್ತಿರುವ ಮರಣ,
ಹೆಡ್ಡ=ದಡ್ಡ
ಹೆಡಿಗೆ=ಬುಟ್ಟಿ
ಹೆಂಗೆ=ಹೇಗೆ
ಹೈಮಾಂಡ=ಬ್ರಹ್ಮಾಂಡ
ಹ್ಯಾವ=ಹೇವ, ಅಭಿಮಾನ, ದುರಭಿಮಾನ
ಹೊಟ್ಟೆಗುಡ=ಹೊಟ್ಟೆಹೊರಕೊಳ್ಳುವ
ಹೊತ್ತಾರೆ=ಬೆಳಿಗ್ಗೆ
ಹೊಳೆವು=ಗುಟ್ಟು, ಮುಖ್ಯರಹಸ್ಯ, ಕಾರಣ
ಹೊಂತಕಾರಿ=ತಂತ್ರಧುರೀಣ, ನಿರ್ದಿಷ್ಟಮಾರ್ಗಬಲ್ಲವ
ಹ್ಯೊಮಾಲಿ=ಹಟಮಾರಿ

## ಕ್ಷ

ಕ್ಷಮೆ=ಭೂಮಿ

# ಪರಿಶಿಷ್ಟ ೬

## "ಹರಿಭಕ್ತಿ ಸುಧೆ" ಬರೆಯುವಾಗ

## ಉಪಯೋಗಿಸಿದ ಪುಸ್ತಕಗಳು


೧. ಶ್ರೀ ಕರ್ಣಾಟಕ ಭಕ್ತ ವಿಜಯ (ಭಾಗ ೧) – ಹರಿಕಥಾ ವಿದ್ವಾನ್ ಬೇಲೂರ ಕೇಶವದಾಸ ವಿರಚಿತ

೨. ,, ,, ,, (ಭಾಗ ೨) ,, ,,

೩. ಶ್ರೀ ಕರ್ಣಾಟಕ ಹರಿದಾಸ ಕೀರ್ತನತರಂಗಿಣಿ ಭಾಗ ೧ – ಸಂಬೋಧ ಪ್ರಕಟನಾಲಯ ಬೆಂಗಳೂರು

೪. ,, ,, ಭಾಗ ೨ ,, ,,

೫. ,, ,, ,, ೩ ,, ,,

೬. ,, ,, ,, ೪ ,, ,,

೭. ,, ,, ,, ೫ ,, ,,

೮. ,, ,, ,, ೬ ,, ,,

೯. ,, ,, ,, ೭ ,, ,,

೧೦. ,, ,, ,, ೮ ,, ,,

೧೧. ಜಾಗರೋತ್ಸವದ ಮಾಧ್ವಭಜನಮಂಜರಿ ಶ್ರೀ ಕೌಜಲಗಿ ಬಂಡೆಪ್ಪಕೃತ

೧೨. ,, ,, (ಎರಡನೆ ಆವೃತ್ತಿ) ,, ,,

೧೩. ಪ್ರಸನ್ನವೆಂಕಟದಾಸರ ಭಾಗವತ (ದಶಮಸ್ಕಂಧ ಪೂರ್ವಾರ್ಧ) ಕೌಜಲಗಿ–ಬೆಟಗೇರಿಕೃತ

೧೪. ದಾಸರಪದಗಳು ಉದಯರಾಗವು ಭಾಗ ೧ ಪಾವಂಜೆ ಗುರುರಾವ ಕೃತ

೧೫. ,, ,, ,, ,, ಭಾಗ ೨ ,, ,,

೧೬. ,, ,, ಕನಕದಾಸರ ಕೀರ್ತನೆ ಭಾಗ ೧ ,,

೧೭. ,, ,, ,, ,, ಭಾಗ ೨ ,,

೧೮. ,, ,, ವಿಜಯದಾಸರ ಕೀರ್ತನೆ ಭಾಗ ೧ ,,

೧೯. ,, ,, ,, ,, ಭಾಗ ೨ ,,

೧೮. ದಾಸರ ಪದಗಳು ಗೋಪಾಲದಾಸರ ಕೀರ್ತನೆ ಭಾಗ ೧ ಪಾವಂಜೆ ಕೃತ
೧೯. ,, ,, , ಭಾಗ ೨ ,,
೨೦. ,, ಪುರಂದರ ದಾಸರ ಕೀರ್ತನೆ ಭಾಗ ೧ ,,
೨೧. ,, ,, ,, ,, ೨ ,,
೨೨. ,, ,, ,, ,, ೩ ,,
೨೩. ,, ,, ,, ,, ೪ ,,
೨೪. ,, ಶ್ರೀಪಾದರಾಯರ ಮತ್ತು ವ್ಯಾಸರಾಯರ ಕೀರ್ತನೆ ,,
೨೫. ಕೇಶವದಾಸರ ಕೀರ್ತನೆ — ಬೇಲೂರ ಕೇಶವದಾಸಕೃತ
೨೬. ಪುರಂದರದಾಸರ ನಾಣ್ನುಡಿ — ಬೀಡಿಕೃತ
೨೭. ಹರಿಭಕ್ತಿ ಸಾರ ( ಕನಕದಾಸರು ) ಪಾವಂಜೆ ಗುರುರಾವ ಕೃತ
೨೮. ಉಗಾಭೋಗಗಳು ,,
೨೯. ದಾಸವರ್ಯ ಶ್ರೀ ಕನಕದಾಸರು ಸುಬೋಧ ಗ್ರಂಥಮಾಲಾ
೩೦. ,, ಶ್ರೀ ಪುರಂದರದಾಸರು ,, ,,
೩೧. ಕವಿ ಕನಕದಾಸರು — ಶೇಷಾಚಾರ್ಯ ಕಟ್ಟಿಕೃತ
೩೨. ಶ್ರೀಮಜ್ಜಗನ್ನಾಥರಾಯ ಚರಿತ್ರೆ ಕಲಮದಾಸಿಕೃತ
೩೩. ಭಾಗವತ ಚಾಟುವಿಠಲನಾಥ ಕೃತ
೩೪. ತೊರವೆರಾಮಾಯಣ ಕುಮಾರ ವಾಲ್ಮೀಕಿ ಕೃತ
೩೫. ಭಾರತ ಗದುಗಿನ ವೀರನಾರಾಯಣ ( ಕುಮಾರವ್ಯಾಸ ) ಕೃತ
೩೬. ಜೈಮಿನಿ ಭಾರತ ಲಕ್ಷ್ಮೀಶಕವಿಕೃತ
೩೭. ಉತ್ತರ ರಾಮಾಯಣ ತಿರುಮಲೆ ವೈದ್ಯ ಕೃತ

# ಪರಿಶಿಷ್ಟ ೭

## ಒಪ್ಪೋಲೆ

### ಮುನ್ನುಡಿಯಲ್ಲಿಯ ತಪ್ಪುಒಪ್ಪು

| ಪುಟ | ಗೆರೆ | ತಪ್ಪು | ಒಪ್ಪು |
|---|---|---|---|
| ೧ | ೨೩ | ಸೂರ್ಯರ | ಸೂರ್ಯನ |
| ೩ | ೨೭ | ಅವು | ಅವುಇಲ್ಲ |
| ೪ | ೧೫ | ಸಾತ್ವಿತ | ಸಾತ್ವಿಕ |
| ೬ | ೧ | ಶಲ | ಬಾಲ |
| ೭ | ೧೧ | ಬೇಕಾದವರಿಗೆ | ಬೇಕಾದವರಿಗೆ ಇದನ್ನು |
| ೯ | ೨ | ಲೇಖನಗಳಲ್ಲಿ | ಲೇಖಕರಲ್ಲಿ |
| ,, | ೧೦ | ತುತ್ತಾಗುತ್ತಿವೆ | ತುತ್ತಾಗುತ್ತಿದೆ |
| ,, | ,, | ಅವನ್ನು | ಅದನ್ನು |
| ೧೦ | ೨೧ | ವಿಷಯಗಳಾಗಿ | ವಿಷಯಗಳನ್ನಾಗಿ |
| ೧೧ | ೧೪ | ಪ್ರಸಾರಗುಣ | ಪ್ರಸಾದಗುಣ |
| ೧೨ | ೧೦ | ತೆರೆದಿಟ್ಟು | ತೆರೆದಿಟ್ಟ |
| ೧೩ | ೨ | ಸಾಗರದಲ್ಲಿದ್ದ | ಸಾಗರದಲ್ಲೆದ್ದ |
| ೧೫ | ೩ | ಆದ್ಯ | ಅಲ್ಪ |
| ,, | ೮ | ಎಳೆಮೊಗ್ಗು-ಹೂಗಳನ್ನು | ಎಳೆಮೊಗ್ಗುಹೂಗಳನ್ನು |

## ಮೂಲಗ್ರಂಥದ ಒಪ್ಪೋಲೆ

**ಟೀಪು:— ಅವಶ್ಯವೆಂದು ತೋರಿದಲ್ಲಿ ಮಾತ್ರ ತಿದ್ದಿದೆ.**

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧೮ | ೨೪ | ಕೀರ್ತನೆಯ | ಕೀರ್ತನೆಯೆ |
| ,, | ೨೫ | ಸಿದ್ಧಿ | ಸಿದ್ಧ |
| ೧೯ | ೧ | ಹರಿಚರಣರ | ಹರಿಶರಣರ |

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೨೪ | ೧೦ | ರೂಪ | ರೂಪಕ |
| ೨೭ | ೧೨ | ನೆನೆದೆ | ನೆನೆಯದೆ |
| ೩೬ | ೯ | ಪಾಪಿಗಳು | ಪಾಪಗಳು |
| ೪೦ | ೪ | ಪರಿಗತಿಗಿದು | ಪರಗತಿಗಿದು |
| ,, | ೧೫ | — | ೫೧ ಅ. |
| ೪೮ | ೧೧ | ಕೋಟೆಗಳನ್ನು | ಕೋಟಿಗಳನ್ನು |
| ,, | ೨೭ | ಸತಿಗನ್ಯ | ಸತಿಅನ್ಯರರಸುವಂತೆ |
| ೭೯ | ೪ | ಅಲ್ಲಲ್ಲಬ್ಬದ | ಅಲ್ಲಲ್ಲಬ್ಬಿದ |
| ೮೧ | ೬ | ಮಾರ | ಮರ |
| ೯೩ | ೭ | ಸೂತ್ರದಾರ | ಸೂತ್ರಧಾರ |
| ೯೪ | ೧೬ | ಸಾರರ | ಸಾರಿರೆ |
| ೯೫ | ೧೩ | ಓಮ್ಮೆ | ಒಮ್ಮೆ |
| ೯೭ | ೨೦ | ಉಸುರೆ | ಉಸುರ |
| ೧೦೦ | ೨೫ | ಶ್ರುತಿ್ | ಶ್ರುತಿ |
| ೧೦೧ | ೧೪ | ಪರಸಿ | ಹರಿಸಿ |
| ೧೦೩ | ೪ | ನಾಲಿಗೆ | ನಲಿಗೆ |
| ೩೭ | ೧೫ | ಸಂತತಿ | ಸಂತತ |
| ೭೯ | ೧೦ | ಈಕ್ಷಣ | ಈಶಣ |
| ೧೦೩ | ೧೨ | ಉದ್ದಾ ಮಡಿ | ಉದ್ದ ವಾಡಿ |
| ೧೦೭ | ೮ | ಮನ್ನವನ | ಮೂನ್ನವನ |
| ೧೦೭ | ೧೮ | ಪ್ರಣಾರ್ತಿಪರ | ಪ್ರಣತಾರ್ತಿಹರ |
| ೧೦೯ | ೫ | ಬಿರಿದಸಂಪ | ಬಿರಿದಿಸಿಂದ |
| ೧೧೭ | ೭ | ಸತಿಭಾವ | ಸತಿಪತಿಭಾವ |
| ೧೧೮ | ೫ | ಭಾವದಲ್ಲಿಯು | ಭಾವದಲ್ಲಿ |
| ,, | ೧೧ | ಮಧುರವಾದ ಪರಮಾವಧಿಯು | ಮಧುರಭಾವವು |
| ೧೨೦ | ೨೫ | ಬಾಕಿ | ಬಾರಿ |
| ೧೨೯ | ೯ | ಗಳಲ್ಲಿಯೂ | ಗಳೆಲ್ಲವೂ |
| ೧೩೫ | ೪ | ಅರ್ಪಿಸಿದ | ಅರ್ಪಿಸದ |
| ೧೪೩ | ೨೧ | ವಾ | ವಾಸ |
| ,, | ೨೨ | ನೇತಿಯನ್ನು | ನೆಲೆಯನ್ನು |
| ೧೪೮ | ೪ | ತಿರುಗರೇನೊ | ತಿರುಗಲೇನೋ |

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧೪೯ | ೯ | ಕರಿಭಂಗ | ಕರಿಭಯ |
| ೧೫೮ | ೭ | ಬದ್ಧನೆಗೆ | ಬದ್ಧಸಿಗೆ |
| ೧೮೧ | ೧ | ೨೩ | ೨೪ |
| ,, | ೧೧ | ಪ್ರ. ವ್ಯಾಖ್ಯೈಕಪ್ರ- | ಪ್ರ-ವ್ಯಾಖ್ಯೈಕ |
| ೧೮೩ | ೨೩ | ಫಕ್ತಿಪರವಾಗಿ | ಭಕ್ತಿಪರವಶರಾಗಿ |
| ೧೮೪ | ೧೯ | ಶರಣನೆಸಿಸಿದವಗೆ | ಶರಣನೆನಸದವಗೆ |
| ೧೮೭ | ೧೩ | ಕವಿವಿರೀಡಿತ | ಕಪಿಭಿರೀಡಿತ |
| ,, | ೧೫ | ಹಿರಣ್ಯಗಬ್ಯಾ | ಹಿರಣ್ಯಗರ್ಭಾ |
| ೧೪೬ | ೨೩ | ತಿಳಿಯಾದೆ | ತಿಳಿಯೋದೆ |
| ೧೮೯ | ೧೩ | ಅಪೇಕ್ಷಿಸಿದೆ | ಅಪೇಕ್ಷಿಸದೆ |
| ೧೯೨ | ೩ | ಫಲವಿದ್ದು | ಫಲವಿದು |
| ,, | ೧೨ | ವಾಸನಗಳನು | ವಾಸನೆಗಳನು |
| ೧೯೩ | ೧ | ನಿರುಪ | ಸಿರುತ |
| ,, | ೧೪ | ತಿಪ್ಪುರೆ | ತಿಪ್ಪುದೆ |
| ೧೯೫ | ೧ | ವನಗಿರಿಸಿಢ | ವನಗಿರಿಸಡ |
| ೧೯೬ | ೩ | ಇಪ್ಪತ್ತಮೂರು | ಇಪ್ಪತ್ತನಾಲ್ಕು |
| ೧೯೯ | ೮ | ಜ್ಯೋತಿವ್ರ್ಯಯ | ಜ್ಯೋತೀರ್ಮಯ |
| ೧೯೯ | ೧೨ | ರಾವ್ರು | ರಾವು |
| ,, | ೧೩ | ಶೀದರ್ಭ | ಶ್ರೀದರ್ಭ |
| ೨೦೭ | ೧೧ | ವಾಸುವೆಯ | ವಾಸುದೇವ |
| ,, | ೨ | ಲಿಂಗಾಗದ | ಲಿಂಗಾಂಗದ |
| ೨೧೫ | ೧೯ | ಹಂಗಿಲ್ಲದವರು | ಹರಿಗಲ್ಲದವರು |
| ೨೧೯ | ೧೮ | ಸಾಗರ | ನಾಗರ |
| ೨೪೨ | ೧೬ | ಘೋರತರ | ಘೋರತಪ |
| ೨೪೩ | ೭ | ಭಾರಿ | ಬಾರಿ |
| ,, | ೧೨ | ,, | ,, |

